# ಭಾಷಣಗಳು

ಮತ್ತು

# ಲೇಖನಗಳು

ಸಂಪುಟ ೧

ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

ಪ್ರಕಾಶಕರು
ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ
ಮೈಸೂರು

ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ—೧೧

# ಭಾಷಣಗಳು ಮತ್ತು ಲೇಖನಗಳು

## ಸಂಪುಟ ೧

ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

ಪ್ರಕಾಶಕರು
ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ
ಮೈಸೂರು

ಸಂಪಾದಕರು ಮತ್ತು ಪ್ರಕಾಶಕರು
ಟಿ. ಎಸ್. ರಾಮರಾವ್ ಬಿ. ಎ. (ಆನರ್ಸ್)
ಎಚ್. ಎಂ. ಶಂಕರನಾರಾಯಣರಾವ್ ಎಂ.ಎ.
ಡಿ. ವಿ. ಶೇಷಗಿರಿರಾವ್ ಬಿ.ಎ.

ಮೊದಲ ಮುದ್ರಣ



ಬೆಲೆ ಮೂರು ರೂಪಾಯಿ

ಅಚ್ಚುಮಾಡಿದವರು
ಜಿ. ಎಚ್. ರಾಮರಾವ್ ಬಿ.ಎಸ್ಸಿ.
ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್
ಮೈಸೂರು

# ಅರಿಕೆ

ಯಾವ ಪುಣ್ಯಶ್ಲೋಕರ ಹೆಸರನ್ನು ಮುಂದಿಟ್ಟುಕೊಂಡು ಈ ಸಾಹಿತ್ಯ ಸೇವೆಗೆ ಹೊರಟಿದ್ದೇವೆಯೋ, ಆ ದಿವಂಗತ ವೆಂಕಣ್ಣಯ್ಯನವರ ಜೀವದ ಗೆಳೆಯರು ಪ್ರೊ|| ಎ. ಆರ್. ಕೃಷ್ಣಶಾಸ್ತ್ರಿಗಳು. ಹೊಸ ಸಾಹಿತ್ಯದ ನಿರ್ಮಾಣ ಕಾರ್ಯದಲ್ಲಿ ಈ ಇಬ್ಬರು ಮಹನೀಯರು ಜೊತೆ ಜೊತೆಯಾಗಿ ದುಡಿದವರು. ಇವರು ಒಟ್ಟಿಗೆ ಕಲೆತಾಗ ಆಡುತ್ತಿದ್ದ ಮಾತುಗಳು, ಆಲೋಚಿಸುತ್ತಿದ್ದ ಭಾವನೆಗಳು, ಮಾಡುತ್ತಿದ್ದ ಕೆಲಸಗಳು ಎಷ್ಟು ಘನವಾಗಿ ಬೆಳಗುತ್ತಿದ್ದುವೋ, ಅಷ್ಟೇ ಸೌಹಾರ್ದದಿಂದ ಸುವಾಸಿತವಾಗಿರುತ್ತಿದ್ದುವು. ಆ ಪ್ರೇಮ, ಆ ಸ್ನೇಹ, ಆ ಸೌಹಾರ್ದಗಳನ್ನು ಇನ್ನೆಲ್ಲಿ ಕಾಣೋಣ! ಕನ್ನಡಿಗರ ದುರ್ದೈವದಿಂದ ಅಕಾಲದಲ್ಲಿ ಕಣ್ಮರೆಯಾದ ದಿವಂಗತ ವೆಂಕಣ್ಣಯ್ಯನವರಿಗೆ ಅವರ ಗೆಳೆಯರಾದ ಪ್ರೊ|| ಕೃಷ್ಣಶಾಸ್ತ್ರಿಗಳು ನೀಡುತ್ತಿರುವ ಸ್ನೇಹದ ಕಾಣಿಕೆ ಈ ಪುಸ್ತಕ— **ಭಾಷಣಗಳು ಮತ್ತು ಲೇಖನಗಳು**.

ತಮ್ಮ ಈ ಗ್ರಂಥವನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಅನುಮತಿ ಕೊಟ್ಟು ಪ್ರೊ|| ಕೃಷ್ಣಶಾಸ್ತ್ರಿಗಳು ಮಹೋಪಕಾರ ಮಾಡಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಯನ್ನು ಸೂಚಿಸುವುದು ನಮ್ಮ ಕರ್ತವ್ಯವಾದರೂ ನಮ್ಮ ನಾಲಗೆಯ ಮೇಲಿನ ಕಡಿವಾಣವನ್ನು ಹೆಚ್ಚು ಸಡಿಲಿಸಲು ಭಯವಾಗುತ್ತದೆ. ಅವರು ನಮ್ಮ ವಿದ್ಯಾಗುರುಗಳು ಎಂಬ ಭಯವಲ್ಲ; ಅವರ ಔದಾರ್ಯ ನಮ್ಮನ್ನು ಅವರ ಆತ್ಮೀಯರನ್ನಾಗಿ ಮಾಡಿಕೊಂಡಿದೆ.

ಶ್ರೀಮಾನ್ ಶಾಸ್ತ್ರಿಗಳು ಖಂಡಿತವಾದಿಗಳು. ಅವರ ಈ ಗುಣ ಅವರ ಬರವಣಿಗೆಯಲ್ಲಿ ಸ್ಪಷ್ಟವಾಗಿ ಒಡಮೂಡಿದೆ. ಲೋಕವಿರೋಧಕ್ಕೆ ಹೆದರಿ ಸತ್ಯಕ್ಕೆ ಚ್ಯುತಿ ತರುವುದು ಅವರ ಚೇತನಕ್ಕೆ ಆಗದ ಮಾತು. ಅವರ ಮಾತು ಸರಳ; ಆದರೆ ಹರಿತ. ಭಾವದ ಭಾರವಿದ್ದರೂ ಬಳುಕುವ ಅವರ ಶೈಲಿ ತನ್ನದೇ ಆದ ಒಂದು ವೈಶಿಷ್ಟ್ಯದಿಂದ ಕಂಗೊಳಿಸುತ್ತದೆ. ಇದನ್ನು ಈ ಗ್ರಂಥದ ಉದ್ದಕ್ಕೂ ಕಾಣಬಹುದಾಗಿದೆ.

ಅವರ ಭಾಷಣ ಲೇಖನಗಳಲ್ಲಿ ಮುಖ್ಯವಾದವುಗಳನ್ನು ಹೀಗೆ ಒಟ್ಟಿಗೆ ಸೇರಿಸಿ ಒಂದೆಡೆ ತರುವ ಭಾಗ್ಯ ನಮಗೆ ದೊರೆತುದಕ್ಕಾಗಿ ನಾವು ಅವರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇವೆ.

ಈ ಗ್ರಂಥ—ಭಾಷಣಗಳು ಮತ್ತು ಲೇಖನಗಳು—ಒಂದೇ ಸಂಪುಟವಾಗಿ ಬರಬೇಕಾಗಿತ್ತು. ಆದರೆ ಪುಸ್ತಕ ತುಂಬ ದಪ್ಪವಾದೀತೆಂದು ತೋರಿದ್ದರಿಂದ ಅದನ್ನು ಎರಡಾಗಿ ಒಡೆದಿದೆ. ಪ್ರಬುದ್ಧ ಕರ್ಣಾಟಕದಲ್ಲಿ ಅವರು ಬರೆದಿರುವ ಲೇಖನಗಳನ್ನು ಆಯ್ದು ಎರಡನೆಯ ಸಂಪುಟವಾಗಿ ಪ್ರಕಟಿಸುವವರಾಗಿದ್ದೇವೆ. ಈಗ ಅವರ ಎರಡು ಭಾಷಣಗಳನ್ನು ಮತ್ತು ಇತರ ಲೇಖನಗಳನ್ನು ಮೊದಲನೆಯ ಸಂಪುಟವಾಗಿ ಪ್ರಕಟಿಸಿದ್ದೇವೆ. ಎರಡನೆಯ ಸಂಪುಟ ಅಚ್ಚಾಗುತ್ತಿದೆ.

ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಶ್ರೀಮಾನ್ ಜಿ. ಎಚ್. ರಾಮರಾಯರಿಗೆ ನಮ್ಮ ಕೃತಜ್ಞತೆ ಸಲ್ಲಬೇಕು.

ಮೈಸೂರು
೧೩, ಮೇ ೧೯೬೮

**ತ. ಸು. ಶಾಮರಾಯ**
ಪ್ರಧಾನ ಸಂಪಾದಕ

# ಮುನ್ನುಡಿ

ನನ್ನ ಶಿಷ್ಯರೂ ಇಷ್ಟಮಿತ್ರರೂ ಆದ ಚಿ॥ ರಾ॥ ಶಾಮರಾಯರು ಮತ್ತು ಶಂಕರನಾರಾಯಣರಾಯರು ತಾವು ಆರಂಭಿಸಿದ ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆಗೆ ನನ್ನದೊಂದು ಪುಸ್ತಕವನ್ನು ಕೊಡಬೇಕೆಂದು ಕೇಳಿದಾಗ ಅಂಥ ಪುಸ್ತಕವಾವುದೂ ನನ್ನಲ್ಲಿಲ್ಲವೆಂದು ಹೇಳಿದೆ. ಅದು ನಿಜವಾದ ಮಾತು. ಆದರೆ ಅವರು ಅಲ್ಲಿಗೆ ಬಿಡಲಿಲ್ಲ. ಮತ್ತೆ ಮತ್ತೆ ಒತ್ತಾಯಪಡಿಸಿದರು; ತಮ್ಮ ಗ್ರಂಥಮಾಲೆಗೆ ಅದರಿಂದ ಶ್ರೇಯಸ್ಸು ಉಂಟಾಗುವುದೆಂದು ನಂಬಿರುವುದಾಗಿ ಹೇಳಿದರು. ಅದು ನಿಜವಾಗಬಲ್ಲ ಸಂಗತಿ ಹೌದೋ ಅಲ್ಲವೋ!

ವೆಂಕಣ್ಣಯ್ಯನವರ ಗೆಳೆತನಕ್ಕೂ ವಿದ್ವತ್ತಿಗೂ ಅನುರೂಪವಾದ ಒಂದು ಗ್ರಂಥವನ್ನು ಹೊಸದಾಗಿ ಬರೆದು ಕೊಡೋಣವೇ ಎಂದು ಯೋಚಿಸಿದೆ. ಆದರೆ ಬರವಣಿಗೆ ಎಂದರೆ ಮನಸ್ಸು ಹಿಂತೆಗೆಯುತ್ತದೆ. ಬರೆದದ್ದನ್ನು ಪ್ರಕಟಿಸಬೇಕೆಂದರೂ ಹೀಗೆಯೇ. ಇದುವರೆಗೆ ನಾನು ಬರೆದು ಪ್ರಕಟವಾಗಿರುವ ನಾಲ್ಕು ಪಂಕ್ತಿಗಳು ನಾನಾ ನಿರ್ಬಂಧಗಳಿಗೆ ಸಿಕ್ಕಿ ಬರೆದು ಪ್ರಕಟಿಸಿದವು—ಸಂತೆಯ ಹೊತ್ತಿಗೆ ಮೂರು ಮೊಳ ನೆಯ್ದುವು ಎಂದು ಬೇಕಾದರೂ ಹೇಳಬಹುದು. ಅಂಥವರಲ್ಲಿ, ಎಲ್ಲಾ ನಿರ್ಬಂಧದ ಸಂಕೋಲೆಗಳನ್ನೂ ಕಳಚಿಕೊಂಡು ನಿರಾಳವಾಗಿ ಕುಳಿತಿರುವ ನಾನು ಈಗ ಕ್ಲುಪ್ತ ಕಾಲದಲ್ಲಿ ಅಂಥ ಗ್ರಂಥ ಬರೆದು ಒದಗಿಸಿಯೇನೇ, ಬರೆಯುವುದಾದರೂ ಸಾಧ್ಯವಾದೀತೇ ಎಂದು ಸಂದೇಹ ಹುಟ್ಟಿತು. ಈ ಮಧ್ಯೆ ಸಂಪಾದಕರು ನನ್ನ ಭಾಷಣಗಳನ್ನೂ ಪ್ರಬಂಧಗಳನ್ನೂ ಒಟ್ಟುಗೂಡಿಸಿ ಒಂದು ಸಂಪುಟವಾಗಿ ಏಕೆ ಅಚ್ಚು ಹಾಕಿಸಬಾರದೆಂದು ಸೂಚಿಸಿದರು. ನನಗೆ ಅದರಲ್ಲೇನೂ ಉತ್ಸಾಹ ಹುಟ್ಟಲಿಲ್ಲ. ಆದರೆ ಈಚೆಗೆ ಕೆಲವು ಸಂದರ್ಭಗಳಲ್ಲಿ ನನಗೆ ಒಂದು ಸಂಗತಿ ಅನುಭವಕ್ಕೆ ಬಂದಿತ್ತು. ನಾನು "ಪ್ರಬುದ್ಧ ಕರ್ಣಾಟಕ"ಕ್ಕೆ ಬರೆದ ಲೇಖನಗಳಲ್ಲಿ ಕೆಲವು ಸುಮಾರು ಮೂವತ್ತು ವರ್ಷ ಹಿಂದಿನವು. ಅವುಗಳಲ್ಲಿ

ಯಾವುವನ್ನಾದರೂ ನಮ್ಮ ಹುಡುಗರಿಗೆ ನಾನು ನಿರ್ದೇಶಿಸಿದಾಗ, ಅಥವಾ ಅವರು ಅಪೇಕ್ಷಿಸಿದಾಗ, ಅವುಗಳನ್ನು ದೊರಕಿಸಿಕೊಳ್ಳುವುದೇ ಕಷ್ಟವಾಗುತ್ತಿತ್ತು. ಏಕೆಂದರೆ "ಪ್ರಬುದ್ಧ ಕರ್ಣಾಟಕ"ದ ಎಲ್ಲಾ ಸಂಪುಟಗಳೂ—ಅದರಲ್ಲಿಯೂ ಮೊದಮೊದಲು ವರ್ಷದ ಕೆಲವು ಸಂಪುಟಗಳು—ಈಗ ಒಟ್ಟಿಗೆ ಎಲ್ಲಿಯೂ ದೊರೆಯುವುದಿಲ್ಲ. ನನ್ನಲ್ಲಿಯೇ ಇಲ್ಲ. ಆದ್ದರಿಂದ ಇವುಗಳನ್ನು ಕಲೆಹಾಕಿ ಒಂದು ಪುಸ್ತಕ ಮಾಡುವುದು ಅಯುಕ್ತವಾಗಲಾರದೆನಿಸಿತು. ವೆಂಕಣ್ಣಯ್ಯನವರ ನೆನಪಾಗಿ ಇದನ್ನು ಪ್ರಕಟಿಸುವುದರಲ್ಲಿ ಒಂದು ಔಚಿತ್ಯವೂ ಇತ್ತು. ನನ್ನ ಅವರ ಸ್ನೇಹ ಆರಂಭವಾದದ್ದು ಇಬ್ಬರೂ ಮೈಸೂರಲ್ಲಿ ವಿದ್ಯಾರ್ಥಿಗಳಾಗಿದ್ದಾಗಲೇ (೧೯೦೪) ಆದರೂ, ನಮ್ಮಿಬ್ಬರ ಜೀವನ ಯಮುನಾ ನದಿಯಾಗಿ ತುಂಬಿ ಹರಿಯತೊಡಗಿದ್ದು ಅವರೂ ನಾನೂ ಬೆಂಗಳೂರಲ್ಲಿ ಉಪಾಧ್ಯಾಯರಾಗಿ ಮತ್ತೆ ಕೂಡಿದಾಗಿನಿಂದ (೧೯೧೮). ಪ್ರಬುದ್ಧ ಕರ್ಣಾಟಕವು ಹುಟ್ಟಿದ್ದು ಆಮೇಲೆ. ಇದರ ಹುಟ್ಟು ಬೆಳವಣಿಗೆಗಳನ್ನು ಒಂದು ಪ್ರತ್ಯೇಕ ಲೇಖನದಲ್ಲಿಯೇ ವಿವರಿಸಿದೆ. (ಎರಡನೆಯ ಸಂಪುಟದಲ್ಲಿ ಮೊದಲನೆಯ ಲೇಖನ.) ಅದರ ನೊಗ ಬಹುದೂರ, ಬಹುಕಾಲ, ನಮ್ಮಿಬ್ಬರ ಮೇಲೂ ಬಿದ್ದಿತ್ತು. ನಾನೇ ಬರೆಯುವುದಕ್ಕೆ ಹಿಂತೆಗೆಯುತ್ತಿದ್ದರೆ ನನಗಿಂತ ಹಿಂತೆಗೆಯುತ್ತಿದ್ದರು ಅವರು. "ನೀನು ಧಾರಾಳವಾಗಿ ಬರೆಯುತ್ತೀಯೆ; ನಿನ್ನ ಲೇಖಣಿಯ ಹಾಗೆ ಓಡುವುದಿಲ್ಲ ನನ್ನ ಲೇಖಣಿ; ನಾನು ಸುಮ್ಮನೆ ಅಗೆಯಬೇಕು" ಎನ್ನುತ್ತಿದ್ದರು. ನಾನು "ನನ್ನ ಸಂಕಟ ನಾನೇ ಬಲ್ಲೆ: ವಿಧಿಯಿಲ್ಲದೆ ಬರೆಯಬೇಕಾದರೆ, ಹೊತ್ತಿಗೆ ಸರಿಯಾಗಿ ಬರೆಯಬೇಕಾದ ನಿರ್ಬಂಧಕ್ಕೆ ಸಿಕ್ಕಿದರೆ, ಯಾರಾದರೂ ನನ್ನ ಹಾಗೇ ಬರೆಯುತ್ತಾರೆ. ನಿನಗೆ ಅಂಥ ನಿರ್ಬಂಧ ಯಾವುದೂ ಇಲ್ಲ. ಆದ್ದರಿಂದ ಆತುರದಲ್ಲಿ ನಾನು ಕೈಗೆ ಸಿಕ್ಕಿದ್ದನ್ನು ತಂದು ತಂದು ಗುಡ್ಡೆಹಾಕುತ್ತೇನೆ. ನೀನು ಅಗೆದು ಅಗೆದು ಚಿನ್ನದ ಗಟ್ಟಿಗಳನ್ನು ತೆಗೆಯುತ್ತೀಯೆ. ಇವೆರಡರಲ್ಲಿ ಯಾವುದು ವಾಸಿ?" ಎಂದು ನಾನು ಉತ್ತರ ಕೊಡುತ್ತಿದ್ದೆ. (ಈ ಸಂಗತಿಯಲ್ಲಿ ಮಾತನಾಡಲು ಅವರಿಗೆ ಮತ್ತೊಬ್ಬರು ಇರಲಿಲ್ಲ. ನನಗೂ ಇರಲಿಲ್ಲ—ಈಗಂತು ಇಲ್ಲವೇ ಇಲ್ಲ.) ಒಟ್ಟಿನಲ್ಲಿ ನನ್ನ ಬರವಣಿಗೆ ಎಂದರೆ

ಅವರಿಗೆ ವಿಶ್ವಾಸ. ಅದು ಆಪ್ತಮಿತ್ರರೊಬ್ಬರ ಅಂಧ ಪಕ್ಷಪಾತವೇ ಆಗಿದ್ದಿರಲಿ! ಅದು ಪ್ರಕೃತವಲ್ಲ. ಅವರಿಗೆ—ಮರೆಯಾಗಿರುವ ಅವರ ಆತ್ಮಕ್ಕೆ—ಈ ಲೇಖನಗಳು ಇಂದಿಗೂ ಪ್ರಿಯವಾಗುವುವೆಂಬುದು ನನ್ನ ಭರವಸೆ. ಅದೇ ನನಗೆ ಬೇಕಾದದ್ದು, ಪ್ರಕೃತವಾದದ್ದು.

"ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ" ಗೆ ಈ ಹೂವೂ—ಹೂವೋ, ಎಲೆಯೋ!—ಸೇರಿ, ಅದನ್ನು ಬೆಳೆಸಲಿ! ಅದರ ಪರಿಮಳವನ್ನೂ ತೂಕವನ್ನೂ ಹೆಚ್ಚಿಸಲಿ!! ವೆಂಕಣ್ಣಯ್ಯನ ಆತ್ಮ ಸಂತೋಷಿಸಲಿ.!!!

ಈ ಸಂಪುಟದಲ್ಲಿ ಎರಡು ಭಾಷಣಗಳೂ ಆರು ಲೇಖನಗಳೂ ಬಂದಿವೆ. ಬರೆದು ಓದಿದ್ದರಿಂದ ಆ ಎರಡು ಭಾಷಣಗಳೂ ಲೇಖನಗಳೇಯೆ; ಮಾತು ಬರವಣಿಗೆಗೆ ಇಳಿದರೆ, ನಿಲ್ಲುತ್ತದೆ. ಖಚಿತವಾಗುತ್ತದೆ. ಇಲ್ಲದಿದ್ದರೆ, ಅನೇಕವೇಳೆ, ಮೋಡಮೋಡವಾಗಿ ತುಂಡು ತುಂಡಾಗಿ ಗಾಳಿಗೆ ಹೋಗಿಬಿಡುತ್ತದೆ.—"ಛಿನ್ನಾಭ್ರಮಿವ ನಶ್ಯತಿ."

ಸಾಹಿತ್ಯಸಮ್ಮೇಳನದ ಅಧ್ಯಕ್ಷಭಾಷಣದಲ್ಲಿ ನಾನು ಕನ್ನಡಕ್ಕೆ ಪ್ರಾಧಾನ್ಯಕೊಡಬೇಕೆಂದೂ ಇಂಗ್ಲಿಷ್ ಸಂಸ್ಕೃತಗಳನ್ನು ಬಿಡಬಾರದೆಂದೂ ಹಿಂದಿಯನ್ನು ಸ್ವಲ್ಪ ಹಿಂದೆ ಇಡುವುದು ಒಳ್ಳೆಯದೆಂದೂ ಸೂಚಿಸಿದೆ. ಕೂಡಲೆ, ಈ ಅಭಿಪ್ರಾಯದ ಒಂದೊಂದು ಭಾಗಕ್ಕೂ ಪತ್ರಿಕೆಗಳಲ್ಲಿ ಪ್ರಬಲವಾದ ವಿರೋಧ ಕೇಳಿಬಂತು. ಕನ್ನಡ ಪತ್ರಿಕೆಗಳಿಗೆ, ಅವು ಪ್ರತಿನಿಧಿಗಳಾಗುವಷ್ಟು ಮಟ್ಟಿಗೆ ಕನ್ನಡಿಗರಿಗೆ, ಕನ್ನಡವೇ ಭೇದಪ್ರೋತ್ಸಾಹಿಸುವಷ್ಟು ಕೋಲಾಹಲವೆದ್ದಿತು. ರಾಷ್ಟ್ರಾಭಿಮಾನದ ಅತ್ಯುತ್ಸಾಹದ ಉಬ್ಬಿನಲ್ಲಿ, ಇಂಗ್ಲಿಷನ್ನು ಪೂರ್ತಿಯಾಗಿ ದೇಶಬಿಟ್ಟೋಡಿಸಿಬಿಡಬೇಕು, ಹಿಂದಿಯನ್ನು ತುಂಬಿಕೊಳ್ಳಬೇಕು ಎಂಬ ಭಾವವೇ ಪ್ರಬಲವಾಗಿತ್ತು. ಆದರಂತೆ, ಸ್ವಾತಂತ್ರ್ಯ ಬಂದ ಸ್ವಲ್ಪಕಾಲದಲ್ಲಿಯೇ ಇಂಗ್ಲಿಷ್ ಆಳಿಸಿಹೋಗಿ, ಕನ್ನಡ ಮೂಲೆಗೆ ಬಿದ್ದು, ಹಿಂದಿ ತಾನೇ ತಾನಾಗಿ ಬಿಡುವುದೇನೋ ಎಂಬ ಹೆದರಿಕೆಯುಂಟಾಗಿತ್ತು. ಆದರೆ ಈಗ, ಕೇಂದ್ರ ಸರ್ಕಾರದ ನೀತಿ ಪ್ರಾಂತೀಯ ಅತ್ಯುತ್ಸಾಹಿಗಳ, ಹಿಂದೀ ಪ್ರಚಾರಕರ, ನೀತಿಯಂತೆ ಉಗ್ರವಾಗಿಲ್ಲ ಎಂದು ತಿಳಿದು ಮನಸ್ಸಿಗೆ

ಸ್ವಲ್ಪ ಸಮಾಧಾನವಾಗುವಂತಿದೆ. ಉರ್ದು ಮಾತೃಭಾಷೆಯಾಗಿರುವ ವೃದ್ಧ ವಿದ್ಯಾಮಂತ್ರಿಗಳೇ ಇಂಗ್ಲಿಷ್ ಇನ್ನೂ ಸ್ವಲ್ಪದಿನ ಇರಲಿ, ಅಂತರ ರಾಷ್ಟ್ರೀಯ ಬೆಲೆಯಿಂದ ನಮ್ಮ ಶಿಕ್ಷಣದಲ್ಲಿ ಅದಕ್ಕೂ ಒಂದು ಸ್ಥಾನವಿರಲಿ, ಆದರೆ ಅದು ಶಿಕ್ಷಣ ಮಾಧ್ಯಮವಾಗಿರುವುದು ಇನ್ನು ಐದು ವರ್ಷಗಳಲ್ಲಿ ನಿಂತು ಭಾರತೀಯ ಭಾಷಾಮಾಧ್ಯಮಕ್ಕೆ ಸ್ಥಳ ಬಿಟ್ಟು ಕೊಡಬೇಕು. ಇಂಡಿಯದ ಹಲವು ಪ್ರಾಂತಭಾಷೆಗಳು ಈ ಸ್ಥಾನಕ್ಕೆ ಬರಲು ಸಮರ್ಥವಾಗಿವೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಸರ್ಕಾರವು ನಿಯಮಿಸಿದ ಶಿಕ್ಷಣಮಾಧ್ಯಮ ಮತ್ತು ಪರೀಕ್ಷಾಪರಿಶೀಲನ ಸಮಿತಿಯು– ಪ್ರಾಂತಭಾಷೆಯೇ ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣಮಾಧ್ಯಮವಾಗಿರಬೇಕು; ರಾಷ್ಟ್ರಭಾಷೆಯೇನೊ ಪ್ರತಿಯೊಬ್ಬ ವಿದ್ಯಾರ್ಥಿಗೂ ಬರಬೇಕಾದದ್ದೇ; ಅದರಲ್ಲಿ ಸಣ್ಣ ಪರೀಕ್ಷೆಯೊಂದು (test) ನಡೆಯಬೇಕು; ಆದರೆ ಅದರ ಫಲಾಫಲಗಳು ಮುಂದಿನ ಓದಿಗೆ ಅನುಕೂಲ ಪ್ರತಿಕೂಲಗಳಾಗಬಾರದು; ಅದಕ್ಕೆ ಪ್ರತಿಯೊಂದು ವಿಶ್ವವಿದ್ಯಾಲಯದ ವ್ಯಾಸಂಗ ಕ್ರಮದಲ್ಲಿಯೂ ಐಚ್ಛಿಕವಾದ ಸ್ಥಾನ ಇರಬೇಕು; ಕೇಂದ್ರಸರ್ಕಾರವು ನಡಸುವ ಪರೀಕ್ಷೆಗಳೂ ಪ್ರಾಂತೀಯ ಭಾಷೆಗಳಲ್ಲಿಯೇ ನಡೆಯಬೇಕು; ಆದರೆ ಪರೀಕ್ಷ್ಯರು ರಾಷ್ಟ್ರಭಾಷೆಯ ಪರಿಚಯ ಪಡೆದು ಅದರಲ್ಲಿ ಪರೀಕ್ಷೆ ಕೊಡಬೇಕು; ಇಂಗ್ಲಿಷ್ ನಿರ್ಬಂಧವಾಗಿ ಇರಬೇಕು; ರಾಷ್ಟ್ರಭಾಷೆ ಯಾವುದೆಂಬುದನ್ನು ರಾಜ್ಯಾಂಗ ಸಮಿತಿಯೇ ನಿಶ್ಚಯಿಸಲಿ ಎಂದು ಮುಂತಾಗಿ ನಿರ್ಣಯಿಸಿದ್ದಾರೆ. ಇದರಮೇಲೆ ಸರ್ಕಾರ ಏನು ಆಜ್ಞೆ ಹೊರಡಿಸುವುದೋ, ಆಚರಣೆಯಲ್ಲಿ ಅದು ಯಾವ ರೂಪಕ್ಕೆ ತಿರುಗುವುದೋ ನೋಡಬೇಕಾಗಿದೆ. ಅಂತು, ಇನ್ನುಮೇಲೆ ಪ್ರಾಂತ ಭಾಷೆಗೆ ಪ್ರಾಧಾನ್ಯ ಬರುವುದರಲ್ಲಿ ಸಂದೇಹ ಕಾಣುವುದಿಲ್ಲ. ಇದು ಸಂತೋಷದ ವಿಷಯ.

ಈ ಮಧ್ಯೆ ಕಾಶಿಯ ಹಿಂದೂ ವಿಶ್ವವಿದ್ಯಾನಿಲಯದ ಸ್ಥಾನಪತಿಗಳಾದ ಡಾ|| ಅಮರನಾಥ ಝಾ ಅವರು ಹಿಂದಿಯ ಉತ್ಸಾಹಿಗಳಿಗೆ ಎಚ್ಚರಿಕೆ ಕೊಟ್ಟು, ಅವರು ಸ್ವಲ್ಪ ನಿಧಾನವಾಗಿ ಮುಂದುವರಿಯಬೇಕೆಂದೂ, ಈ ವಿಚಾರದಲ್ಲಿ ಎಚ್ಚರಿಕೆ ತೆಗೆದುಕೊಳ್ಳದಿದ್ದರೆ ಇಂಡಿಯ

ದಲ್ಲಿ ಈಚಿಗೆ ಆದ ವಿಭಜನೆಗಿಂತ ಇನ್ನೂ ಹೆಚ್ಚು ಅನರ್ಥಕಾರಿಯಾದ ವಿಭಜನೆಯುಂಟಾದೀತೆಂದೂ, ತಮಿಳು ತೆಲುಗುಗಳಂಥ ಪ್ರಾಚೀನ ಭಾಷೆಗಳು ನಿನ್ನೆ ಮೊನ್ನೆ ಹುಟ್ಟಿ ಮುಂದಕ್ಕೆ ನುಗ್ಗುತ್ತಿರುವ ಹಿಂದಿಗೆ ತಟ್ಟನೆ ತಲೆಬಾಗುವುವೆಂದು ನಿರೀಕ್ಷಿಸಲಾಗದೆಂದೂ, ಬಲಾತ್ಕಾರಪಡಿಸಿದರೆ ಪ್ರತಿಕೂಲ ಪರಿಣಾಮ ಉಂಟಾಗುವುದೆಂದೂ ಹೇಳಿದ್ದಾರೆ. ಎಲ್ಲೆಲ್ಲೂ ಮೇಲೆ ಬಿದ್ದು ಹಟ ಹಿಡಿದು ಕಾರ್ಯಸಾಧನೆಮಾಡಿಕೊಳ್ಳುವ ಹಿಂದೀ ಪಕ್ಷಪಾತಿಗಳ ಮನೋವೃತ್ತಿಯನ್ನು, ಕಾಶಿಯ ಡಾ॥ ಸಿ. ಎನ್. ಮೆನನ್ ಅವರು ಬಯಲಿಗೆ ಎಳೆದು ಖಂಡಿಸಿದ್ದಾರೆ*

---

* "Dr. C. N. Menon, while introducing Dr. Jha, spoke about the aggressive and uncompromising attitude of the advocates of Hindi, not merely in the Hindu university, but also in the country.

Dr. Jha who replied in a brilliant and powerful speech, sounded a stern note of warning to those who were in haste to thrust Hindi on the other provinces. He said that, if they did not proceed cautiously, the country would witness another division much more calamitous than the recent one. "You cannot expect an ancient and highly developed language like the Tamil or Telugu to submit to an upstart like Hindi all at once," said Dr. Jha. It would take some time for Hindi to become the national language. Any attempt to force the pace would have an adverse effect.

-- The Hindu, April 5th. 1948.

ಡಾ॥ ಝಾ ಅವರು ಮೈಸೂರಿಗೆ ಬಂದಿದ್ದು ಅವರ ಮತ್ತು ಅದರ ಭಾಷೆಯ ಪರಿಚಯ ಪಡೆದವರು. ಆದರೂ ತೆಲುಗು ತಮಿಳುಗಳ ಜೊತೆಗೆ ಕನ್ನಡವನ್ನು ಸೇರಿಸದಿರುವುದು ಆಶ್ಚರ್ಯ. ಉಪಲಕ್ಷಣವಾಗಿ ಕನ್ನಡವೂ ಸೇರುತ್ತವೆಂದು ಇಟ್ಟುಕೊಳ್ಳೋಣ. ಆದರೂ ಔತ್ತರೇಯರಿಗೂ ಹೊರದೇಶದವರಿಗೂ ದ್ರಾವಿಡ ಭಾಷೆ, ದಕ್ಷಿಣ ದೇಶದ ಭಾಷೆ, ಎಂದರೆ ತಮಿಳು ತೆಲುಗುಗಳು ಮನಸ್ಸಿಗೆ ಬರುತ್ತವೆಯೇ ಹೊರತು ಕನ್ನಡ ಇನ್ನೂ ಬರುತ್ತಿಲ್ಲ. ಇದರಿಂದ ಕನ್ನಡವು—ಎರಡು

ಡಾ|| ಅಮರನಾಥ ಝಾ ಅವರು ಹಿಂದೀ *ಪ್ರಾಂತದಲ್ಲಿ ಹುಟ್ಟಿ ಬೆಳೆದು ಹಿಂದಿಯೇ ಮಾತೃಭಾಷೆಯಾಗಿ ಉಳ್ಳವರು; ಹಿಂದಿಗೆ ಪ್ರಾಧಾನ್ಯವಿರುವ ಹಿಂದೂ ವಿಶ್ವವಿದ್ಯಾನಿಲಯದ ಸ್ಥಾನಪತಿಗಳು. ಇಂಥವರು ಇಂಡಿಯ ಸ್ವಾತಂತ್ರ್ಯ ಪಡೆದ ತರುಣದಲ್ಲಿಯೇ, ಇನ್ನೂ ಅದರ ಕಾವು ಉಕ್ಕು ತಗ್ಗಿ ಕೂಡ ಇಲ್ಲದಿರುವಾಗ, ಈ ಎಚ್ಚರಿಕೆಯನ್ನು ಕೊಟ್ಟಿರಬೇಕಾದರೆ ಅದನ್ನು ಕನ್ನಡಿಗರೂ ಕನ್ನಡ ದೇಶದ ಹಿಂದೀ ಉತ್ಸಾಹಿಗಳೂ ಚೆನ್ನಾಗಿ ಆಲೋಚಿಸಿ ನಡೆದುಕೊಳ್ಳಬೇಕಾಗಿದೆ. ಹಿಂದಿಯನ್ನು ಕಲಿಯಬೇಕಾಗಿಯೇ ಬಂದರೆ ಕಲಿಯೋಣವಂತೆ; ಯಾರಿಗೆ ಎಷ್ಟು ಬೇಕಾಗಬಹುದೋ ಅವರು ಅಷ್ಟು ಕಲಿತೇ ಕಲಿಯುತ್ತಾರೆ. ಇಂಗ್ಲಿಷಿನಂಥ ವಿದೇಶೀ ಭಾಷೆಯನ್ನೇ ಕಲಿಯಲಿಲ್ಲವೇ?

ಈ ಮಧ್ಯೆ ಮೈಸೂರಿನ ರಾಜ್ಯಾಂಗ ಸಭೆಯ ನಡವಳಿಕೆಯು ಮೂಲತಃ ಕನ್ನಡದಲ್ಲಿ ಇರಬೇಕೆಂದೂ, ಹಿಂದಿಗೆ ಅಲ್ಲಿ ಅವಕಾಶಬೇಕಿಲ್ಲವೆಂದೂ ನಿರ್ಣಯವಾಗಿರುವುದು ಕನ್ನಡದ ಮಕ್ಕಳಿಗೆ ಒಂದು ಧೈರ್ಯವನ್ನೂ ಸಂತೋಷವನ್ನೂ ತಂದಿದೆ.

ವೆಂಕಣ್ಣಯ್ಯನವರೂ ನಾನೂ ಜೊತೆಯಾಗಿ ನಡೆದುಕೊಂಡು ಹೋಗುತ್ತಿರುವ ಚಿತ್ರ ನಮ್ಮ ಮಿತ್ರರಾದ ಶ್ರೀಮಾನ್ ಕೋಟ ಶಿವರಾಮ ಕಾರಂತರವರು, ನಾವು ಬಳ್ಳಾರಿಯ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಸೇರಿದ್ದಾಗ, ತೆಗೆದದ್ದು. ನಾವಿಬ್ಬರೇ ಇರುವ ಚಿತ್ರ ಇದೊಂದೇ. ನಾವು ಅರಿಯದಂತೆ ನಮ್ಮನ್ನು ಹಿಡಿದು ಈ ಭಾವಚಿತ್ರವನ್ನು ಸಂಪಾದಿಸಿ ಕೊಟ್ಟಿದ್ದಕ್ಕಾಗಿ ನಾನು ಶ್ರೀಮಾನ್ ಕಾರಂತರವರಿಗೆ ಕೃತಜ್ಞನಾಗಿದ್ದೇನೆ. ನಾನು ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಾಗಿ ಹೈದರಾಬಾದಿಗೆ ಹೋಗಿದ್ದಾಗ, ನಮ್ಮ ಬಿಡಾರದ ಎದುರಿನಲ್ಲಿಯೇ ಇದ್ದ ಭಾವಚಿತ್ರ ಕಲಾಕುಶಲರಾದ ಶ್ರೀಮಾನ್ ಆಳವಂದಿಕರ್ ಅವರು ನನ್ನನ್ನು ಬಹು ಆದರ ಮಾಡಿ ತಮ್ಮ ಚಿತ್ರಗೃಹಕ್ಕೆ ಕರೆದುಕೊಂಡು ಹೋಗಿ, ತುಂಬ

ಕೋಟಿ ಜನ ಆಡುವ ಕನ್ನಡವು—ಇನ್ನೂ ಸಾಕಷ್ಟು ಮಟ್ಟಿಗೆ ಜನರ ಕಣ್ಣು ಕಿವಿಗಳಲ್ಲಿ ಬಿದ್ದಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಶ್ರದ್ಧೆಯಿಂದ ನನ್ನ ಭಾವಚಿತ್ರವನ್ನು ತೆಗೆದು ಅದನ್ನು ವಿಶ್ವಾಸ ಗೌರವಗಳೊಡನೆ ತಂದುಕೊಟ್ಟರು. ಅವರ ಆ ವಿಶ್ವಾಸ ಆದರ ಗೌರವಗಳ ನೆನಪಾಗಿ ಅದನ್ನು ನನ್ನ ಸಮ್ಮೇಳನಾಧ್ಯಕ್ಷ ಭಾಷಣದ ಎದುರಿಗೆ ಪ್ರಕಟಿಸಿಕೊಂಡಿದ್ದೇನೆ.

ಎ. ಆರ್. ಕೃಷ್ಣಶಾಸ್ತ್ರೀ

# ವಿಷಯಾನುಕ್ರಮಣಿಕೆ

ಸಖೇತಿ ಮತ್ವಾ ಪ್ರಸಭಂ ಯದುಕ್ತಂ

ಯಚ್ಚಾವಹಾಸಾರ್ಥಮಸತ್ಕೃತೋಽಸಿ
ವಿಹಾರ ಶಯ್ಯಾಸನ ಭೋಜನೇಷು ।

.. .... ... ... .. . . .. .... ... . .....

ಪಿತೇವ ಪುತ್ರಸ್ಯ ಸಖೇವ ಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಂ ||

# ದಿವಂಗತ
# ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರು

" ಸಂತೋಷಂ ಜನಯೇತ್ ಪ್ರಾಜ್ಞಃ ತದೇವೇಶ್ವರಪೂಜನಂ "

ದಿವಂಗತ ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರ ಹಿರಿಯರು ಮೈಸೂರು ಸಂಸ್ಥಾನದ ಚಿತ್ರದುರ್ಗ ಡಿಸ್ಟ್ರಿಕ್ಟಿನವರು. ಅವರ ತಂದೆಯ ಹೆಸರು ಸುಬ್ಬಣ್ಣನವರು. ತಾಯಿ ಲಕ್ಷ್ಮೀದೇವಮ್ಮನವರು. ಸುಬ್ಬಣ್ಣನವರು ಎತ್ತರವಾದ, ತೆಳುವಾದ, ಆದರೆ ಚಟುವಟಿಕೆಯುಳ್ಳ ಆಳು. ಅವರು ಯಾವ ದೊಡ್ಡ ಪರೀಕ್ಷೆಯನ್ನಾಗಲಿ ಕೊಟ್ಟು ಪದವಿಪಡೆಯದಿದ್ದರೂ ತಕ್ಕಮಟ್ಟಿಗೆ ವಿದ್ಯಾವಂತರಾಗಿದ್ದು, ವ್ಯವಹಾರಜ್ಞರಾಗಿದ್ದರು. ಹತ್ತು ಜನಕ್ಕೆ ಬೇಕಾಗಿದ್ದು, ತಮ್ಮ ಪ್ರಾಂತದಲ್ಲೆಲ್ಲರ ಗೌರವಕ್ಕೂ ಪಾತ್ರರಾಗಿದ್ದರು; ಧರ್ಮ, ದೇವರು, ಆಚಾರಗಳಲ್ಲಿ ಭಕ್ತಿಯುಳ್ಳವರಾಗಿದ್ದರು; ೧೯೧೯ರಲ್ಲಿ, ಸುಮಾರು ತಮ್ಮ ೫೫ನೆಯ ವಯಸ್ಸಿನಲ್ಲಿ ಸ್ವರ್ಗಸ್ಥರಾದರು. ಶ್ರೀಮತಿ ಲಕ್ಷ್ಮೀದೇವಮ್ಮನವರೂ ಪ್ರಾಯಶಃ ಮೇಲಿನ ಗುಣಗಳೆಲ್ಲವನ್ನೂ ಉಳ್ಳವರು; ಅವರು ಚಿಕ್ಕವರಾಗಿದ್ದ ಕಾಲಕ್ಕೆ ಗ್ರಾಮಾಂತರಗಳಲ್ಲಿ ಸ್ತ್ರೀವಿದ್ಯಾಭ್ಯಾಸಕ್ಕೆ ಅವಕಾಶವಿಲ್ಲದಿದ್ದರೂ ಕನ್ನಡ ರಾಮಾಯಣ, ಭಾರತ, ವೆಂಕಟಾಚಾರ್ಯರ ಕಾದಂಬರಿಗಳು ಇವುಗಳನ್ನು ಓದಿ ಅರ್ಥ ಗ್ರಹಿಸಬಲ್ಲ ಸಾಮರ್ಥ್ಯ ಪಡೆದವರು. ಅವರು ಈಗ ವೆಂಕಣ್ಣಯ್ಯನವರ ಮರಣದಿಂದ ಒದಗಿದ ತೀವ್ರ ಪುತ್ರಶೋಕವನ್ನು ಅನುಭವಿಸುತ್ತಿದ್ದಾರೆ.

ವೆಂಕಣ್ಣಯ್ಯನವರ ಒಡಹುಟ್ಟಿದವರು ಎಲ್ಲಾ ಒಟ್ಟು ಹನ್ನೆರಡು ಜನ—ಏಳುಜನ ಅಣ್ಣತಮ್ಮಂದಿರು, ಐದು ಜನ ಅಕ್ಕತಂಗಿಯರು. ವೆಂಕಣ್ಣಯ್ಯನವರೇ ಹಿರಿಯರು. ಅವರು ಹುಟ್ಟಿದ್ದು ಚಿತ್ರದುರ್ಗ ಡಿಸ್ಟ್ರಿಕ್ಟಿನ ಚಳ್ಳಕೆರೆ ತಾಲ್ಲೂಕು ತಳುಕು ಗ್ರಾಮದಲ್ಲಿ; ೧೮೮೫ನೆಯ ಇಸವಿ ಅಕ್ಟೋಬರ್ ಒಂದನೆಯ ತಾರೀಖಿನ ದಿನ. ಅವರು ಲೋವರ್ ಸೆಕೆಂಡರಿ ಪರೀಕ್ಷೆಗೆ ಚಳ್ಳಕೆರೆಯಲ್ಲಿಯೂ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಚಿತ್ರದುರ್ಗದ ಹೈಸ್ಕೂಲಿನಲ್ಲಿಯೂ ಓದಿ ತೇರ್ಗಡೆ ಹೊಂದಿ ಎಫ್.ಎ.

ಪರೀಕ್ಷೆಗೆ ಓದಲು ೧೯೦೪ರಲ್ಲಿ* ಮೈಸೂರಿಗೆ ಬಂದರು. ಆಗ ಮೈಸೂರಲ್ಲಿ ನನಗೂ ಅವರಿಗೂ ಮೊದಲು ಪರಿಚಯವಾಯಿತು. ಎಫ್.ಎ. ಪರೀಕ್ಷೆಗೆ ಒಂದು ವರ್ಷ ಬಳ್ಳಾರಿಯ ವಾರ್ಡ್ಲಾ ಕಾಲೇಜಿನಲ್ಲೂ ಓದುತ್ತಿದ್ದರು. ಅದರಲ್ಲಿ ತೇರ್ಗಡೆ ಹೊಂದಿ ಮೈಸೂರಿನ ಮಹಾರಾಜಾ ಕಾಲೇಜಿಗೆ ಬಂದು ಚರಿತ್ರೆ ಅರ್ಥಶಾಸ್ತ್ರಗಳನ್ನು ತೆಗೆದುಕೊಂಡು ಬಿ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ (೧೯೦೯) ಬೊಂಬಾಯಿಗೆ ಎಲ್ಎಲ್.ಬಿ. ಪರೀಕ್ಷೆಗೆ ಓದಲು ಹೋದರು. ಅದರಲ್ಲಿ ಮೊದಲನೆಯ ಪರೀಕ್ಷೆಯಾಗಿ, ಎರಡನೆಯ ಪರೀಕ್ಷೆಗೂ ಕಟ್ಟಿದ್ದರು. ಅಷ್ಟರಲ್ಲಾಗಲೇ ಎಂ.ಎ. ಪರೀಕ್ಷೆ ಮಾಡಬೇಕೆಂಬ ಸಂಕಲ್ಪ ಹುಟ್ಟಿ, ಮೈಸೂರಿಗೆ ಬಂದು ಕೀರ್ತಿಶೇಷರಾದ ಪಂಡಿತ ಎಸ್. ತಿಮ್ಮಪ್ಪಯ್ಯ ಶಾಸ್ತ್ರಿಗಳವರಲ್ಲಿ ಕನ್ನಡವನ್ನೂ, ಮಹಾರಾಜಾ ಕಾಲೇಜಿನಲ್ಲಿ ತೆಲುಗು ಪಂಡಿತರಾಗಿರುವ ಶ್ರೀಮಾನ್ ರಾ. ಅನಂತಕೃಷ್ಣಶರ್ಮರವರಲ್ಲಿ ತೆಲುಗನ್ನೂ ವ್ಯಾಸಂಗಮಾಡಿ ಖಾಸಗಿಯಾಗಿ ಪರೀಕ್ಷೆಕೊಟ್ಟು ಉತ್ತೀರ್ಣರಾದರು (೧೯೧೪).

ಅವರ ವಿದ್ಯಾಭ್ಯಾಸ ಮುಗಿಯುವವರೆಗೂ ಅವರ ಚಿಕ್ಕಪ್ಪನವರಾದ ಶ್ರೀಮಾನ್ ಟಿ. ಶ್ರೀನಿವಾಸರಾಯರು ಧನ ಸಹಾಯಮಾಡುತ್ತಿದ್ದರು. ಕೆಲವು ಕಾಲ ವಿದ್ಯಾರ್ಥಿವೇತನ ಬರುತ್ತಿದ್ದರೂ, ಅವರ ಸಹಾಯವಿಲ್ಲದಿದ್ದರೆ ವೆಂಕಣ್ಣಯ್ಯನವರಿಗೆ ಪ್ರೌಢವ್ಯಾಸಂಗ ನಡೆಯುವುದಕ್ಕೆ ಪ್ರೋತ್ಸಾಹವಿರುತ್ತಿರಲಿಲ್ಲ. ಅವರ ಈ ಸಹಾಯ ಇಷ್ಟು ಫಲಕಾರಿಯಾದದ್ದನ್ನು ನೋಡಿ ಶ್ರೀಮಾನ್ ಶ್ರೀನಿವಾಸರಾಯರು ಎಷ್ಟೋ ಸಂತೋಷಪಡುತ್ತಿದ್ದರು. ಆದರೆ ಅವರಿಗೆ ವೆಂಕಣ್ಣಯ್ಯನವರ ಮರಣದಿಂದ ಅಷ್ಟೇ ಅಷ್ಟು ದುಃಖ ಪ್ರಾಪ್ತವಾಗಿದೆ. †

ವೆಂಕಣ್ಣಯ್ಯನವರು ಒಳ್ಳೆಯ ಮೇಧಾವಿಗಳು; ಅದನ್ನು ಅವರ

* ಮುಂದೆ ಕೊಟ್ಟಿರುವ ಇಸವಿಗಳು ಕೆಲವು ಕಡೆ ಒಂದೆರಡು ವರ್ಷ ಹೆಚ್ಚು ಕಡಮೆಯಾಗಿರಬಹುದು; ಅವುಗಳನ್ನು ಪರಿಶೋಧಿಸಲು ಅವಕಾಶ ದೊರೆಯಲಿಲ್ಲ.

† ಇವರು ಈಚೆಗೆ, ಎಂದರೆ ೨೧-೭-೪೧ ರಲ್ಲಿ, ತಮ್ಮ ೭೬ನೆಯ ವಯಸ್ಸಿನಲ್ಲಿ ಕಾಲವಾದರು.

ಉಪಾಧ್ಯಾಯರಿರಲಿ, ಪರಚಿತರೆಲ್ಲರೂ ಬಲ್ಲರು. ಆದರೆ ಅವರು ಬಹುಮಾನದ ಮೇಲಾಟಕ್ಕೆ ನಿಂತವರಲ್ಲ; ಅವರ ಮನೋವೃತ್ತಿಯೂ ದೇಹಾರೋಗ್ಯವೂ ಅದಕ್ಕೆ ಅನುಕೂಲವಾಗಿರಲಿಲ್ಲ. ಆದರೂ ಅವರಿಗೆ ಕೆಲವು ವೇಳೆ, ಪ್ರಾಯಶಃ ಅವರಿಗೇ ಅನಿರೀಕ್ಷಿತವಾಗಿ, ಬಹುಮಾನಗಳು ಬಂದಿರುವುದುಂಟು. ಹೀಗೆ, ಸಾಡ್ಲರ್ ಕಾಲೇಜಿನಲ್ಲಿ ಬೈಬಲ್ ವ್ಯಾಸಂಗಕ್ಕಾಗಿ ಕ್ರಿಸ್ತನ ಜೀವನ ಚರಿತ್ರೆಯ ಎರಡು ದೊಡ್ಡ ಸಂಪುಟಗಳು ಬಂದಿದ್ದುವು. ಈಗ ಕೆಲವು ತಿಂಗಳ ಕೆಳಗೆ ದಿವಂಗತರಾದ ಥಾಮಸ್ ಡೆನ್ಹಂ ಸಾಹೇಬರು ಮಹಾರಾಜಾ ಕಾಲೇಜಿನ ಚರಿತ್ರ ಸಂಘದ ಅಧ್ಯಕ್ಷರಾಗಿದ್ದು, ಸಂಘದ ವಾರ್ಷಿಕ ಸಂತೋಷಕೂಟದಲ್ಲಿ ವೀಕ್ಷಣಶಕ್ತಿಯನ್ನು ಪರೀಕ್ಷಿಸುವ ಒಂದು ಸ್ಪರ್ಧೆಯನ್ನು ಏರ್ಪಡಿಸಿದ್ದರು. ಅದರಲ್ಲಿ ಮೇಜಿನ ತುಂಬ ವಿಧವಿಧವಾದ ಸಾಮಾನುಗಳನ್ನಿಟ್ಟಿದ್ದು ಅವುಗಳನ್ನು ಒಂದು ನಿಮಿಷ ಮಾತ್ರ ನೋಡಿ ಆ ಸಾಮಾನುಗಳ ಪಟ್ಟಿ ಮಾಡಬೇಕಾಗಿತ್ತು. ಯಾರು ಹೆಚ್ಚಿನ ಸಂಖ್ಯೆಯ ವಸ್ತುಗಳನ್ನು ಜ್ಞಾಪಕದಲ್ಲಿಟ್ಟುಕೊಂಡು ಬರೆದುಕೊಡುತ್ತಿದ್ದರೋ ಅವರಿಗೆ ಒಂದು ಬಹುಮಾನ. ಈ ಬಹುಮಾನವು ವೆಂಕಣ್ಣಯ್ಯನವರಿಗೆ ಬಂದ ಹಾಗೂ ಅದಕ್ಕೆ ಬಾಸ್ವೆಲನ ಜಾನ್ಸನ್ ಜೀವನಚರಿತ್ರೆಯ ಅಂದವಾದ ಎರಡು ಸಂಪುಟಗಳು ಬಂದಂತೆಯೂ ನನಗೆ ಜ್ಞಾಪಕವಿದೆ. ಈಚೆಗೆ, ಎಂದರೆ ಬಹುಶಃ ೧೯೩೨ರಲ್ಲಿ, ಮಹಾರಾಣಿಯವರ ಕಾಲೇಜಿನಲ್ಲಿ ಜರುಗಿದ ಒಂದು ಸಂತೋಷ ಕೂಟದಲ್ಲಿ ಒಂದು ವಿನೋದವಾದ ಸ್ಪರ್ಧೆ ಏರ್ಪಟ್ಟಿತ್ತು. ಎದುರಿಗೆ ಬೋರ್ಡಿನ ಮೇಲೆ ಒಂದು ಹಂದಿಯನ್ನು ಬರೆದಿತ್ತು; ಅದಕ್ಕೆ ಬಾಲ ಮಾತ್ರ ಇರಲಿಲ್ಲ. ಸ್ಪರ್ಧಿಗಳು ಚೆನ್ನಾಗಿ ಕಣ್ಣು ಕಟ್ಟಿಸಿಕೊಂಡು ಹೋಗಿ ಅದರ ಬಾಲವನ್ನು ಸರಿಯಾದ ಸ್ಥಾನದಲ್ಲಿ ಸೀಮೆಸುಣ್ಣದಿಂದ ಬರೆದು ಬರಬೇಕಾಗಿತ್ತು. ಪ್ರತಿಯೊಬ್ಬರೂ 'ಇದೇನು ದೊಡ್ಡ ಕಷ್ಟ!' ಎಂದು ಧೈರ್ಯದಿಂದ ಎದ್ದುಹೋಗಿ ತಲೆಯ ಮೇಲೋ ಹೊಟ್ಟೆಯ ಕೆಳಗೋ ಕಾಲಿಗೆ ಅಡ್ಡಲಾಗಿಯೋ ಬಾಲ ಬರೆಯುವುದು, ಅದನ್ನು ನೋಡಿ ಎಲ್ಲರೂ ನಗುವುದು ಹೀಗೆಯೇ ನಡೆಯಿತು. ವೆಂಕಣ್ಣಯ್ಯನವರೂ ಸ್ನೇಹಿತರ ನಿರ್ಬಂಧಕ್ಕೆ ಎದ್ದುಹೋಗಿ ಸ್ಪರ್ಧೆಯಲ್ಲಿ ಜಯಶೀಲ

ರಾದರು. ಅವರಿಗೆ ಒಂದು ಬೆಳ್ಳಿಯ ಹಕ್ಕಿ ಬಹುಮಾನವಾಗಿ ಬಂತು. "ವೆಂಕಣ್ಣಯ್ಯನವರು ಹಂದಿಯ ಬಾಲ ಎಳೆದು ಬೆಳ್ಳಿಯ ಹಕ್ಕಿ ಸಂಪಾದಿಸಿದರು" ಎಂಬುದು ಕೆಲವು ಕಾಲದ ವರೆಗೆ "ಟಂಟಂಟಟಂಟಂ **ಟಟಟಂಟಟಂಟಃ**" ಎಂಬಂತೆ, ಇವನ್ನೆಲ್ಲಾ ತಿಳಿಯದವರಿಗೆ ಒಂದು ಸಮಸ್ಯೆಯಾಗಿತ್ತು.

ಅವರು ಎಲ್‌ಎಲ್.ಬಿ. ಪರೀಕ್ಷೆಗೆ ಓದುತ್ತಿದ್ದಾಗ ಬೊಂಬಾಯಿ ಪಟ್ಟಣದಲ್ಲಿ ಕೆಲವು ಕಾಲ ಜನರಲ್ ಪೋಸ್ಟಾಫೀಸಿನಲ್ಲಿ ಗುಮಾಸ್ತರಾಗಿದ್ದರು. ಅನಂತರ ಧಾರವಾಡದ ಮಿಷನ್ ಹೈಸ್ಕೂಲಿನಲ್ಲಿಯೂ, ಬೆಂಗಳೂರು ದಂಡಿನಲ್ಲಿರುವ ಸೆಂಟ್ ಜೋಸೆಫ್ಸ್ ಕಾಲೇಜಿನಲ್ಲಿಯೂ (೧೯೧೬) ಸಹಾಯೋಪಾಧ್ಯಾಯರಾಗಿದ್ದು ೧೯೧೭ರಲ್ಲಿ ಹೊಸ ಬಸ್ತಿಪುರದ ಕನ್ನಡ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದರು. ಇದೇ ಅವರಿಗೆ ದೊರೆತ ಸರ್ಕಾರದ ಮೊದಲ ನೌಕರಿ. ಅಲ್ಲಿಂದ ಮುಂದೆ ಬೆಂಗಳೂರಿನ ಇಂಗ್ಲಿಷ್ ಹೈಸ್ಕೂಲು ಸೆಂಟ್ರಲ್ ಕಾಲೇಜುಗಳಲ್ಲಿ ಮೇಲಕ್ಕೆ ಬಂದು, ಮಹಾರಾಜಾ ಕಾಲೇಜಿನಲ್ಲಿ (೧೯೨೭) ಕನ್ನಡದ ಪ್ರೊಫೆಸರಾದರು.

ವೆಂಕಣ್ಣಯ್ಯನವರಲ್ಲಿ ಶಿಸ್ತಿನ ಜೊತೆಗೆ ಬುದ್ಧಿ, ಜಾಣತನ, ವಿವೇಕ—ಇವೆಲ್ಲವೂ ಮುಪ್ಪುರಿಗೊಂಡು ಸೇರಿಹೋಗಿದ್ದುವು. ಅವರು ಉಗುರಿನಲ್ಲಿ ಹೋಗುವುದಕ್ಕೆ ಎಂದೂ ಕೊಡಲಿ ತೆಗೆದುಕೊಳ್ಳುತ್ತಿರಲಿಲ್ಲ. ಯಾವುದನ್ನೂ ಆದಷ್ಟು ಉಪಾಯವಾಗಿ, ಅಡ್ಡಿ ಅಡಚಣೆಗಳು ಬರದ ರೀತಿಯಲ್ಲಿ, ಮಾಡುವುದು ಅವರ ಸ್ವಭಾವ. ಅವರು ಎಂದೂ ಹಿಂದು ಮುಂದು ನೋಡದೆ "ಧುಡುಂ" ಎಂದು ನುಗ್ಗಿ ಕೆಲಸಮಾಡಿದ್ದೇ ಇಲ್ಲ. "ತೌ ಸಂಪರೀತ್ಯ ವಿವಿನಕ್ತಿ ಧೀರಃ" ಎಂಬಂತೆ ಎಲ್ಲಾ ದೃಷ್ಟಿಯಿಂದಲೂ ನೋಡಿ ವಿಚಾರಮಾಡಿ, ಅಳೆದು ಸುರಿದು, ಕೇಳಬೇಕಾದವನ್ನೆಲ್ಲಾ ಕೇಳಿ, ತೂಗಿ ನಿರ್ಧರಿಸಿ ಕೈಕೊಳ್ಳುತ್ತಿದ್ದರು. ಕೊನೆಗೆ "ಇಂಥಾದ್ದನ್ನು ಕೊಡು" ಎಂದು ದೇವರನ್ನು ಪ್ರಾರ್ಥಿಸುವವರಲ್ಲ. ಏಕೆಂದರೆ, "ನಮಗೆ ಯಾವುದು ಹಿತವೆಂದು ನಾವೇನು ಬಲ್ಲೆವು? ನಾವು ಯಾವುದೋ ಒಂದನ್ನು ನಮ್ಮ ಚಾಪಲ್ಯದಿಂದ ಕೇಳಿ, ದೇವರು ಅದನ್ನು ಅನುಗ್ರಹಿಸಿ ಮುಂದೆ ಅವಿವೇಕವಾದರೆ ಏನುಮಾಡುವುದು?"

ಎಂಬುದು ಅವರ ವಾದ. (ಇದಕ್ಕೆ ಅಗಡಿಯ ಸಾಧುಗಳ ಜೀವನ ಚರಿತ್ರೆಯಲ್ಲಿ ನಡೆದ ಒಂದು ಸಂಗತಿಯನ್ನು ಉದಾಹರಿಸುತ್ತಿದ್ದರು.) ಇಂಥವರು ಒಂದು ಸಾರಿ ಮಾತ್ರ—ನಾನು ೧೯೧೭ರಲ್ಲಿ ಹಾಸಿಗೆ ಹತ್ತಿ ಮಲಗಿ ಇತ್ತಲೋ ಅತ್ತಲೋ ಎನ್ನುವಹಾಗೆ ಆದಾಗ—"ದೇವರೇ, ನಮ್ಮ ಕೃಷ್ಣನನ್ನು ಉಳಿಸಿಕೊಡು!" ಎಂದು ಪ್ರಾರ್ಥಿಸಿದರು. (ಇದನ್ನು ಆಮೇಲೆ ಅವರೇ ಹೇಳಿದರು.) ಅವರ ಪ್ರಾರ್ಥನೆಯನ್ನು ದೇವರು ಆಲಿಸಿದನೆಂದೂ ಸಲ್ಲಿಸಿದನೆಂದೂ ಇಂದಿಗೂ ನಾನು ನಂಬಿದ್ದೇನೆ.

ವೆಂಕಣ್ಣಯ್ಯನವರು ಜನರ ಯೋಗ್ಯತೆ ಸಾಮರ್ಥ್ಯದೌರ್ಬಲ್ಯಗಳನ್ನು ಅರಿತವರಾಗಿದ್ದು, ಯಾರುಯಾರಿಂದ ಯಾವ ಯಾವ ರೀತಿಯಲ್ಲಿ ಕೆಲಸವಾಗಬಹುದೆಂಬುದನ್ನು ತಿಳಿದು, ಪ್ರೀತಿ ವಿನೋದ ಸಹಾಯ ಸೌಜನ್ಯಾದಿಗಳಿಂದ ಅವರನ್ನು ಒಲಿಸಿಕೊಂಡು ನೆರವಾಗಿಸಿಕೊಳ್ಳುತ್ತಿದ್ದರು. ಆದ್ದರಿಂದ ಅವರ ಮಿತ್ರರು—

ಎಪ್ಪಟಿಕೆಯ್ಯದಿ ಪ್ರಸ್ತುತ
ಮಪ್ಪಟಿಕಾಮಾಟಲಾಡಿ ಅನ್ಯುಲ ಮನಸುಲ್
ನೊಪ್ಪಿಂಪಕ ತಾನೊವ್ವಕ
ತಪ್ಪಿಂಚುಕ ತಿರುಗುವಾಡು ಧನ್ಯುಡು ಸುಮತೀ ।

ಎಂಬ ಪದ್ಯವನ್ನು ಅವರಿಗೆ ಅನ್ವಯಿಸಿ ಹೇಳುತ್ತಿದ್ದರು. ಭವಭೂತಿಯ

ಬಹಿಃ ಸರ್ವಾಕಾರಪ್ರಗುಣರಮಣೀಯಂ ವ್ಯವಹರನ್
ಪರಾಭ್ಯೂಹಸ್ಥಾನಾನ್ಯಪಿ ತನುತರಾಣಿ ಸ್ಥಗಯತಿ ।
ಜನಂ ವಿದ್ವಾನೇಕಃ ಸಕಲಮಭಿಸಂಧಾಯ ಕಪಟೈಃ
ತಟಸ್ಥಃ ಸ್ವಾನರ್ಥಾನ್ ಘಟಯತಿ ಚ ಮೌನಂ ಚ ಭಜತೇ ।

ಎಂಬ ಪದ್ಯವನ್ನು ನಾನು ಒಂದು ದಿನ ಅವರಿಗೆ ಹೇಳಿದೆ. ಅದನ್ನು ಕೇಳಿ ನಕ್ಕುಬಿಟ್ಟರು. ತರ್ಕ, ವ್ಯಾಜ್ಯ, ಪ್ರತಿಭಟನೆ ಇವುಗಳಲ್ಲಿ ಅವರು ಹೆಚ್ಚಾಗಿ ಪ್ರವೇಶಿಸುತ್ತಿರಲಿಲ್ಲ. ಕೊನೆಕೊನೆಗಂತೂ ಇವು ನಿಂತೇ ಹೋಗಿದ್ದುವು. ತಮ್ಮ ಅಭಿಪ್ರಾಯವೇ ಸರಿ, ಅದನ್ನು ಸಾಧಿಸಲೇಬೇಕು ಎಂಬ ಹಟ ಅವರ ಕಾರ್ಯದಲ್ಲಿ ಕಾಣುತ್ತಿರಲಿಲ್ಲ. ಆದ್ದರಿಂದ ತಾವು ಗೆದ್ದರೆ ಸಂತೋಷವಾಗಲಿ, ಗೆಲ್ಲದಿದ್ದರೆ ದುಃಖವಾಗಲಿ

ಇರುತ್ತಿರಲಿಲ್ಲ. ಯಾವುದಾದರೂ ಪತ್ರಿಕೆಗೆ ಒಂದು ಲೇಖನವನ್ನು ಬರೆದುಕೊಟ್ಟರೆ ಸಂಪಾದಕರಿಗೆ "ಅದನ್ನು ನೀವೇನಾದರೂ ಮಾಡಿಕೊಳ್ಳಿ" ಎಂದು ಹೇಳುತ್ತಿದ್ದರೇ ಹೊರತು ಅದನ್ನು ತಮ್ಮ ಇಷ್ಟದಂತೆ ಪ್ರಕಟಿಸಿದರು, ಬಿಟ್ಟರು, ರೂಪಗಳನ್ನು ಬದಲಾಯಿಸಿದರು ಎಂಬ ತಾಪತ್ರಯವನ್ನೇ ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಆ ಸಂಬಂಧದಲ್ಲಿ ಏನಾದರೂ ಒಂದು ಪ್ರಮಾದವಾದರೂ, "ಹೋಗಲಿ! ಏನು ಮಾಡುವುದು!" ಎಂದುಬಿಡುತ್ತಿದ್ದರೇ ಹೊರತು ಕ್ರೋಧವಾಗಲಿ, ಕೊರಗಾಗಲಿ ಇರುತ್ತಿರಲಿಲ್ಲ. ಇದರಿಂದ ಅವರ ಮನಸ್ಸು ಶಾಂತವಾಗಿ ಉಳಿಯುತ್ತಿತ್ತಲ್ಲದೆ ಪ್ರತಿಪಕ್ಷವು ಸುಮುಖವಾಗುತ್ತಿತ್ತು. ಅದರಲ್ಲಿಯೂ ಎದುರಾಳಿಗಳು ಹಿರಿಯರಾಗಿದ್ದು ಹಟವಾದಿಗಳಾಗಿದ್ದು ವಿಧೇಯತೆಯನ್ನು ನಿರೀಕ್ಷಿಸುವವರಾಗಿದ್ದರೆ ಅಂಥವರನ್ನು ಮೆಚ್ಚಿಸುವುದಕ್ಕೆ ಇದಕ್ಕಿಂತಲೂ ಉತ್ತಮವಾದ ಮಾರ್ಗವಿಲ್ಲ. ಆದರೆ ಅಹಂಭಾವವನ್ನು ಏಳಗೊಡದೆ, ಬೆಳೆಯಗೊಡದೆ, ಸೋತುಹೋಗುವ ಸಾತ್ವಿಕ ಗುಣವು ಎಲ್ಲರಿಗೂ ಬರುವುದಿಲ್ಲ. ಪ್ರಾಯಶಃ ಅವರ ಮೈದುನರಾದ ಕೈ. ಶ್ರೀಕಂಠಶಾಸ್ತ್ರಿಗಳನ್ನು ಬಿಟ್ಟು ಅವರ ಬಂಧುಮಿತ್ರರಾರಲ್ಲೂ ಇಷ್ಟು ಮಟ್ಟಿನ ಸಾಧುಗುಣವನ್ನು ನಾನು ಕಂಡಿಲ್ಲ.

ಇಲ್ಲಿ ವೇ. ಶ್ರೀಕಂಠಶಾಸ್ತ್ರಿಗಳ ಸೂಕ್ಷ್ಮಪರಿಚಯವು ಅಪ್ರಕೃತವಾಗಲಾರದು. ಏಕೆಂದರೆ, ಭಕ್ತಿ, ಜ್ಞಾನ, ವೈರಾಗ್ಯ, ಲೌಕಿಕ ಧಾರ್ಮಿಕ ವ್ಯವಹಾರ, ಶುದ್ಧವಾದ ಜೀವನ—ಇವೆಲ್ಲದರಲ್ಲೂ ಅವರನ್ನು ವೆಂಕಣ್ಣಯ್ಯನವರು ಆದರ್ಶವ್ಯಕ್ತಿಯಾಗಿ ಭಾವಿಸಿಕೊಂಡಿದ್ದರು. ಅಗಡಿಯ ಸಾಧುಗಳು, ಅವರ ಶಿಷ್ಯರಾದ ನಾರಾಯಣ ಭಗವಾನರು, ಇವರ ಚಿತ್ರಗಳೊಡನೆ ಶಾಸ್ತ್ರಿಗಳ ಭಾವಚಿತ್ರವೂ ವೆಂಕಣ್ಣಯ್ಯನವರ ದೇವರ ಮನೆಯ ಮಂದಾಸನದ ಮಧ್ಯೆ ಪೂಜಾಮೂರ್ತಿಗಳ ನಡುವೆ ಇರುತ್ತಿತ್ತು. ವೆಂಕಣ್ಣಯ್ಯನವರು ಮೈಸೂರಿಗೆ ಮೊದಲು ಬಂದ ಸರಿಸುಮಾರಿನಲ್ಲಿಯೇ ಶ್ರೀಕಂಠಶಾಸ್ತ್ರಿಗಳೂ ಅಲ್ಲಿಯ ಸಂಸ್ಕೃತ ಮಹಾಪಾಠಶಾಲೆಗೆ ಓದುವುದಕ್ಕೆ ಬಂದು ಅಲ್ಲಿ ವ್ಯಾಸಂಗಮಾಡಿ ಸಾಹಿತ್ಯ ವಿದ್ವತ್ಪರೀಕ್ಷೆಯನ್ನು ಕೊಟ್ಟರು. ಆದರೆ ಅವರಲ್ಲಿ ತಾವು ವಿದ್ವಾಂಸರೆಂಬ

ಅಹಂಭಾವವು ಸುತರಾಂ ಕಂಡುಬರುತ್ತಿರಲಿಲ್ಲ. ಅಗಲವಾದ, ಶಾಂತವಾದ ದುಂಡುಮುಖ, ನಗುಮುಖ; ಆ ಮುಖದ ತುಂಬ ವರ್ಚಸ್ಸು; ಅಗಲವಾದ ಹೊಳೆಯುತ್ತಿದ್ದ ಕಣ್ಣುಗಳು. ಅವರಲ್ಲಿದ್ದ ಒಂದು ದೊಡ್ಡ ಗುಣ, ವೆಂಕಣ್ಣಯ್ಯನವರ ಮೆಚ್ಚಿಗೆಗೂ ಆಶ್ಚರ್ಯಕ್ಕೂ ಪಾತ್ರವಾದ ಒಂದು ಅಪೂರ್ವ ಗುಣ—ಏನೆಂದರೆ, ಅವರ ಹೊಂದಿಕೆಯ ಸ್ವಭಾವ: ಯಾರೊಡನೆ ಇದ್ದರೆ, ಅವರೊಡನೆ ಅವರಂತೆ ಇದ್ದುಬಿಡುವುದು.—ಕಾಫಿ ಕುಡಿಯುವವರ ಮನೆಯಲ್ಲಿ ಕಾಫಿ ಕುಡಿದುಬಿಡುವುದು, ನಸ್ಯ ಹಾಕುವವರ ಜೊತೆಯಲ್ಲಿದ್ದಾಗ ನಸ್ಯ ಹಾಕಿಕೊಂಡುಬಿಡುವುದು; ಕೇಳಿ, ಕೇಳಿ, ಹಾಕಿಕೊಂಡುಬಿಡುವುದು; ಇಲ್ಲದವರ ಜೊತೆಯಲ್ಲಿದ್ದಾಗ ಅದರ ಹಂಬಲವೇ ಇಲ್ಲ; ವೈದಿಕರ ಮನೆಯಲ್ಲಿ ಅವರ ಜೊತೆಗೂ ಕರ್ಮಾನುಷ್ಠಾನ, ಒಪ್ಪತ್ತು, ಉಪವಾಸ, ಮಾಡಿಬಿಡುವುದು; ಹೆಂಗಸರ ಜೊತೆಯಲ್ಲಿದ್ದಾಗ, ಅವರಿಗೆ ತಕ್ಕಂತೆ ಮಾತು: ಮಕ್ಕಳ ಜೊತೆಯಲ್ಲಿದ್ದಾಗ, ಅವರೊಡನೆ ಆಟ, ಊಟ, ಉಪಚಾರ. ತಿಂಡಿ ತೀರ್ಥಗಳಲ್ಲಿ ಹೆಚ್ಚು ಕಡಮೆಯಾಯಿತೆಂದೂ, ಅದರಿಂದ ಬಾಧಕವಾಯಿತೆಂದೂ ಎಂದೂ ಹೇಳಿದ್ದಿಲ್ಲ; ಕೋಪಿಸಿಕೊಂಡದ್ದಾಗಲಿ, ಮುಖ ಗಂಟುಹಾಕಿಕೊಂಡದ್ದಾಗಲಿ, ಇಲ್ಲವೇ ಇಲ್ಲ; 'ಶುದ್ಧ ಸ್ಫಟಿಕಸಂಕಾಶ' ವಾದ ವಸ್ತು; ಅವರಿಗೆ ಚಿಕ್ಕ ವಯಸ್ಸಿನಲ್ಲಿಯೇ ಹೆಂಡತಿ ತೀರಿಹೋಗಲು, ಅವರು ಮತ್ತೆ ಮದುವೆಯ ಯೋಚನೆ ಬಿಟ್ಟು ಅಗಡಿಯ ಸಾಧುಗಳಲ್ಲಿ ಹೋಗಿ ಸೇರಿದರು. ಈ ಸಂಬಂಧ ಹೇಗೆ ಸಂಘಟಿಸಿತೋ ನನಗೆ ತಿಳಿಯದು. ಅಲ್ಲಿನ ಸಂಸ್ಕೃತಪಾಠಶಾಲೆಯಲ್ಲಿ ಅಧ್ಯಾಪಕರಾಗಿರುತ್ತ ಸಾಧುಸೇವೆ ಸತ್ಸಂಗಗಳಲ್ಲಿ ಸಂಸಾರವನ್ನು ಮರೆತುಬಿಟ್ಟರು. (ಅಲ್ಲಿಯೇ ಅವರು ಅಧ್ಯಾತ್ಮ ರಾಮಾಯಣವನ್ನು ಕನ್ನಡಿಸಿ 'ಸದ್ಬೋಧ ಚಂದ್ರಿಕೆ' ಯ ಮೂಲಕ ಪ್ರಕಟಿಸಿದರು.) ಈ ಮಧ್ಯೆ ಅವರ ಮದುವೆಯಲ್ಲಿ ಆಸಕ್ತರಾಗಿದ್ದ ನಂಟರು, ಸಾಧುಗಳ ಜೊತೆ ಸೇರಿ ತಮ್ಮ ಹುಡುಗ ಕೈಬಿಟ್ಟು ಹೋದನೆಂದು ಗೊಣಗುವುದಕ್ಕೆ ಮೊದಲು ಮಾಡಿ ಅಗಡಿಗೆ ಬಂದು ಸಾಧುಗಳಲ್ಲಿ ದೂರಿಟ್ಟರು. ಅವರು ಶಾಸ್ತ್ರಿಗಳನ್ನು ಕರೆದು "ಶಾಸ್ತ್ರಿಗಳೇ, ನೀವು ಮದುವೆಮಾಡಿಕೊಳ್ಳಿ!" ಎಂದು ಅಪ್ಪಣೆ

ಮಾಡಿದರು. ಅವರು ಗುರುಗಳ ಮಾತಿಗೆ ಪ್ರತಿ ಹೇಳಲಿಲ್ಲ. ಮದುವೆ ಯಾಯಿತು; ಆದರೆ, ಅದರ ಫಲ ಮಾತ್ರ ನಿರೀಕ್ಷಿಸಿದಂತೆ ಆಗಲಿಲ್ಲ. ಸಂಸಾರ ಕೂಡಲಿಲ್ಲ, ಬೆಳೆಯಲಿಲ್ಲ. ಅಗಡಿಯಲ್ಲಿ ಇದುವರೆಗೆ ಇದ್ದ ಒಂದು ವ್ಯಕ್ತಿಯ ಜೊತೆಗೆ ಮತ್ತೊಂದು ವ್ಯಕ್ತಿ ಬಂದು ಸೇರಿದಂತಾ ಯಿತು. ನಾನು ಅವರನ್ನು ವಿದ್ಯಾರ್ಥಿದಶೆಯಲ್ಲಿಯೂ, ಆಮೇಲೆ ಆಗಿಂದಾಗ್ಗೆಯೂ ನೋಡಿದ್ದೆ; ಅವರು ತಾವರೆ ಎಲೆಯ ಮೇಲಿನ ನೀರಿನಂತೆ, ಅಂಟಿಯೂ ಅಂಟದ ಹಾಗೆ ಬಾಳಿದರು; ಜೀವನ್ಮುಕ್ತರ ವರ್ಣನೆ ಅವರಿಗೆ ಅನ್ವಯಿಸುತ್ತಿತ್ತು; ಅವರ ಮರಣವೂ ಅದಕ್ಕೆ ಅನು ರೂಪವಾಗಿತ್ತಂತೆ; ಸಾಯುವುದಕ್ಕೆ ಸ್ವಲ್ಪ ಮುಂಚೆ, ಮಲಗಿದ್ದವರು ಎದ್ದು ಕುಳಿತು, ಸ್ವಲ್ಪ ಸಕ್ಕರೆ ತರಿಸಿ, ಕೈಯಲ್ಲಿ ಹಿಡಿದು ಕಣ್ಣು ಮುಚ್ಚಿ ಧ್ಯಾನಮಾಡುತ್ತಿದ್ದು, ಹತ್ತಿರದಲ್ಲಿದ್ದವರಿಗೆ 'ಪ್ರಸಾದ' ವೆಂದು ಅದನ್ನು ಹಂಚಿ, ಮುಸುಕು ಹಾಕಿಕೊಂಡು ಮಲಗಿದರಂತೆ; ಸ್ವಲ್ಪ ಹೊತ್ತಿನ ಮೇಲೆ ಮುಸುಕು ತೆಗೆದು ನೋಡಲು ವಸ್ತು ಹೋಗಿತ್ತಂತೆ. ಈ ಸಂಗತಿಯನ್ನು ವೆಂಕಣ್ಣಯ್ಯನವರೇ ಬಹು ಆಸ್ಥೆಯಿಂದ ಹೇಳುತ್ತಿ ದ್ದರು. ಅವರ ಆ ಸಾತ್ವಿಕತೆಯು ವಿವೇಕ ರಹಿತವಾದ ನಿರ್ವೀರ್ಯತೆ ಯಲ್ಲ; ವೆಂಕಣ್ಣಯ್ಯನವರ ತಂದೆಯವರು ಸ್ವರ್ಗಸ್ಥರಾದಾ ಗಲೋ, ಮತ್ತಾವುದೋ ಸಾಂಸಾರಿಕ ಕ್ಲೇಶದಲ್ಲೋ ವೆಂಕಣ್ಣಯ್ಯ ನವರು ಉಭಯ ಸಂಕಟಕ್ಕೆ ಸಿಕ್ಕಿ ಏನು ಮಾಡುವುದಕ್ಕೂ ತೋರದೆ ತಲೆಯ ಮೇಲೆ ಕೈಹೊತ್ತು ಕುಳಿತಾಗ, ಅವರು ಬಂದು "ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ! ಈ ಮಾತನ್ನು ಕೃಷ್ಣನು ಅರ್ಜುನನೊಬ್ಬನಿಗೆ ಹೇಳಿಹೋದನೆಂದು ಮಾಡಿದ್ದೀಯಾ ವೆಂಕಣ್ಣಯ್ಯ? ಏಳು, ಮನಸ್ಸನ್ನು ಗಟ್ಟಿಮಾಡಿಕೊಂಡು ಮುಂದಿನ ಕೆಲಸದಲ್ಲಿ ಪ್ರವೃತ್ತನಾಗು!" ಎಂದು ಜಬರಿಸಿದರಂತೆ. ಆ ಸಮಯ ದಲ್ಲಿ ತಮಗೆ ಬುದ್ಧಿ ಹೇಳುವುದು ಇನ್ನಾರಿಗೂ ಸಾಧ್ಯವಿರಲಿಲ್ಲವೆಂದೂ, ಹೇಳಿದ್ದರೂ ಪ್ರಯೋಜನವಾಗುತ್ತಿರಲಿಲ್ಲವೆಂದೂ ವೆಂಕಣ್ಣಯ್ಯನವರು ಹೇಳಿದ್ದರು. ಪ್ರಾಯಶಃ, ಶ್ರೀಕಂಠಶಾಸ್ತ್ರಿಗಳಿಗಿಂತ ಹೆಚ್ಚಾಗಿ ಅವರ ಧಾರ್ಮಿಕ ಜೀವನದ ಮೇಲೆ ತಮ್ಮ ಪ್ರಭಾವವನ್ನು ಬೀರಿದವರು

ಅಗಡಿಯ ಶೇಷಾಚಲ ಸಾಧುಗಳು. ಆದರೆ, ಅವರನ್ನು ನಾನು ಕಣ್ಣಾರ ಕಂಡಿಲ್ಲದ್ದರಿಂದ ಅವರ ವಿಷಯವನ್ನು ಇಲ್ಲಿ ಎತ್ತಿಲ್ಲ.

ಯಾರ ಮನಸ್ಸನ್ನೂ ನೋಯಿಸಬಾರದು, ಎಲ್ಲರನ್ನೂ ಸಂತೋಷ ಪಡಿಸಬೇಕು, ಎಂಬುದು ವೆಂಕಣ್ಣಯ್ಯನವರ ಜೀವನದ ಮುಖ್ಯ ಸೂತ್ರ ವಾಗಿತ್ತು. ಇದರಲ್ಲಿ ಕಾರ್ಯವಾಸಿಯ ಪ್ರಯೋಜನದೃಷ್ಟಿ ಇದ್ದರೂ ಅದ ಕ್ಕಿಂತ ಹೆಚ್ಚಾಗಿ ಅಹಿಂಸಾ ತತ್ವವಿತ್ತು. ಅವರು ಅಪ್ರಿಯವಾದದ್ದನ್ನು ಎಂದಿಗೂ ಹೇಳುತ್ತಿರಲಿಲ್ಲ; ಹಾಗೆಂದು ಅಸತ್ಯವಾದ ಸ್ತೋತ್ರವನ್ನೂ ಮಾಡುತ್ತಿರಲಿಲ್ಲ. ಬೇಕಾದರೆ, ಸೂಕ್ಷ್ಮವಾಗಿ ಸೂಚಿಸುವುದು, ಇಲ್ಲ ದಿದ್ದರೆ ಸುಮ್ಮನಿದ್ದು ಬಿಡುವುದು—ಇದು ಅವರಿಗೆ ರೂಢಿಯಾಗಿತ್ತು. ಏನಾದರೂ ಒಂದು ಅಪ್ರಿಯವನ್ನು ಹೇಳಲೇ ಬೇಕೆಂಬ ಬಿಕ್ಕಟ್ಟಿಗೆ ಸಿಕ್ಕಿದರೆ, "ನಾನು ಸೋಮಾರಿ, ಮೈ ಬಗ್ಗಿ ಕೂತು ಬರೆಯಲಾರೆ" ಎಂದೋ, "ನನಗೆ ಜ್ಞಾಪಕಶಕ್ತಿ ಸುತರಾಂ ಇಲ್ಲ; ಮರೆತು ಹೋಗಿ ಬಿಡುತ್ತೇನೆ" ಎಂದೋ, "ನಾನು ಯಾವುದನ್ನೂ ಬೇಗ ಗ್ರಹಿಸಲಾರೆ; ನಿದಾನವಾಗಿ ಇನ್ನೊಂದು ಸಲ ಓದಿ ಹೇಳುತ್ತೇನೆ" ಎಂದೋ, "ನಾನು ಮಖೇಡಿ, ಒಬ್ಬರನ್ನು ಹೋಗಿ ಕೇಳಲಾರೆ" ಎಂದೋ ತಮ್ಮಲ್ಲಿ ಒಂದು ಲೋಪವನ್ನು ಆರೋಪಿಸಿಕೊಂಡು ಮುಂದಕ್ಕೆ ಹಾಕಿ ಬಿಡುವರು. ಪ್ರಿಯವಾದ—ಆದರೆ ಬಾಧಕವಿಲ್ಲದ—ಸುಳ್ಳನ್ನಾದರೂ ಹೇಳಬಹುದೇ ಹೊರತು, ಅಪ್ರಿಯವಾದ ನಿಜವನ್ನು ಹೇಳಿ ವಿಶ್ವಾಸ ವನ್ನು ಕಳೆದುಕೊಳ್ಳುವುದು ಸೂಕ್ತವಲ್ಲವೆಂಬುದು ಅವರ ಭಾವ. ಇದರ ಜೊತೆಗೆ ಗೌರವ, ಭಕ್ತಿ, ನಮ್ರತೆ, ವಿಶ್ವಾಸ, ಆದರ, ಸ್ನೇಹ, ವಾತ್ಸಲ್ಯ, ಮಮತೆ—ಇವುಗಳನ್ನು ಸಂದರ್ಭ ಬಿದ್ದಂತೆ ಸಾಧ್ಯವಾದಷ್ಟು ಹೆಚ್ಚು ಪ್ರಮಾಣದಲ್ಲಿ ಉಪಯೋಗಿಸಿ ಆತ್ಮೀಯತೆಯನ್ನು ಸಂಪಾದಿಸಿದ್ದರು. ಆದ್ದರಿಂದ ಪ್ರಾಯಶಃ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗಿಂತ ಹೆಚ್ಚಾಗಿ ಕೆಲವು ಸಂದರ್ಭಗಳಲ್ಲಿ ಹೊರಗಿನವರು ಅವರಲ್ಲಿ ಅನುರಕ್ತರಾಗಿದ್ದರು. "ಸಂತೋಷಂ ಜನಯೇತ್ ಪ್ರಾಜ್ಞಃ ತದೇವೇಶ್ವರ ಪೂಜನಂ" ಎಂಬ ವಾಕ್ಯಕ್ಕೆ ಅವರು ಮೂರ್ತಿಮತ್ತಾದ ನಿದರ್ಶನವಾಗಿದ್ದರು. ಒಂದು ಸಾರಿ ಧಾರವಾಡದಲ್ಲಿದ್ದಾಗ ಮನೆಯವರನ್ನೆಲ್ಲಾ ಊರಿಗೆ ಕಳುಹಿಸಿ

ತಾವು ಒಬ್ಬರೇ ಇರಬೇಕಾಗಿತ್ತು. ಆಗ ಸುಮಾರು ಒಂದು ತಿಂಗಳ ದಿವಸ ಬೆಳಗ್ಗೆ ಸಾಯಂಕಾಲ ಒಂದೊಂದು ಸೇರು ಹಸುವಿನ ನೊರೆ ಹಾಲನ್ನು ಕುಡಿದುಕೊಂಡಿದ್ದು ಬಿಟ್ಟರಂತೆ.—ಇದರಿಂದ, ಸಾಮಗ್ರಿ ಒದಗಿಸಿಕೊಂಡು ಅಡಿಗೆಮಾಡಿಕೊಳ್ಳುವ ಕಷ್ಟ ತಪ್ಪಿತು; ಊಟಕ್ಕೆ ಅವರಿವರನ್ನು ಆಶ್ರಯಿಸುವುದಾಗಲಿ, ಹೋಟಲಿಗೆ ಹೋಗುವುದಾಗಲಿ, ತಪ್ಪಿತು; ಕೊನೆಗೆ ಹಾಲನ್ನು ಕಾಯಿಸುವ ಕಷ್ಟ, ಅದಕ್ಕೆ ಪಾತ್ರೆ ಪದಾರ್ಥಗಳನ್ನು ಸರಿಪಡಿಸಿಕೊಳ್ಳುವ ರಗಳೆ ಕೂಡ ತಪ್ಪಿತು. ಇದನ್ನು ಅವರು ಬಹು ತೃಪ್ತಿಯಿಂದಲೂ, ಒಪ್ಪಿಗೆಯಿಂದಲೂ ವಿವರಿಸುತ್ತಿದ್ದರು

ಸಾಮಾನ್ಯವಾಗಿ ಅವರು ಏತರಿಂದಲೂ ಉದ್ರೇಕಗೊಳ್ಳುತ್ತಿರಲಿಲ್ಲ; ಕೋಪ ತಾಪಗಳನ್ನೂ ಚಿಂತೆ ಕೊರಗುಗಳನ್ನೂ ನುಂಗಿಕೊಂಡು ವಿವೇಕದಿಂದ ಜೀರ್ಣಮಾಡಿಕೊಂಡು, ಸಂತೋಷಚಿತ್ತರಾಗಿ ನಗು ನಗುತ್ತ ಇರುವುದು ಅವರಿಗೆ ವಾಡಿಕೆಯಾಗಿ ಹೋಗಿತ್ತು. ಆದರೆ ಕೊನೆ ಕೊನೆಗೆ, ಆಡಬಾರದ ಅನುಭವಿಸಲಾರದ ಪರಿಹಾರವಾಗದ ಕಷ್ಟ ನಿಷ್ಠುರಗಳು ಕೆಲವು ಒದಗಿ ಅವರಿಗೆ ಕೊರಗು ಹತ್ತಿಸಿದುವು. ೧೯೩೭ ರಲ್ಲಿ ಅವರ ಮನೆಗೆ ಕಳ್ಳರು ಬಿದ್ದು ಸ್ವಲ್ಪ ನಗನಾಣ್ಯಗಳನ್ನೂ ಅವರು ಊಟಮಾಡುತ್ತಿದ್ದ ಬೆಳ್ಳಿಯ ತಟ್ಟೆಯನ್ನೂ ಹೊತ್ತುಕೊಂಡು ಹೋದರು. ಅದರಿಂದಲೂ ಅವರು ಚಲಿತರಾಗಲಿಲ್ಲ; ಹೋಗಲಿ, ನಮ್ಮ ಪ್ರಾಪ್ತಿ ಅಷ್ಟೇಯೆ; ನಾನು ಬೆಳ್ಳಿಯ ತಟ್ಟೆಯಲ್ಲಿ ಊಟಮಾಡುವುದು ದೇವರಿಗೆ ಇಷ್ಟವಿಲ್ಲವೆಂದು ತೋರುತ್ತದೆ ಎನ್ನುತ್ತಿದ್ದರು. ಆದರೆ ಸುಮಾರು ಆ ಕಾಲದಿಂದಲೂ ತಮಗೆ ಯಾವುದೋ ಕಷ್ಟದೆಸೆ ಒದಗಿದೆ ಎಂದು ಅವರಿಗೆ ಬಲವಾದ ಒಂದು ಶಂಕೆಯುಂಟಾಯಿತು; "ಏನೋ, ಮನಸ್ಸಿಗೆ ಶಾಂತಿಯೇ ಇಲ್ಲ; ದೇವರ ಪೂಜೆ, ಸಂಧ್ಯಾವಂದನೆ, ಪಾರಾಯಣ ಒಂದೂ ಬೇಕಾಗುವುದಿಲ್ಲ; ಹೋಗಲಿಯೆಂದು ನಾನೂ ಬಿಟ್ಟು ಬಿಟ್ಟಿದ್ದೇನೆ. ಗ್ರಹಚಾರ ಅದೊಂದನ್ನೂ ಮಾಡಗೊಡಿಸುವುದಿಲ್ಲ; ನಮ್ಮ ತಂದೆಗೂ ತುಂಬ ಕಷ್ಟಕಾಲ ಒಂದು ಸಾರಿ ಬಂದಿತ್ತು; ಆಗ ಅವರಿಗೂ ಹೀಗೇ ಆಗಿತ್ತು" ಎನ್ನುತ್ತಿದ್ದರು. ಸಾಯುವುದಕ್ಕೆ ಮೂರು-ನಾಲ್ಕು ತಿಂಗಳಿದ್ದಾಗ, ಮನಶ್ಶಾಂತಿ ಬಂದೀತೆಂಬ ಆಸೆಯಿಂದ ಸಪ್ತಸರ್ಗ

ಸುಂದರಕಾಂಡ ಪಾರಾಯಣವನ್ನು ಆರಂಭಿಸಿದ್ದರು. ಆ ಕಾಲದಲ್ಲಿ ಬೆಂಗಳೂರಿಗೆ ಬಂದಾಗ, ಪುಸ್ತಕವನ್ನು ತಂದು ಅಲ್ಲಿಯೂ ಪಾರಾಯಣ ಮಾಡುತ್ತಿದ್ದದ್ದನ್ನು ನೋಡಿ, ವಿಚಾರಿಸಿ, ಇದನ್ನು ತಿಳಿದುಕೊಂಡೆ. ಆದರೆ ಇನ್ನು ಸ್ವಲ್ಪ ಕಾಲ ಬಿಟ್ಟು ಮತ್ತೊಂದು ಸಾರಿ ಬಂದಾಗ ಪಾರಾಯಣಮಾಡಲಿಲ್ಲ. ಅದೇಕೆಂದು ಕೇಳಲು, " ಏನೋ ವೈಲಿಗೆ ಮಧ್ಯೆ ಅಡ್ಡಿಯಾಗಿ ಬಂದು ನಿಲ್ಲಿಸಿಬಿಟ್ಟೆ " ಎಂದರು. ಅದರಿಂದ ಅವರ ಮನಸ್ಸಿಗೆ ಸ್ವಲ್ಪ ಅಳುಕಾಗಿದ್ದಂತೆ ತೋರಿತು. ಆದರೆ ಆ ಅಳುಕು ಒಂದು ಉತ್ಪಾತವಾಯಿತು.

ಅವರಿಗೆ ತಕ್ಕ ಮಟ್ಟಿಗೆ ಫಲಜ್ಯೋತಿಷ ಜ್ಞಾನವಿತ್ತು ; ಅದರಲ್ಲಿ ನಂಬಿಕೆಯೂ ಇತ್ತು : ಆದ್ದರಿಂದ ತಮ್ಮ ಜಾತಕವನ್ನು ನೋಡಿಕೊಂಡು ಆ ಕಾಲಕ್ಕೆ ಗ್ರಹಚಾರ ಕ್ರೂರವಾಗಿದೆಯೆಂದು ಹೇಳುತ್ತಿದ್ದರು. ಆದರೆ ಇಷ್ಟು ಕ್ರೂರವೆಂದು ಯಾರೂ ಭಾವಿಸಿರಲಿಲ್ಲ.

ಅವರು ಎಂದೂ ದೃಢಾಂಗರಾಗಿ ಪೂರ್ಣಾರೋಗ್ಯದಲ್ಲಿದ್ದವರಲ್ಲ; ಮೊದಲು ನಾನು ಅವರನ್ನು ನೋಡಿದಾಗಲೇ (೧೯೦೪) ಮಲಬಂಧ ಚರ್ಮವ್ಯಾಧಿಗಳಿಂದ ನರಳುತ್ತ ಅಶಕ್ತರಾಗಿ ಕಾಣುತ್ತಿದ್ದರು. ಆದರೆ ಬೆಂಗಳೂರಿಗೆ ಬರುವ ಹೊತ್ತಿಗೆ(೧೯೧೬)ಕ್ರಮವಾಗಿ ಚೇತರಿಸಿಕೊಂಡು, ದೃಢವಾಗಿಲ್ಲದಿದ್ದರೂ ತಕ್ಕಮಟ್ಟಿಗೆ ಆರೋಗ್ಯವಾಗಿದ್ದರು. ಊಟ ತಿಂಡಿಗಳಲ್ಲಿ ಹುರುಡುಗಟ್ಟಿ, ಹುಡುಗಾಟವಾಡಿ, ಭಾಗವಹಿಸಿ ಸುಖಪಡಬಲ್ಲವರಾಗಿದ್ದರು. ಹುಳಿತೊವ್ವೆಯೆಂದರೆ ಅವರಿಗೆ ಪ್ರಾಣ ; ಆದರೆ ಮೈಸೂರಿಗೆ ಬಂದ ಮೇಲೆ(೧೯೨೭) ಅವರಿಗೆ ಇಲ್ಲಿಯ ಹವ ಒಗ್ಗಲಿಲ್ಲ ; ಜೀರ್ಣಶಕ್ತಿ ಕುಗ್ಗಿ, ಮೂಲವ್ಯಾಧಿ ಹುಟ್ಟಿ, ಅವರ ದೇಹವನ್ನು ಶೋಷಿಸಿತು. ಕೊನೆಗಾಲಕ್ಕೆ ಒಂದು ನಾಡುವೈದ್ಯದಿಂದ ಅದೂ ಗುಣಕ್ಕೆ ಬಂದಿತ್ತು ; ಆದರೆ ದೇಹದಾರ್ಢ್ಯ ಮಾತ್ರ ಕಡಮೆಯಾಗುತ್ತಿತ್ತು ; ಈ ಸಮಯದಲ್ಲಿ ಅಲಪಟಿಯಿಂದ ಆಯಾಸ ಹೆಚ್ಚಾಗಿ ಚಳಿಗಾಳಿಗಳ ಹೊಡೆತಕ್ಕೆ ಸಿಕ್ಕಿ ಜ್ವರಬಂದು ಮಲಗಿದರು. ಜ್ವರವು ವಿಷಮಿಸಿ ನ್ಯೂಮೋನಿಯಾಕ್ಕೆ ತಿರುಗಿತು. ಸ್ವಾಭಾವಿಕವಾಗಿಯೇ ದುರ್ಬಲವಾಗಿದ್ದ ಅವರ ಶ್ವಾಸಕೋಶಗಳೂ ಹೃದಯವೂ ಮತ್ತಷ್ಟು ದುರ್ಬಲವಾಗಿ, ದೇಹವು ದಿನದಿನಕ್ಕೂ ಕುಗ್ಗುತ್ತ

ಬಂತು. "ರೋಗಚಿಹ್ನೆಗಳೊಂದೂ ಇಲ್ಲ; ಎಲ್ಲಾ ಗುಣವಾಗಿದೆ; ಹೃದಯ ದೌರ್ಬಲ್ಯ ಮಾತ್ರವಿದೆ ; ತುಂಬ ನಿಶ್ಶಕ್ತಿ ಇದೆ: ಕ್ರಮವಾಗಿ ಚೇತರಿಸಿಕೊಳ್ಳುತ್ತಾರೆ "—ಎಂದೇ ಎಲ್ಲರೂ ಆಶೆಯನ್ನಿಟ್ಟುಕೊಂಡಿದ್ದರು ; ಅವರಿಗೂ ತಮ್ಮ ಅಂತ್ಯಕಾಲ ಸಮೀಪಿಸಿರಬಹುದೆಂಬ ಶಂಕೆ ತೋರಿದಂತೆ ಕಾಣುವುದಿಲ್ಲ; ಆದರೆ ಜೀವದೀಪ ಅನಿರೀಕ್ಷಿತವಾಗಿ ನಂದಿಹೋಯಿತು. ಶೋಕ ಕವಿದುಕೊಂಡಿತು.

ವೆಂಕಣ್ಣಯ್ಯನವರಲ್ಲಿ ಅವರ ಉದ್ದಕ್ಕೂ ಎಲ್ಲರಿಗೂ ಗೋಚರಿಸುತ್ತಿದ್ದದ್ದು ಅವರ ಸಾಧುತ್ವ. ಸತ್ಸಂಗ, ಜವಾಬ್ದಾರಿಯ ಸಂದರ್ಭಸನ್ನಿವೇಶಗಳು, ಆತ್ಮವಿಮರ್ಶೆ, ಅಂತರ್ಮುಖತೆ ಮುಂತಾದವುಗಳಿಂದ ಸಂಸ್ಕಾರ ಪಡೆದು ಬೆಳೆದುಬಂದರೂ ಅದು ಅವರ ಹುಟ್ಟುಗುಣವೆಂದೇ ಹೇಳಬೇಕು. ಆದ್ದರಿಂದಲೇ ಅವರು ಚಿಕ್ಕ ವಯಸ್ಸಿನಿಂದಲೂ ಎಲ್ಲರಿಗೂ ಬೇಕಾಗಿದ್ದದ್ದು ; ಮೈಸೂರಿಗೆ ಮೊದಲು ಬಂದಾಗ ಅವರು ಸುಮಾರು ಒಂದು ವರ್ಷ ಹೋಟಲಿನಲ್ಲಿ ಊಟ ವಸತಿ ಮಾಡಿಕೊಂಡಿದ್ದರು. ಅಲ್ಲಿ ಕೂಡ ಅವರನ್ನು ಕಂಡರೆ ಎಲ್ಲರಿಗೂ ವಿಶ್ವಾಸ ; ಅಲ್ಲಿದ್ದ ಪರಿಚಾರಕನು ಅನಾರೋಗ್ಯದಲ್ಲಿ ನರಳುತ್ತಿದ್ದ ಅವರನ್ನು ಉಪಚರಿಸಿ, ಹೆಚ್ಚಾಗಿ ತುಪ್ಪ ಮಜ್ಜಿಗೆ ಹಾಕಿ, ನೀರೆರೆದು ಆರೈಕೆಮಾಡಿ ತಿಂಡಿಕೊಟ್ಟು ಅವರಿಗೆ ಮೆಚ್ಚಾಗಿದ್ದನು. ಆಗ ಅವರು ಅವನಿಗೆ ದುಡ್ಡುಕಾಸು ಕೊಟ್ಟು ಒಲಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ದುಡ್ಡುಕೊಟ್ಟರೆ ತಾನೇ ವಿಶ್ವಾಸ ಬಂದೀತೆ? ಅವರ ಮೃದುವಾದ ಮಾತು, ಸಾತ್ವಿಕವಾದ ನಡತೆ, ನಗಮುಖ ಇವೇ ದುಡ್ಡಿಗಿಂತ ದೊಡ್ಡವಾಗಿದ್ದುವು.

ದುಷ್ಟನಿಗ್ರಹದಲ್ಲಿ ಅವರಿಗೆ ನಂಬಿಕೆಯಿರಲಿಲ್ಲ. " ದುಷ್ಟಾನುಗ್ರಹ, ಶಿಷ್ಟಗೌರವ " ಇದೇ ಅವರ ನಡತೆಗೆ ಮೂಲ ಮಂತ್ರವಾಗಿತ್ತು. ಸ್ನೇಹ ಸಾಧುತ್ವ ಹೊಂದಿಕೆಗಳಿಂದ ಸರಿಹೋದರೆ ಹೋಗಲಿ, ಇಲ್ಲದಿದ್ದರೆ ಅಪ್ರಿಯವಾದ ರೀತಿಯಲ್ಲಿ ವರ್ತಿಸಿ ದುಷ್ಟರನ್ನು ತಿದ್ದಹೋಗುವುದು ಅನಾವಶ್ಯಕವೆಂದು ಅವರು ಹೇಳುತ್ತಿದ್ದರು. " ಕಾಲಿಗೆ ಮುಳ್ಳು ಚುಚ್ಚಿದರೆ, ಅದು ಹಾಗೇ ಕೊಳೆತು ಕರಗಿಹೋಗಲಿ, ಅದನ್ನು ಸೂಜಿಯಿಂದ ಯಾರು ಚುಚ್ಚಿ ತೆಗೆದು ಕಾಲು ನೋಯಿಸಿಕೊಂಡಾರು!"—ಎನ್ನುವ

ಹಾಗೆ. "ಧ್ರುವಂ ಸ ನೀಲೋತ್ಪಲಪತ್ರಧಾರಯಾ ಶಮೀಲತಾಂ ಛೇತ್ತು ಮೃಷಿರ್ವ್ಯವಸ್ಯತಿ" ಎಂದು ದುಷ್ಯಂತನು ದೂರಬಹುದು. ಆದರೆ ಕಣ್ವರು ತಮ್ಮ ಮಾರ್ಗವನ್ನು ಬಲ್ಲವರಾಗಿದ್ದರು; ಅದರಿಂದಲೇ ಅವರು ಋಷಿಗಳಾಗಿ ಉಳಿದರು. ಈ ವಿಧವಾದ ರೀತಿ ವೃತ್ತಿ ಪ್ರವೃತ್ತಿ ಗಳು ಉಪ್ಪು ಹುಳಿ ಖಾರ ತಿನ್ನುವ ದೇಹಕ್ಕೆ ಸುಮ್ಮನೆ ದೊರಕುವುದಿಲ್ಲ. ಅವರು ಮನಸ್ಸನ್ನು ದಂಡಿಸಿ ದಂಡಿಸಿ, ಕೋಪತಾಪಗಳನ್ನು ನುಂಗಿ ನುಂಗಿ, ಸಾಧಕ ಮಾರ್ಗದಲ್ಲಿ ಮುಂದುವರಿಯುತ್ತಿದ್ದರು. ಆ ಹೋರಾ ಟವು ಪ್ರಯತ್ನಪೂರ್ವಕವಾಗಿ ನಡೆಯುತ್ತಿದ್ದದ್ದರಿಂದಲೇ ಅದರ ಅರಿವು ದಿನದಿನಕ್ಕೆ ಹೆಚ್ಚಾಗಿ, ಕೊನೆಕೊನೆಗೆ "ನಾನು ಮುದುಕನಾದೆನೆಂದು ತೋರುತ್ತದೆ; ನನಗೆ ಸಿಡುಕು ಬಹಳವಾಗುತ್ತಿದೆ; ಶಾಂತಿ ಹೋಗು ತ್ತಿದೆ" ಎನ್ನುತ್ತಿದ್ದರು. ಆದರೆ ಅವರನ್ನು ನೋಡಿದವರೆಲ್ಲರೂ ಬಲ್ಲರು– ಅವರ ಶಾಂತಿ ಸ್ನೇಹ ಸಮಾಧಾನಗಳು ಹೇಗೆ ಬೆಳೆಯುತ್ತಿದ್ದುವೆಂಬು ದನ್ನು.

ಸಂಯಮದಲ್ಲೆಲ್ಲಾ ಬಹು ಕಷ್ಟವಾದದ್ದು ನಾಲಗೆಯ ಮೇಲಣ ಸಂಯಮ; ಗೋಪ್ಯವಾಗಿರಬೇಕಾದ ವಿಷಯಗಳಲ್ಲಿ ನಾಲಗೆಯನ್ನು ಬಿಗಿ ಹಿಡಿದುಕೊಂಡು ಮಾತನಾಡದೆ ಸುಮ್ಮನಿರುವುದು ಬಹು ಕಷ್ಟ; ಅದನ್ನು ವೆಂಕಣ್ಣಯ್ಯನವರು ಚೆನ್ನಾಗಿ ಕಲಿತಿದ್ದರು. "ಮಾತು ಆಡಿ ಹೋಯಿತು, ಮುತ್ತು ಒಡೆದು ಹೋಯಿತು" ಎಂಬ ಹೇಳಿಕೆಗೆ ಅವರು ನಿದರ್ಶನವಾಗಿದ್ದರು. ಯಾವ ಮಾತನ್ನಾಡಿದರೆ ಅದು ಹೇಗೆ ಪರಿಣಮಿಸ ಬಹುದೋ ಜನರು ಅದಕ್ಕೆ ಕೈಕಾಲುಂಟುಮಾಡಿ ಹೇಗೆ ಹರಡ ಬಹುದೋ ಎಂದು ಹೆದರಿ ಹೆದರಿ, ಆವಶ್ಯಕವಾದದ್ದಕ್ಕಿಂತಲೂ ಇನ್ನೂ ಎರಡು ಮಾತನ್ನು ಕಡಮೆಯಾಗಿಯೇ ಆಡುವುದು ಅವರ ಅಭ್ಯಾಸ ವಾಗಿತ್ತು. ಅವರ ಮನಸ್ಸಿನಲ್ಲೇನಿತ್ತೆಂಬುದನ್ನು ನೂರಕ್ಕೆ ನೂರರಷ್ಟು ತಿಳಿಯುವುದು ಅವರ ಆಪ್ತ ಸ್ನೇಹಿತರಿಗೂ ಅಸಾಧ್ಯವಾಗಿತ್ತು. ಹೀಗೆ ಅವರು ಒಂದು ವಿಧದಲ್ಲಿ ಗುಪ್ತರಾಗಿದ್ದರು. ಆದರೆ ಇದರಿಂದ ಸ್ನೇಹ, ಸರಳತೆ, ವಿಶ್ವಾಸ ಇವುಗಳಿಗೆ ಕುಂದಾಗುತ್ತಿರಲಿಲ್ಲ; ತಮಗೆ ಬೇಕಾದವ ರಲ್ಲಿ ಇತರ ವಿಷಯಗಳನ್ನು ಕುರಿತು ಎಷ್ಟು ಹೊತ್ತು ಬೇಕಾದರೂ

ಸರಸವಾಗಿ ಮಾತನಾಡುತ್ತಿದ್ದರು; ಮಾತಿನ ಸರಣಿಯಲ್ಲಿಯೇ ಒಂದು ಆತ್ಮೀಯ ಭಾವನೆಯನ್ನುಂಟುಮಾಡಿಕೊಳ್ಳುತ್ತಿದ್ದರು.

ಮ|| ವೆಂಕಣ್ಣಯ್ಯನವರಲ್ಲಿ ಕನ್ನಡ ಇಂಗ್ಲಿಷ್ ಭಾಷಾಸಾಹಿತ್ಯಗಳ ವಿಪುಲ ವ್ಯಾಸಂಗದ ಜೊತೆಗೆ ತೆಲುಗು ಬಂಗಾಳಿ ಭಾಷೆಗಳ ಚೆನ್ನಾದ ಪರಿಚಯವೂ ತಮಿಳು ಸಂಸ್ಕೃತಗಳ ತಕ್ಕಮಟ್ಟಿನ ಪರಿಚಯವೂ ಇದ್ದುವು. ಶ್ರೀ ರಾಮಕೃಷ್ಣ ಮಠಕ್ಕಾಗಿ ಬಂಗಾಳಿ ಗ್ರಂಥಗಳ ಆಧಾರದ ಮೇಲೆ ಶ್ರೀ ರಾಮಕೃಷ್ಣ ಪರಮಹಂಸರ ಜೀವನ ಚರಿತ್ರೆಯನ್ನು ಬರೆದರು; ಶ್ರೀ ರಾಮಕೃಷ್ಣಲೀಲಾಪ್ರಸಂಗದ ಒಂದು ಭಾಗವನ್ನು ಭಾಷಾಂತರಮಾಡಿದರು; ರವೀಂದ್ರನಾಥ ಠಾಕೂರರವರು ಸಾಹಿತ್ಯ ವಿಷಯಕವಾಗಿ ಬರೆದ ಅನೇಕ ಪ್ರಬಂಧಗಳನ್ನು ಕನ್ನಡಿಸಿ 'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟಿಸಿದರು. ಉಪನಿಷತ್ತುಗಳ ಪರಿಚಯವಿತ್ತು. ವಾಲ್ಮೀಕಿ ರಾಮಾಯಣ ಅಧ್ಯಾತ್ಮ ರಾಮಾಯಣ ಭಗವದ್ಗೀತೆಗಳನ್ನು ಗದ್ಗದದಿಂದ ಕಣ್ಣೀರುಹಾಕುತ್ತ ಪಾರಾಯಣ ಮಾಡುತ್ತಿದ್ದುದುಂಟು. 'ಸಾಹಿತ್ಯ ಪರಿಷತ್ಪತ್ರಿಕೆ'ಗೆ ಕನ್ನಡ ಸಾಹಿತ್ಯ ಚರಿತ್ರೆಯ ಮೇಲೆ ಕೆಲವು ಲೇಖನಗಳನ್ನೂ 'ಪ್ರಬುದ್ಧ ಕರ್ಣಾಟಕ'ಕ್ಕೆ ಕೆಲವು ಲೇಖನಗಳನ್ನೂ ಬರೆದಿದ್ದಾರೆ. ಹರಿಶ್ಚಂದ್ರಕಾವ್ಯ ಸಂಗ್ರಹ, ಕಾದಂಬರೀಸಂಗ್ರಹ, ಬಸವರಾಜದೇವರ ರಗಳೆಗಳನ್ನು ಶೋಧನೆಮಾಡಿ ಸಂಪಾದಿಸಿ, ಕಾದಂಬರೀ ಸಂಗ್ರಹಕ್ಕೂ ಬಸವರಾಜದೇವರ ರಗಳೆಗೂ ಸಾರವತ್ತಾದ ಉಪೋದ್ಘಾತಗಳನ್ನು ಬರೆದಿದ್ದಾರೆ. 'ಕನ್ನಡ ಕೈಪಿಡಿ'ಗೆ ಹಳಗನ್ನಡ ವ್ಯಾಕರಣದ ಮತ್ತು ಭಾಷಾಚರಿತ್ರೆಯ ಭಾಗಗಳನ್ನು ಬರೆದಿದ್ದಾರೆ. ಪರಿಷತ್ತು ಪ್ರಕಟಿಸಿದ ಪಂಪಭಾರತದ ಸಂಪಾದನ ಕಾರ್ಯದಲ್ಲಿಯೂ ಓರಿಯಂಟಲ್ ಲೈಬ್ರರಿ ಪ್ರಕಟಿಸುತ್ತಿರುವ ಕುಮಾರವ್ಯಾಸ ಭಾರತದ ಸಂಪಾದನ ಕಾರ್ಯದಲ್ಲಿಯೂ ಸಹಕರಿಸಿದ್ದಾರೆ. ಸಿದ್ಧರಾಮ ಪುರಾಣವನ್ನು ಶೋಧಿಸಿ ಅಚ್ಚಿಗೆ ಸಿದ್ಧಮಾಡಿದ್ದಾರೆ. ಕುಮಾರವ್ಯಾಸ ಭಾರತವನ್ನು ಒಂದೇ ಸಂಪುಟದಲ್ಲಿ ಸುಂದರವಾಗಿ ಶುದ್ಧವಾಗಿ ಪ್ರಕಟಿಸಬೇಕೆಂಬ ಉದ್ದೇಶವಿತ್ತು. ಇದಕ್ಕಾಗಿ ಒಂದು ಪ್ರಾಚೀನ ಪ್ರತಿಯನ್ನು ಸಂಪಾದಿಸಿ ಅದನ್ನು ಕಾಗದದಲ್ಲಿ ಪ್ರತಿ ಮಾಡಿಸಿದ್ದರು. ಆದರೆ ಮಿಕ್ಕ

ಕೆಲಸಗಳು, ಅಂದಂದಿಗೆ ಆವಶ್ಯಕವಾಗಿ ನಡೆಯಲೇಬೇಕಾದ ಕೆಲಸಗಳು, ಹೆಚ್ಚಾಗಿ, ಇವಕ್ಕೆ ಗಮನ ಕೊಡಲಾಗಲಿಲ್ಲ.

ಒಟ್ಟಿನ ಮೇಲೆ ಅವರು ಬರೆದದ್ದಕ್ಕಿಂತ ಉಪನ್ಯಾಸಮಾಡಿದ್ದೇ ಹೆಚ್ಚು. ಆದರೆ ಅವರ ಮಾತಿನಲ್ಲಿಯೂ ಬರೆವಣಿಗೆಯಲ್ಲಿಯೂ ಒಂದು ಅಪೂರ್ವವಾದ ಗುಣವಿತ್ತು; ಅದನ್ನು ಅವರು ಚೆನ್ನಾಗಿ ಸಂಸ್ಕಾರಗೊಳಿಸಿಯೇ, ನಿರ್ವಿವಾದವಾಗುವಂತೆಯೇ, ಸಪ್ರಮಾಣವಾಗಿಯೇ ಪ್ರಯೋಗಿಸುತ್ತಿದ್ದರು. ಅದರಲ್ಲಿ ಸಂದಿಗ್ಧತೆಯಾಗಲಿ ಬೆಡಗು ಬಿನ್ನಾಣಗಳಾಗಲಿ ಇರುವುದಿಲ್ಲ; "ತಳುಕಿನ ವೆಂಕಣ್ಣಯ್ಯನವರಲ್ಲಿ ತಳುಕಿಲ್ಲ" ಎಂದು ನಮ್ಮ ಮಾನ್ಯಮಿತ್ರರೊಬ್ಬರು ಪದೇ ಪದೇ ವಿನೋದವಾಗಿ ಹೇಳುತ್ತಿದ್ದದ್ದನ್ನು ಅವರ ಬರವಣಿಗೆಗೆ ಚೆನ್ನಾಗಿ ಅನ್ವಯಿಸಬಹುದು. ಅದರಲ್ಲಿ ಯಾವ ಮಾತನ್ನಾದರೂ ತೆಗೆದು, ಸೇರಿಸಿ, ಬದಲಾಯಿಸುವಂತಿರುವುದಿಲ್ಲ. ಅವರು ಬರೆಯುವುದರ ಜವಾಬ್ದಾರಿಯನ್ನು ಬಹು ಚೆನ್ನಾಗಿ ಗ್ರಹಿಸಿದ್ದರು; ಆದ್ದರಿಂದ ಬರೆಯಬೇಕೆಂಬ ಪ್ರಾರ್ಥನೆಗೆ ಸುಲಭವಾಗಿ ಒಪ್ಪುತ್ತಿರಲಿಲ್ಲ; ತಾವಾಗಿಯಂತೂ ಮೇಲೆಬಿದ್ದು ಬರೆದದ್ದೇ ಇಲ್ಲ.

ವೆಂಕಣ್ಣಯ್ಯನವರ ಉತ್ತಮವಾದ ಬರೆವಣಿಗೆ, ಅವರ ಬರೆವಣಿಗೆಗಿಂತಲೂ ಅವರ ಮಾತು, ಅವರ ಮಾತಿಗಿಂತಲೂ ಅವರ ನಡತೆ, ಅವರ ನಡತೆಗಿಂತಲೂ ಅವರ ಗುಣ, ಇವು ಅವರನ್ನು ಬಲ್ಲವರ ಹೃದಯದಲ್ಲಿ ಮೆಚ್ಚಿಗೆ ಪಡೆದು ನಿಲ್ಲುತ್ತವೆ: ಕನ್ನಡಿಗರಲ್ಲಿ ಅವರ ನೆನಪು ಅಮರವಾಗಿರುತ್ತದೆ.

ವೆಂಕಣ್ಣಯ್ಯನವರು ಪುಣ್ಯವಂತರು; ಅವರು ಇರುವ ತನಕ ಒಳ್ಳೆಯವರಾಗಿದ್ದು, ಒಳ್ಳೆಯವರೆಂದೆನಿಸಿಕೊಂಡು, ನಯವಾದ ನವಿರಾದ ಸಾತ್ವಿಕ ಜೀವನವನ್ನು ಜೀವಿಸಿ, ಗಂಟು ನಂಟು ಎರಡನ್ನೂ ಉಳಿಸಿಕೊಂಡು, ದೇವರಿಗೂ ಮನುಷ್ಯರಿಗೂ ಮೆಚ್ಚಿಕೆಯಾಗಿ ಬಾಳಿ ಕಣ್ಮರೆಯಾದರು. ಆದರೆ ಅವರ ಬಂಧುಬಾಂಧವರಿಗೂ ಇಷ್ಟ ಮಿತ್ರರಿಗೂ ಅವರನ್ನು ಇನ್ನು ಕೆಲವು ಕಾಲ ಪಡೆದಿರುವ ಭಾಗ್ಯವಿರಲಿಲ್ಲ.

ಪ್ರಬುದ್ಧ ಕರ್ಣಾಟಕ, ಸಂಚಿಕೆ ೭೮.
೧೯೩೯.

# ಇಂದಿನ ಜನಜೀವನದಲ್ಲಿ ಕನ್ನಡ

ಕನ್ನಡಿಗರಾದ ನನ್ನ ಅಣ್ಣತಮ್ಮಂದಿರೇ, ಅಕ್ಕತಂಗಿಯರೇ,

ಈ ಅಖಿಲ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನದಲ್ಲಿ ನನ್ನನ್ನು ನಿಲ್ಲಿಸಿ ತಮ್ಮ ಅತಿಶಯವಾದ ಪ್ರೀತಿ ಗೌರವಗಳನ್ನು ತೋರಿಸಿದ್ದಕ್ಕಾಗಿ ನಾನು ತಮಗೆ ಕೃತಜ್ಞನಾಗಿದ್ದೇನೆ. ತಾವು ತೋರಿಸಿರುವ ಗೌರವಕ್ಕಿಂತ ಪ್ರೀತಿ ದೊಡ್ಡದು. ಅದು ನನ್ನನ್ನು ಈಗ ಒಂದು ವರ್ಷದಿಂದ ಎಳೆಯುತ್ತಿದೆ. ಯಾರಾದರೂ ಆ ಬ್ರಹ್ಮಾಸ್ತ್ರ ಪಾಶಕ್ಕೆ ಸೋಲದೆ ವಿಧಿಯಿಲ್ಲ. ಕಳೆದ ವರ್ಷ ತಾವು ನನ್ನನ್ನು ಅಪೇಕ್ಷಿಸಿದಿರಿ: ನಾನು ತಮ್ಮ ಆಜ್ಞೆಯನ್ನು ನಿರಾಕರಿಸಿದೆ ; ಈ ಭಾರವನ್ನು ಹೊರಲಾರೆನೆಂದೆ: ಈ ಗೌರವವನ್ನು ಬೇಡವೆಂದೆ ; ತಮ್ಮ ದೊಡ್ಡ ಮನಸ್ಸಿನಿಂದ ನನ್ನ ನಿರಾಕರಣೆಯನ್ನು ನಿರ್ಲಕ್ಷಿಸಿ ಮತ್ತೆ ನನ್ನನ್ನು ಕೋರಿದಿರಿ. ಇನ್ನು ಈ ಜೇಡತನವನ್ನು ಬೆಳಸಬಾರದೆಂದು ಇಂದು ತಮ್ಮ ಮುಂದೆ ಬಂದು ನಿಂತಿದ್ದೇನೆ. ಅಲ್ಲದೆ, ನನ್ನ ವಿದ್ಯಾಮಾತೆಯಾದ ಮಹಾರಾಜಾ ಕಾಲೇಜಿಗೂ ಪ್ರಾಣದಾತೆಯಾದ ಮೈಸೂರು ವಿಶ್ವವಿದ್ಯಾನಿಲಯಕ್ಕೂ ತಾವು ಈ ಮೂಲಕ ಆದರ ಗೌರವಗಳನ್ನು ತೋರಿಸಲಿಷ್ಟಪಟ್ಟರೆ ನಾನೇಕೆ ಅಡ್ಡ ಬರಲಿ ?

ಈಗ್ಗೆ ಇಪ್ಪತ್ತೈದು ವರ್ಷಗಳಿಂದ ನನ್ನ ಪೂಜ್ಯ ಗುರುಗಳೂ ಹಿರಿಯರೂ ಮಿತ್ರರೂ ನಿಂತು ಸಾಮರ್ಥ್ಯದಿಂದ ವಹಿಸಿದ ಈ ಅಖಿಲ ಕರ್ಣಾಟಕ ಕಾರ್ಯಭಾರವನ್ನು ಹೊರುವುದು ಹೇಗೆ ಎಂದು ನಾನು ಅಧೈರ್ಯಪಟ್ಟೆ ; ಆದರೆ, ಅಂಥವರು ಸುಗಮವಾಗಿ ಮಾಡಿಕೊಟ್ಟ ದಾರಿಯಲ್ಲಿ ಹೋಗುವುದು ಏನು ಕಷ್ಟ ? "ಮಣೌ ವಜ್ರಸಮುತ್ಕೀರ್ಣೇ

---

ಹೈದರಾಬಾದು ನಗರದಲ್ಲಿ ಸೇರಿದ್ದ ೨೬ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಾಡಿದ ಅಧ್ಯಕ್ಷ ಭಾಷಣ. (೨೯-೧೨-೧೯೪೧).

ಸೂತ್ರಸ್ಯೈವಾಸ್ತಿ ಮೇ ಗತಿಃ" ಎಂದು ಧೈರ್ಯ ತಂದುಕೊಂಡೆ. ಒಂದು ಕಡೆ ಈ ಧೈರ್ಯದ ಮೇಲೂ ಇನ್ನೊಂದು ಕಡೆ ತಮ್ಮ ಸಹಕಾರಹಸ್ತದ ಮೇಲೂ ಭಾರಬಿಟ್ಟು ಈ ಕಾರ್ಯವನ್ನು ನಡಸಿಕೊಂಡು ಹೋದೇನೆಂದು ಆಶೆಯುಳ್ಳವನಾಗಿದ್ದೇನೆ.

## ಭಾಗ್ಯನಗರದಲ್ಲಿ ಸಮ್ಮೇಳನದ ಭಾಗ್ಯ

ಹೈದರಾಬಾದು ಸಂಸ್ಥಾನದಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವು ಸೇರಿರುವುದು ಇದು ಮೂರನೆಯ ಸಾರಿ. ಹಿಂದೆ ೧೯೨೮ರಲ್ಲಿ ಗುಲ್ಬರ್ಗದಲ್ಲಿಯೂ, ೧೯೩೪ರಲ್ಲಿ ರಾಯಚೂರಿನಲ್ಲಿಯೂ ಸೇರಿತ್ತು. ಆದರೂ ಮತ್ತೆ ಮೂರನೆಯ ಸಾರಿ. ಅದಲ್ಲಿಯೂ ರಾಜಧಾನಿಯೊಳಗೆ ತಮ್ಮ ನೇರವಾದ ಕೃಪಾಶ್ರಯದಲ್ಲಿ. ಇದು ಮತ್ತೆ ಸೇರಲು ಅವಕಾಶ ಕೊಟ್ಟದ್ದಕ್ಕಾಗಿ ಮಹಾಘನತೆವೆತ್ತ ನಿಜಾಮರವರಿಗೂ ಅವರ ಸರ್ಕಾರಕ್ಕೂ ನಾವೆಲ್ಲರೂ ಅತ್ಯಂತ ಕೃತಜ್ಞರಾಗಿದ್ದೇವೆ. ಕಳೆದ ತಿಂಗಳು ತಾನೆ ಅವರು "ನಮ್ಮ ಸಂಸ್ಥಾನದಲ್ಲಿ ಹಿಂದುಗಳೂ ಮುಸ್ಲಿಮರೂ ಸಮ ಭಾಗಿಗಳು: ಶಾಂತಿಸಮಾಧಾನಗಳು ಲಭಿಸಲು ಅವರಿಬ್ಬರೂ ಒಟ್ಟಿಗೆ ಕಾರ್ಯ ನಡೆಸಬೇಕು" ಎಂದು ಅಪ್ಪಣೆ ಕೊಡಿಸಿದ್ದಾರೆ. ಆಧುನಿಕ ಹೈದರಾಬಾದಿನ ಪ್ರಗತಿಗೆ ಅವರು ಪ್ರಧಾನಕಾರಣರೆಂಬುದನ್ನು ಅವರ ಪ್ರಜೆಗಳೆಲ್ಲರೂ ಬಲ್ಲರು. ಅವರ ಪ್ರಜಾಕೋಟಿಯಲ್ಲಿ ಒಂದು ಮುಖ್ಯಾಂಗವಾದ ಕನ್ನಡಜನ ತಮ್ಮ ಕೊರತೆಗಳು ನಿವಾರಣೆಯಾಗುವುವೆಂದೂ ಮಿಕ್ಕವರಂತೆ ತಾವೂ ಬೆಳೆದು ಬರಬಹುದೆಂದೂ ನಂಬಲು ಧಾರಾಳವಾಗಿ ಅವಕಾಶವಿದೆ. ಸರಕಾರದ ಸಹಾನುಭೂತಿ ಇಲ್ಲದ ಜನ-ಸಮುದಾಯ ಸಾಸವೆಯ ರಾಶಿ.

ಹೈದರಾಬಾದು ಪ್ರಾಂತ ಕನ್ನಡಿಗರಿಗೆ ಹೆಮ್ಮೆಯ ಪ್ರಾಂತ; ಕನ್ನಡ ಸಾಹಿತ್ಯಗಂಗೆಯ ಗಂಗೋತ್ರಿ; ತಿರುಳ್ಗನ್ನಡದ ಕನ್ನಡಿ; ಕಲಾರತ್ನಗಳ ಖನಿ. ಭಕ್ತಶಿರೋಮಣಿಗಳ ತವರ್ಮನೆ. ಈ ಪ್ರಾಂತದ ರಾಜಧಾನಿಯಾದ ಭಾಗ್ಯನಗರದಲ್ಲಿ ಸಮ್ಮೇಳನ ಸೇರಿರುವುದು ಕನ್ನಡಿಗರ ಅಪೂರ್ವ ಭಾಗ್ಯವೆಂದು ನಾನು ಎಣಿಸುತ್ತೇನೆ. ಈ ಭಾಗ್ಯವು ಸಾಧ್ಯವಾಗಿ ಹೈದರಾ

ಬಾದಿನ ಕರ್ಣಾಟಕರೂ ಮೈಸೂರಿನ ಕರ್ಣಾಟಕರೂ ಅಣ್ಣತಮ್ಮಂದಿರು, ಅಕ್ಕತಂಗಿಯರು ಎಂಬ ಭಾವನೆ ಬರುವುದಕ್ಕೆ ಕಾರಣ ಕನ್ನಡ ಸಾಹಿತ್ಯ ಪರಿಷತ್ತು.

## ಪ್ರಾಂತಾಭಿಮಾನ

ಕನ್ನಡಿಗರಲ್ಲಿ ಎಷ್ಟು ಒಕ್ಕಟ್ಟು, ಒಂದೆಂಬ ಭಾವನೆ, ಇರಬೇಕೋ ಅಷ್ಟು ಇಂದು ಇಲ್ಲದಿದ್ದರೂ ಅದು ಇರುವಷ್ಟುಮಟ್ಟಿಗಾದರೂ ಹುಟ್ಟಿಬೆಳೆದಿರುವುದು ಸಾಹಿತ್ಯ ಪರಿಷತ್ತಿನಿಂದ; ಅದನ್ನು ಕರೆದು ಹೀಗೆ ಸಮ್ಮೇಳನಗಳನ್ನು ಕೂಡಿಸಲು ಸಾಧ್ಯವಾಗಿರುವುದು ಕನ್ನಡದ ಅಭಿಮಾನಿಗಳಿಂದ. ಮೈಸೂರಿನವರು, ಧಾರವಾಡದವರು, ಮಂಗಳೂರಿನವರು, ಹೈದರಾಬಾದಿನವರು, ಕೊಡಗಿನವರು ಎನ್ನುವುದಕ್ಕಿಂತ 'ಕನ್ನಡಿಗರು' ಎನ್ನುವುದು ಶ್ರೇಯಸ್ಸು. ಕನ್ನಡಿಗರು, ಮರಾಠಿಗರು, ತೆಲುಗರು, ತಮಿಳರು ಎನ್ನುವುದಕ್ಕಿಂತ ಭಾರತೀಯರು ಎನ್ನುವುದು ಮತ್ತೂ ಶ್ರೇಯಸ್ಸು. ಭಾರತೀಯರು, ಇಂಗ್ಲಿಷರು, ಅಮೆರಿಕನರು, ಆಫ್ರಿಕನರು ಎನ್ನುವುದಕ್ಕಿಂತ ನಾವೆಲ್ಲ ಈ ಭೂಮಿತಾಯಿಯ ಮಕ್ಕಳು ಎನ್ನುವುದು--ವಿಶ್ವಭಾವನೆಯು--ಸರ್ವೋತ್ತಮ. ಹೀಗೆಂದು ಪ್ರತಿಯೊಬ್ಬ ವ್ಯಕ್ತಿಯೂ ವಿಶ್ವಪ್ರಜೆಯಾಗಿ ಕೆಲಸಮಾಡುವುದಕ್ಕಾಗುತ್ತದೆಯೇ? ಪ್ರಪಂಚವನ್ನೇ ಉದ್ಧಾರಮಾಡುತ್ತೇನೆಂದು ಹೊರಡುವುದಕ್ಕಿಂತ ಹೆಚ್ಚಿನ ಅವಿವೇಕ ಇನ್ನೊಂದಿಲ್ಲ. "ತಾನುಂಟೋ ಮೂರು ಲೋಕವುಂಟೋ!" ಎನ್ನುವುದು ಒಂದು ವಿಧದಲ್ಲಿ ನಿಜ. ತನ್ನನ್ನು ತಾನು ಉದ್ಧಾರಮಾಡಿಕೊಳ್ಳಬೇಕು; ಆಮೇಲೆ ತನ್ನವರು, ತನ್ನ ನಾಡು, ತನ್ನ ಲೋಕ. ಉದ್ಧಾರಕಾರ್ಯವು, ದಾನದಂತೆ ತನ್ನಿಂದ ಆರಂಭವಾಗಬೇಕು: ಆದರೆ ತನ್ನಲ್ಲಿಯೇ ನಿಲ್ಲಬಾರದು, ಮುಗಿಯಬಾರದು. ತಾನು ವಿದ್ಯಾವಂತನಾದರೆ, ಐಶ್ವರ್ಯವಂತನಾದರೆ, ಮತ್ತೊಬ್ಬನಿಗೆ ಹೇಳಿಕೊಡಬಹುದು, ಹಣ ಕೊಡಬಹುದು. ಅಂಥ ವ್ಯಕ್ತಿಗಳು ಒಂದುಸಾವಿರ ಜನವಾದರೆ ದೇಶ ತಾನೇ ಮೇಲಕ್ಕೆ ಏಳುತ್ತದೆ, ಮುಂದಕ್ಕೆ ಬರುತ್ತದೆ. ಹಾಗಲ್ಲದೆ ದೇಶವನ್ನು ಉದ್ಧಾರಮಾಡುತ್ತೇನೆಂದು ಯಾರಾದರೂ ತನ್ನನ್ನೂ ತನ್ನ ತಾಯಿ ತಂದೆ ಹೆಂಡತಿ

ಮಕ್ಕಳನ್ನೂ ಅಲಕ್ಷ್ಯಮಾಡಿದರೆ ಅದು ದೇಶೋದ್ಧಾರವಲ್ಲ; ದೇಶ ದ್ರೋಹ. ಆದ್ದರಿಂದ ಒಂದು ಊರಿನವರು ತಮ್ಮ ಊರಿನ ಅಭಿಮಾನದಿಂದ ಆ ಊರನ್ನು ಬೆಳಸಿಕೊಂಡುಬಂದರೆ, ಅದರಿಂದ ಒಟ್ಟು ದೇಶಕ್ಕೆ ಹಾನಿಯಿಲ್ಲ, ಕ್ಷೇಮವೇ. ಅದರಿಂದ ಕನ್ನಡಿಗರಾಗಲಿ, ಆಂಧ್ರರಾಗಲಿ, ತಮಿಳರಾಗಲಿ, ತಮ್ಮ ನಾಡಿನ ಅಭಿಮಾನದಿಂದ ಅದನ್ನು ಪುಷ್ಟಿಗೊಳಿಸಿಕೊಳ್ಳಬೇಕೆಂದು ಪ್ರಯತ್ನಪಟ್ಟರೆ ಅದು ಸ್ವಾಭಾವಿಕವೂ ನ್ಯಾಯವೂ ಆಗಿರುವುದಲ್ಲದೆ, ಒಟ್ಟು ದೇಶಕ್ಕೂ ಕ್ಷೇಮವೆ.

ಭರತಖಂಡ ಒಂದು ದೊಡ್ಡ ಭೂಖಂಡ. ರಷ್ಯವನ್ನು ಕಳೆದರೆ ಉಳಿಯುವ ಯೂರೋಪುಖಂಡಕ್ಕೆ ಸರಿಸಮಾನವಾಗುವ ಖಂಡ. ವ್ಯವಹಾರಕ್ಕಾದರೂ ಇದು ವಿಭಾಗವಾಗಿರಲೇಬೇಕು. ಈಗ ಇಲ್ಲಿ ರಾಜಕೀಯ ವಿಭಾಗಗಳಿವೆ. ಇವಕ್ಕೆ ಕಾರಣ ಚರಿತ್ರೆ. ಸ್ವಾಭಾವಿಕ ಮೇರೆಗಳಲ್ಲ, ನೈಸರ್ಗಿಕ ಕಾರಣಗಳಲ್ಲ. ಆದ್ದರಿಂದ ಅನನುಕೂಲಗಳಿವೆ, ಅಸಮಾಧಾನಗಳಿವೆ. ಜನದ ಏಳಿಗೆಗೂ ಆ ಮೂಲಕ ದೇಶದ ಏಳಿಗೆಗೂ ಅಡಚಣೆ ಬರುವುದಕ್ಕೆ ಅವಕಾಶಗಳಿವೆ. ಆದ್ದರಿಂದ ಮುಂದೆ ಭರತಖಂಡವನ್ನು ಪ್ರಗತಿದೃಷ್ಟಿಯಿಂದ ಸಂಘಟನಗೊಳಿಸುವಾಗ ವಿಭಾಗಗಳು ಹೇಗಿರಬೇಕೆಂದು ರಾಜತಂತ್ರಜ್ಞರು ಯೋಚಿಸುತ್ತಿದ್ದಾರೆ. ಅದನ್ನು ಚರ್ಚಿಸುವುದು ಸಾಹಿತ್ಯ ಸಮ್ಮೇಳನದ ಅಥವಾ ಅದರ ಅಧ್ಯಕ್ಷನ ಕೆಲಸವಲ್ಲ. ಆದರೆ ನಮಗೆಲ್ಲ ಪ್ರಕೃತವಾದ ಅಂಶವೇನೆಂದರೆ, ಈ ವಿಭಾಗ ಕ್ರಮದಲ್ಲಿ ಬಹುತರವಾದ ಒಪ್ಪಿಗೆಯನ್ನು ಪಡೆದಿರುವುದು ಭಾಷಾನುಸಾರಿಯಾದ ಪ್ರಾಂತ ವಿಭಾಗ. ಇದನ್ನು ಸಾಧಿಸಲು ದಕ್ಷಿಣ ದೇಶದಲ್ಲಿ ನಮ್ಮ ಸೋದರರಾದ ಆಂಧ್ರರು ಮುನ್ನುಗ್ಗಿದರು. ಅವರ ಕೂಗು ಕಡಲನ್ನೂ ದಾಟಿಹೋಗಿ ಇನ್ನೇನು ಕೈಗೂಡಿತೆನ್ನುವಂತಾಯಿತು. ಅವರ ನೆರೆಯಲ್ಲಿ ನಾವೂ ಅವರಂತೆ ಒಂದು ಕನ್ನಡ ನಾಡನ್ನು ಕಟ್ಟಿಕೊಳ್ಳಬಹುದೆಂದು ಯೋಚಿಸಿದೆವು. ಕನ್ನಡ ಸಾಹಿತ್ಯ ಪರಿಷತ್ತು ಈ ಕನಸನ್ನು ತನ್ನ ಧ್ವಜಚಿಹ್ನೆಯಾಗಿಮಾಡಿ ಎತ್ತಿಹಿಡಿಯಿತು. ಆದರೆ ಅಷ್ಟರಲ್ಲಿ ವಿಶ್ವಗ್ರಾಸಿಯಾದ ಎರಡನೆಯ ಮಹಾಸಂಗ್ರಾಮವು ಆರಂಭವಾಗಿ ಎಲ್ಲಿಯದು ಅಲ್ಲಿಯೇ ಉಳಿಯಿತು. ಈ ಯುದ್ಧವು ಬೇಗ

ಮುಗಿದು, ಬ್ರಿಟಿಷರಿಗೆ ಜಯವಾಗಿ, ನಮ್ಮ ನಾಡು ತನ್ನ ಆಶೆಯನ್ನು ನೆರವೇರಿಸಿಕೊಳ್ಳುವ ಕಾಲ ಬರಲಿ!

## ತಾಯಿನುಡಿಯ ಅಭಿಮಾನ

ಸಾಹಿತ್ಯಪರಿಷತ್ತು ಈ ಭಾವನೆಯನ್ನು ನಮ್ಮಲ್ಲಿ ಉಂಟು ಮಾಡಲು ಬಹುವಾಗಿ ಕೆಲಸಮಾಡಿದೆ ಎಂದು ಆಗಲೇ ಹೇಳಿದೆ. ಅದರ ಸ್ಥಾಪಕರ ಉದ್ದೇಶವೇ ಇದಾಗಿತ್ತು. ಆದರೆ ಕನ್ನಡಿಗರಲ್ಲಿ ಕಾವು ಏರದು; ಅವರು ಕದಳೀಗರ್ಭಶ್ಯಾಮರೂ ಹೌದು, ಶೀತರೂ ಹೌದು. ಈ ಸಂದರ್ಭದಲ್ಲಿ ನನಗೆ ಪದೇ ಪದೇ ಒಂದು ಸಂಗತಿ ನೆನಪಿಗೆ ಬರುತ್ತದೆ. ಅದೇನೆಂದರೆ: ಪರಿಷತ್ತು ಸ್ಥಾಪಿತವಾದ ವರ್ಷ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಶ್ರೀಮಾನ್ ಎಚ್. ವಿ. ನಂಜುಂಡಯ್ಯನವರು ಸಮ್ಮೇಳನ ಮುಗಿದ ಮೇಲೆ ಅಲ್ಲಿ ಸೇರಿದ್ದ ಸದಸ್ಯರನ್ನು ಕುರಿತು "ನಿಮಗೆ ಕನ್ನಡ ಬೇಕೆ? ಸಂಸ್ಕೃತ ಬೇಕೆ?" ಎಂದು ಕೇಳಿದರು. ಆಗ ಪ್ರತಿಯೊಬ್ಬರೂ ಸಂಸ್ಕೃತ ಬೇಕೆಂದರು; ಇಲ್ಲವೆ, ಎರಡೂ ಬೇಕೆಂದರು; ಕನ್ನಡ ಬೇಕು ಎಂದು ಯಾರೂ ನಿಷ್ಕೃಷ್ಟವಾಗಿ ಮಾತ ನಾಡಲಿಲ್ಲ. ಇವನ್ನೆಲ್ಲಾ ಶಾಂತವಾಗಿ ಕೇಳುತ್ತಿದ್ದ ಅಧ್ಯಕ್ಷರು ಕೊನೆಗೆ ಎದ್ದು ನಿಂತು "ಇದು ಕರ್ಣಾಟಕ ಸಾಹಿತ್ಯಪರಿಷತ್ತು; ನೀವೆಲ್ಲಾ ಅದರ ಸದಸ್ಯರು; ಆದರೆ ಯಾರೊಬ್ಬರೂ ಕನ್ನಡ ಬೇಕೆಂದು ಧಾರಾಳ ವಾಗಿ ಹೇಳಲಿಲ್ಲ. ಇದು ಆಶ್ಚರ್ಯ!" ಎಂದರು. ಆ ಮಾತನ್ನು ಕೇಳಿ ಅನೇಕರು ತಲೆತಗ್ಗಿಸಿಕೊಂಡರು; ಆದರೂ ಅವರಲ್ಲಿ ಸಂಸ್ಕೃತದ ಅಭಿಮಾನ ಎಷ್ಟುಮಟ್ಟಿಗಿತ್ತೆಂದರೆ, ತಗ್ಗಿದ ತಲೆ, "ಮುಟ್ಟಿದರೆ ಮುನಿಯು" ಗಿಡದಂತೆ, ಬಹುಬೇಗ ಎದ್ದಿತು; ಶೂಲದಂತೆ ಇರಿಯು ಬೇಕಾದ ಮಾತು ಮರೆತುಹೋಯಿತು. ಇಂದು ಅದನ್ನು ಯಾರಾದರೂ ಜ್ಞಾಪಕದಲ್ಲಿಟ್ಟಿದ್ದಾರೆಯೋ ಏನೋ ತಿಳಿಯದು. ಆದರೆ ಪರಿಸ್ಥಿತಿಯು ಆಗಿಗಿಂತ ಈಗ ಅಷ್ಟೇನೂ ಹೆಚ್ಚು ಬದಲಾಯಿಸಿಲ್ಲ; ಆಗ ಒಂದು ಭಾಷೆಯ ಮೇಲೆ ಹಿಂದಿನಿಂದ ಬಂದ ಅಭಿಮಾನವಿದ್ದರೆ, ಈಗ ಮತ್ತೊಂದು ಭಾಷೆಯ ಮೇಲೆ ಇಂದುತಾನೇ ಬಂದ ಅಭಿಮಾನ

ವುಂಟಾಯಿತು. ಮೊದಲು ಹುಟ್ಟಿದ ಕಿವಿಗಿಂತ ಆಮೇಲೆ ಹುಟ್ಟಿದ ಕೋಡೇ ಮುಂದಾಯಿತು; ಅದು ತಿವಿಯುವುದಕ್ಕೂ ಮೊದಲಾಯಿತು. ಕನ್ನಡದ ಅಭಿಮಾನವೆಂಬ ಮಗು ತಕ್ಕ ಗೆಜ್ಜೆ ಹಾಕಿಕೊಂಡು ಮುಂದೆ ಮುಂದೆ ಬರುತ್ತಿದ್ದದ್ದು ಹಿಂದಕ್ಕೆ ಸರಿಯಿತು.

## ಇಂಗ್ಲಿಷು ಮತ್ತು ಕನ್ನಡ

ನಮ್ಮ ದೇಶದ ಭಾಷಾಸಮಸ್ಯೆಯನ್ನು ಕುರಿತು ವಿಚಾರಮಾಡುವಾಗ ಇಂಗ್ಲಿಷನ್ನು ಅನ್ಯಭಾಷೆಯೆಂದು ಅನಾದರ ಮಾಡುವುದು ರೂಢಿಯಾಗಿದೆ. ಈ ವಿಚಾರದಲ್ಲಿ ನನ್ನ ಅಭಿಪ್ರಾಯ ಸ್ಪಷ್ಟವಾಗಿದೆ. ಇಂಗ್ಲಿಷಿನಿಂದ ನಮಗೆ ಅಪಕಾರವಾಗಿಲ್ಲ; ಉಪಕಾರವೇ ಆಗಿದೆ; ಅದರಿಂದ ಆಗಬೇಕಾದ ಉಪಕಾರ ಇನ್ನೂ ಬಹಳವಾಗಿದೆ. ಅದು ಅನ್ಯಭಾಷೆ ನಿಜ; ಆದರೇನು? ಸಂಸ್ಕೃತ ಅನ್ಯಭಾಷೆಯಲ್ಲವೆ? ಇಂಗ್ಲಿಷಿಗೂ ಸಂಸ್ಕೃತಕ್ಕೂ ಇರುವ ನಿಕಟಸಂಬಂಧ, ರಕ್ತಸಂಬಂಧ, ಕನ್ನಡಕ್ಕೂ ಸಂಸ್ಕೃತಕ್ಕೂ ಇದೆಯೆ? ಸಂಸ್ಕೃತ ಇಂದು ನಮ್ಮ ಮಾತಿನ ಮೂಲೆಮೂಲೆಗೂ ಸಂದುಗೊಂದಿಗೂ, ನಮ್ಮ ಜೀವನದಲ್ಲಿ ಹಿರಿಯರು ವಸ್ತುಗಳಂತೆ, ತುಂಬಿಕೊಂಡು ಇದನ್ನು ಬಿಟ್ಟರೆ ಗತಿ ಇಲ್ಲ ಎಂದು ಭ್ರಮೆಗೊಳ್ಳುವಂತಿದ್ದರೂ ಅದು ನಮ್ಮದು ಹೇಗಾಯಿತು? ಸಂಸ್ಕೃತಕ್ಕೆ ಕೊಟ್ಟ ಕಾಲಾವಕಾಶ, ಆಶ್ರಯಾವಕಾಶಗಳಲ್ಲಿ ಸಾವಿರದಲ್ಲಿ ಒಂದು ಪಾಲನ್ನು ಇಂಗ್ಲಿಷಿಗೆ ಕೊಟ್ಟರೆ ಆಗ ಕನ್ನಡವು ತನ್ನ ಗುಣಶ್ರೀವೃದ್ಧಿಯನ್ನು ಇಂಗ್ಲಿಷಿನಿಂದಾಗಿ ಪಡೆದೀತು. ಇಷ್ಟು ಮಾತ್ರಕ್ಕೆ ಇಂಗ್ಲಿಷು ನಮ್ಮದಾದೀತೇ! ಈ ಮಾತನ್ನು ಇನ್ನೂ ಸೂಕ್ಷ್ಮವಾಗಿ ಬೇರೊಂದು ಸಂದರ್ಭದಲ್ಲಿ ಹೇಳಿದಾಗ ನನ್ನ ಪ್ರಾಜ್ಞ ಮಿತ್ರರಾದ ಪಂಡಿತರೊಬ್ಬರು ತಮ್ಮ ಅಸಮಾಧಾನವನ್ನು ತೋರಿಸಿದರು. ಅವರು ಸಂಸ್ಕೃತ ತೆಲುಗುಗಳಲ್ಲಿ ಗಣ್ಯರಾದ ಪಂಡಿತರು. ಇಂಗ್ಲಿಷನ್ನೂ ಚೆನ್ನಾಗಿ ಬಲ್ಲವರು. ತೆಲುಗು ಅವರ ಮಾತೃಭಾಷೆಯಾದರೂ ಸಂಸ್ಕೃತದಲ್ಲಿ ಪಾಂಡಿತ್ಯ ಬಂದಿದ್ದ ಮಾತ್ರಕ್ಕೆ ಅದು ಅನ್ಯಭಾಷೆಯಲ್ಲವೆನ್ನುವುದು ಹೇಗೆ? ಇಂಗ್ಲಿಷಿನಲ್ಲಿ ದೊಡ್ಡ ಪ್ರಶಸ್ತಿ ಪಡೆದು ಕಾಲೇಜಿನ ದೊಡ್ಡ ತರಗತಿಗಳಿಗೆ ಅದನ್ನು ಪಾಠಹೇಳುವ ಕನ್ನಡಿಗ

ಉಪಾಧ್ಯಾಯನು ಇಂಗ್ಲಿಷು ಅನ್ಯಭಾಷೆಯಲ್ಲ ಎನ್ನುವುದಕ್ಕಾದೀತೇ? ಇಂಗ್ಲಿಷಿನಲ್ಲಿ ಪಾಂಡಿತ್ಯವುಳ್ಳವನಿಗೆ ಫ್ರೆಂಚು ಕಲಿಯುವುದು ಸುಲಭ. ಏಕೆಂದರೆ ಅವುಗಳಲ್ಲಿ ಅರ್ಥಕ್ಕರ್ಥ ಪದಗಳು ಒಂದೇ ಆಗಿರುತ್ತದೆ. ಸಂಸ್ಕೃತ ಕನ್ನಡಗಳಲ್ಲಿಯೂ ಹೀಗೆಯೇ ಇರಬಹುದು—ಇಷ್ಟು ಮಾತ್ರಕ್ಕೆ ಸಂಸ್ಕೃತ ನಮ್ಮದಾಗುತ್ತದೆಯೇ? ಫ್ರೆಂಚ್ ಇಂಗ್ಲಿಷಿನವರದಾಗುತ್ತದೆಯೇ?

ಈಗ್ಗೆ ಎರಡುಸಾವಿರ ವರ್ಷಗಳ ಕೆಳಗೋ ಮೂರುಸಾವಿರ ವರ್ಷಗಳ ಕೆಳಗೋ ಆರ್ಯರಿಗೆ ಬದಲಾಗಿ ಇಂಗ್ಲಿಷರು ನಮ್ಮಲ್ಲಿಗೆ ಬಂದು ನೆಲಸಿ ಸಂಸ್ಕೃತ ಈಗ ಎಷ್ಟು ಸೇರಿಹೋಗಿದೆಯೋ ಇಂಗ್ಲಿಷೂ ಅಷ್ಟು ಸೇರಿ ಹೋಗಿದ್ದರೆ ಆಗ ಇಂಗ್ಲಿಷನ್ನು ನಮ್ಮದೆನ್ನುತ್ತಿದ್ದೆವೇ? ಇದನ್ನು ನಮ್ಮ ಮನಸ್ಸಿನಲ್ಲಿ ಪರಿಷ್ಕಾರಮಾಡಿಕೊಳ್ಳಬೇಕು. 'ಹಿಂದೆ ಏನಾದರೂ ಆಗಿದ್ದಿರಲಿ: ದೈವಘಟನೆಯಿಂದ ಸಂಸ್ಕೃತಕ್ಕೂ ಕನ್ನಡಕ್ಕೂ ಸಂಬಂಧವೊದಗಿತು; ಅದರಿಂದ ಬೇಕಾದಷ್ಟು ಉಪಕಾರವೂ ಆಯಿತು. ಇನ್ನೂ ಆಗತಕ್ಕದ್ದಿದೆ: ಈಗ ಅದನ್ನು ಬಿಟ್ಟು ಬಿಡುವಹಾಗಿಲ್ಲ'—ಎಂದರೆ ಆಗ ಯುಕ್ತಿಯುಕ್ತವಾಯಿತು, ಲೌಕಿಕ ನ್ಯಾಯವಾಯಿತು. ಈ ಯುಕ್ತಿ ನ್ಯಾಯಗಳು ಇಂಗ್ಲಿಷಿಗೂ ಅನ್ವಯಿಸಬಹುದು. ಇಂಗ್ಲಿಷು ಬರಿಯ ಇಂಗ್ಲೆಂಡ್ ಜನರ ಭಾಷೆಯಲ್ಲ, ಪ್ರಪಂಚದ ಬಹುಭಾಗದ ಭಾಷೆ; ಆ ಭಾಷೆಯಮೂಲಕ ಇತರ ಭಾಷೆಗಳ ಸಾಹಿತ್ಯವನ್ನೂ ಇತರ ದೇಶಗಳ ವರ್ತಮಾನಗಳನ್ನೂ ಸುಲಭವಾಗಿ ತಿಳಿದುಕೊಳ್ಳಬಹುದು. ವೇದ, ದರ್ಶನ, ಶಾಸ್ತ್ರ ಎಲ್ಲವುಗಳನ್ನೂ ಒಂದು ತಿಂಗಳಿನಲ್ಲಿ ಇಂಗ್ಲಿಷಿನ ಮೂಲಕ ಓದಿ ಮುಗಿಸಬಹುದು; ಸಂಸ್ಕೃತ ಪಂಡಿತರಿಂದಲೂ ಇದನ್ನು ಇಷ್ಟು ಬೇಗ ಮೂಲದಲ್ಲಿ ಓದಿಮುಗಿಸುವುದು ಸಾಧ್ಯವಲ್ಲ.—ನಮ್ಮೂರಿನ ವರ್ತಮಾನವನ್ನು ಬೆಳಗೆದ್ದು ಪತ್ರಿಕೆಗಳಲ್ಲಿ ಓದುವುದಕ್ಕಿಂತ ಮುಂಚೆ ಬಿ.ಬಿ.ಸಿ. ರೇಡಿಯೋ ಮುಂದಿರದಿಂದ ಕೇಳಿ ತಿಳಿದುಕೊಳ್ಳುವ ಹಾಗೆ. ಹೀಗೆ ಇಂಗ್ಲಿಷಿನ ಮೂಲಕ ಸಾಕ್ಷಾತ್ತಾಗಿಯೋ ಪರಂಪರೆಯಿಂದಲೋ ಗಳಿಸುವುದು ಸಾಧ್ಯವಾಗಿರುವಾಗ, ಅದಕ್ಕೆ ಅವಕಾಶವಿರುವಾಗ, ಗಳಿಸೋಣ. ಅಲ್ಲದೆ, ನಮ್ಮನ್ನು ನಾವು ತಿಳಿದುಕೊಳ್ಳುವುದಕ್ಕೆ ಸಹಾಯ

ಮಾಡಿದ್ದು ಇಂಗ್ಲಿಷು. ನಮ್ಮಲ್ಲಿ ನವಚೈತನ್ಯವನ್ನುಂಟುಮಾಡಿದ್ದು ಇಂಗ್ಲಿಷು. ಸ್ವಹಸ್ತ ಪರಹಸ್ತಗಳಿಂದ ನಮ್ಮ ಕಣಜವನ್ನು ತುಂಬುವ ಸಂಪತ್ತು ಉಳ್ಳದ್ದು ಇಂಗ್ಲಿಷು. ಅದರ ಸಹಾಯದಿಂದ ಇತರ ಪಾಶ್ಚಾತ್ಯ ಭಾಷೆಗಳನ್ನು ಸುಲಭವಾಗಿ ಕಲಿತುಕೊಳ್ಳಬಹುದು; ಪಾಶ್ಚಾತ್ಯ ಪ್ರಪಂಚದೊಡನೆ, ವಿಶ್ವದೊಡನೆ, ವ್ಯವಹಾರ ನಡಸಬಹುದು. ಆದ್ದರಿಂದ ಇದನ್ನು ಸದ್ಯಕ್ಕಾದರೂ ತಿರಸ್ಕರಿಸುವುದು ನನಗೆ ಒಪ್ಪಿಗೆಯಾದದ್ದಲ್ಲ.

ಹೀಗೆಂದರೆ, ಎಲ್ಲರೂ ಇಂಗ್ಲಿಷನ್ನು ಕಡ್ಡಾಯವಾಗಿ ಕಲಿಯಬೇಕೆಂಬುದಾಗಲಿ, ಎಲ್ಲರೂ ಇಂಗ್ಲಿಷಿನಲ್ಲಿ ವಿದ್ವಾಂಸರಾಗಬೇಕೆಂಬುದಾಗಲಿ ನನ್ನ ಅಭಿಪ್ರಾಯವಲ್ಲ. ಇಂಗ್ಲಿಷಿಗೆ ನಮ್ಮ ಶಿಕ್ಷಣದಲ್ಲಿ ಸ್ಥಾನವಿರಬೇಕೆಂಬುದಿಷ್ಟೇ ನನ್ನ ಆಶಯ. ಆ ಸ್ಥಾನವೇನು ಎಂಬುದನ್ನು ಮುಂದೆ ಹೇಳುತ್ತೇನೆ. ಅದಕ್ಕಿಂತ ಪ್ರಧಾನವಾದ ಸ್ಥಾನವಿರಬೇಕಾದದ್ದು ಮಾತೃಭಾಷೆಗೆ. ಮಾತೃಭಾಷೆಯ ಮೂಲಕ ಕಲಿತದ್ದೇ ಮೈಹತ್ತುವುದು: ಮಾತೃಭಾಷೆಯಲ್ಲಿ ಬರೆದದ್ದೇ ನಿಲ್ಲುವುದು. ಪರಭಾಷೆಯಲ್ಲಿ ಯಾರು ಎಷ್ಟು ಪಂಡಿತರಾಗಿ ಏನು ಬರೆಯಲಿ ಅದು ಆ ಸಾಹಿತ್ಯಕ್ಕೆ ಸೇರಿ, ಗಣ್ಯವಾದ ಸ್ಥಾನಪಡೆಯುತ್ತದೆಯೋ ಎಂಬುದು ಸಂದೇಹ. ರೈಸ್, ಕಿಟ್ಟೆಲ್, ಫ್ಲೀಟ್ ಮುಂತಾದವರು ಕನ್ನಡವನ್ನು ಚೆನ್ನಾಗಿ ಕಲಿತರು; ಅವರು ಕನ್ನಡದಲ್ಲಿ ಬರೆದದ್ದೇನು? ಬರೆದ ಅಲ್ಪ ಸ್ವಲ್ಪಗಳು ಪ್ರಾಕ್ತನ ವಸ್ತುಸಂಗ್ರಹ ಶಾಲೆಯಲ್ಲಿ ಇಡುವುದಕ್ಕೆ ಯೋಗ್ಯವಾದವು. ರವೀಂದ್ರನಾಥ ಠಾಕೂರರು ಇಂಗ್ಲಿಷನ್ನು ಇಂಗ್ಲಿಷರಿಗಿಂತ ಚೆನ್ನಾಗಿ ಬರೆಯಬಲ್ಲ ಶಕ್ತಿಯನ್ನು ಗಳಿಸಿದರು: ನೋಬೆಲ್ ಬಹುಮಾನ ಬಂತು; ಆದರೆ ಅವರ ಕಾವ್ಯಗಳು ಇಂಗ್ಲಿಷ್ ಸಾಹಿತ್ಯಚರಿತ್ರೆಯಲ್ಲಿ ಸ್ಥಾಯಿಯಾದ ಸ್ಥಾನ ಪಡೆಯುತ್ತವೆಯೋ? ಸರ್ ಎಸ್. ರಾಧಾಕೃಷ್ಣನ್, ಸರ್ ಸಿ. ವಿ. ರಾಮನ್, ಮುಲ್ಲಾ, ಗಂಗಾನಾಥ ಝಾ ಮುಂತಾದ ಮಹನೀಯರ ಶಾಸ್ತ್ರೀಯ ಗ್ರಂಥಗಳು, ಅವುಗಳಲ್ಲಿನ ಪ್ರತಿಪಾದ್ಯವಿಷಯಕ್ಕಾಗಿ, ನಿಲ್ಲಬಹುದು. ಆದರೂ ಅಂಥವರು ಎಷ್ಟುಮಂದಿ ಇದ್ದಾರು? ಭರತಖಂಡಕ್ಕೆಲ್ಲಾ ಬೆರಳುಮಡಿಸುವಷ್ಟು ಜನ ಕೂಡ ದೊರೆಯಲಾರರು.

ಅದೇ ಮಾತೃಭಾಷೆಯಲ್ಲಿ? ಅದನ್ನು ಲಕ್ಷ್ಯಮಾಡುವುದಕ್ಕಾದೀತೇ? 'ತಂತಮ್ಮ ನುಡಿಯೊಳೆಲ್ಲಂ ಜಾಣರ್'! ಈಚೆಗೆ ಇಪ್ಪತ್ತೈದು ಮೂವತ್ತು ವರ್ಷಗಳಿಂದ ಸಂಸ್ಕೃತದ ಹಿಡಿತ ತಪ್ಪಿಸಿಕೊಂಡು, ಇಂಗ್ಲಿಷಿಗೆ ಸೆರೆಯಾಗದೆ, ತನ್ನ ಜಾಡನ್ನು ತಾನು ಕಂಡುಕೊಂಡು ಕನ್ನಡ ಸಾಹಿತ್ಯವಾಹಿನಿ ಹರಿಯುತ್ತಿರುವುದನ್ನು ನೋಡಿದರೆ ಯಾರಿಗಾದರೂ ಇದರ ನಿಜಾಂಶವು ಮನವರಿಕೆಯಾಗುವುದು. ಆದ್ದರಿಂದ ಇಂಗ್ಲಿಷಿಗಿಂತ ಉತ್ತಮ ಸ್ಥಾನವು ಮಾತೃಭಾಷೆಗೆ ಸಲ್ಲಬೇಕು.

## ದೇಶಭಾಷೆ ಮತ್ತು ಕನ್ನಡ

ನಮ್ಮ ದೇಶದಲ್ಲಿ ಇವೆರಡಕ್ಕಿಂತ ಬೇರೆಯಾಗಿ 'ದೇಶಭಾಷೆ' ಅಥವಾ 'ಪ್ರಾಂತ ಭಾಷೆ'ಯೆಂಬುದೊಂದನ್ನು ಗ್ರಹಿಸಬೇಕು—ಇದು ಅನ್ಯ ಭಾಷೆಯವರ, ಅಥವಾ ಅನ್ಯ ಪ್ರಾಂತದವರ ದೃಷ್ಟಿಯಿಂದ. ಹೀಗೆ ಬಂಗಾಳದಲ್ಲಿ ಹೋಗಿ ನೆಲಸಿರುವ ಕನ್ನಡಿಗರಿಗೆ ಬಂಗಾಳಿ ದೇಶಭಾಷೆ, ತಂಜಾವೂರಿನಲ್ಲಿ ಹೋಗಿ ನೆಲಸಿರುವ ಕನ್ನಡಿಗರಿಗೆ ತಮಿಳು ದೇಶಭಾಷೆ, ಪಂಜಾಬಿನಲ್ಲಿ ಹೋಗಿ ನೆಲಸಿರತಕ್ಕವರಿಗೆ ಪಂಜಾಬಿ ದೇಶಭಾಷೆ. ಕನ್ನಡಿಗನ ಜೀವನದಲ್ಲಿ ಇವರ ಸ್ಥಾನವೇನು? ಕನ್ನಡದ ಸ್ಥಾನವೇನು? ಎಂದರೆ, ಅಲ್ಲಲ್ಲಿ ಹೋಗಿ ನೆಲಸಿರತಕ್ಕ ಕನ್ನಡಿಗರಿಗೂ ಕನ್ನಡಕ್ಕೂ ಋಣಾನುಬಂಧ ಹರಿದುಹೋಯಿತೇ? ಅವನೂ ಅವನ ಮನೆಯ ಹೆಂಗಸರೂ ಆ ದೇಶಭಾಷೆಯನ್ನು ಕಲಿಯಬೇಡವೇ? ಅವನ ಮಕ್ಕಳು ಕನ್ನಡ ಕಲಿಯಬೇಕೆಂದರೆ ಸರಕಾರವು ಅವಕ್ಕೆ ಅನುಕೂಲ ಮಾಡಬೇಡವೇ? ವ್ಯವಹಾರಕ್ಕೆ ತಕ್ಕಷ್ಟು ದೇಶಭಾಷೆ ಬಂದೇ ಬರುತ್ತದೆ; ಬರದಿದ್ದರೆ ಕಲಿಯಬೇಕು. ಈಗಿನ ಸ್ಥಿತಿಯಲ್ಲಿ, ಇವೊತ್ತು ಒಂದು ಪ್ರಾಂತ, ಇನ್ನು ಆರು ತಿಂಗಳಿಗೆ ಮತ್ತೊಂದು ಪ್ರಾಂತ, ಹೀಗೆ ತಿರುಗುವ ಸರ್ಕಾರಿ ಅಧಿಕಾರಿಯ ಮಾತಿರಲಿ, ಒಂದೇ ಪ್ರಾಂತದಲ್ಲಿ ಒಂದೇ ಊರಿನಲ್ಲಿ ತನ್ನ ಉದ್ಯೋಗಜೀವನವನ್ನೆಲ್ಲಾ ಕಳೆದು, ಸಾವಿರಾರು ರೂಪಾಯಿ ಸಂಬಳಗಾರನಾಗಿದ್ದೂ, ಜನಜೀವನಕ್ಕೆ ನಿಕಟ ಸಂಬಂಧವಿದ್ದ ಕಾರ್ಯದಲ್ಲಿದ್ದೂ, ದೇಶಭಾಷೆಯ ಒಂದು ಅಕ್ಷರವನ್ನೂ ಕಲಿಯದೆ

ವಿಶ್ರಾಂತಿ ಪಡೆದು ವಿದೇಶವನ್ನು ಸೇರಿಕೊಳ್ಳುವವರ ಉದಾಹರಣೆಗಳು ಇವೆ. ಇಂಥವರ ಮಾತಿರಲಿ. ಸರ್ ವಿಲಿಯಂ ಜೋನ್ಸ್, ಮೆಕೆಂಜಿ, ಬರ್ಗೆಸ್ ಮುಂತಾದ ಪಾಶ್ಚಾತ್ಯ ಪಂಡಿತರು ದೇಶಭಾಷೆಯನ್ನು ಕಲಿಯದಿದ್ದರೂ ನಡೆಯುತ್ತಿತ್ತು: ಆದರೂ ಅವರು ಕುತೂಹಲದಿಂದ, ಜ್ಞಾನ ಪಿಪಾಸೆಯಿಂದ, ಅಭಿಮಾನದಿಂದ, ಇಲ್ಲಿಯ ಭಾಷೆಯನ್ನು ಕಲಿತರು; ಜನದಲ್ಲಿ ಬೆರೆತರು: ತಮ್ಮ ಭಾಷೆಯಲ್ಲೇ ಬರೆದರೂ ಎಷ್ಟೋ ಉಪಕಾರವಾಯಿತು; ಅವರ ಜೀವನವೂ ಫಲಮಯವಾಯಿತು. ಇದರಿಂದ ನಾವು ಪಾಠ ಕಲಿಯುವುದಾದರೆ, ದೇಶಭಾಷೆಯನ್ನು ತಿರಸ್ಕರಿಸುವುದು ಉಚಿತವಲ್ಲ; ಎಷ್ಟೋ ವೇಳೆ, ಆಟಗಾರನಿಗಿಂತ ಆಟವನ್ನು ನೋಟಗಾರನು ಗ್ರಹಿಸುವಂತೆ, ಮತ್ತೊಂದು ಭಾಷೆಯ ಕಷ್ಟ ಸುಖಗಳನ್ನು ಹೊರಗಿನವನು ಗ್ರಹಿಸುತ್ತಾನೆ; ಅಲ್ಲದೆ ಸ್ನೇಹ ವಿಶ್ವಾಸಗಳು ಬೆಳೆಯಲು ಆಯಾ ಜನರ ಭಾಷೆಯಲ್ಲಿಯೇ ವ್ಯವಹರಿಸುವುದು ಒಂದು ದೊಡ್ಡ ಸಾಧನ. ಆಗ ಸ್ನೇಹವಿಶ್ವಾಸಗಳು ಬಾಂಧವ್ಯ ಮಮತೆಗಳಾಗಿ ಪರಿಣಮಿಸುತ್ತವೆ.

ಇದಕ್ಕೆ ಕನ್ನಡಿಗರು ತಾವು ಗರಿಗಟ್ಟಿಕೊಳ್ಳಬೇಕು, ಕರ್ಣಾಟಕದ ದೃಷ್ಟಿಯಿಂದ ಕೆಲಸ ಮಾಡಬೇಕು. ಆದರ್ಶವನ್ನು ಮುಂದಿಟ್ಟುಕೊಂಡಿರಬೇಕು; ಆದರೆ ಇರುವುದನ್ನು ಕಳೆದುಕೊಳ್ಳಬಾರದು; ವಿಧಿನಿಯಮಗಳನ್ನು ಮೀರಬಾರದು; ಶಾಂತಿಯಿಂದಲೂ ವಿವೇಕದಿಂದಲೂ ವರ್ತಿಸಬೇಕು. ಎಂದರೆ ಪ್ರಕೃತ ರಾಜಕೀಯ ಸ್ಥಿತಿಯಲ್ಲಿ ಕನ್ನಡಿಗರು, ತಾವು ಕನ್ನಡಿಗರು, ತಮ್ಮ ತಾಯಿನುಡಿ ಕನ್ನಡ, ಅದು ಉಳಿಯಬೇಕು, ಅದರಿಂದ ತಾವು ಬದುಕಬೇಕು, ಬೆಳೆಯಬೇಕು ಎಂಬುದನ್ನು ನಿರ್ಧರ ಮಾಡಿಕೊಂಡು, ಅದನ್ನು ಉಳಿಸಿ ತಾವೂ ಉಳಿದು ಶಕ್ತಿಗಳಿಸಬೇಕು, ವಿದ್ಯೆಗಳಿಸಬೇಕು, ಸಂಪತ್ತುಗಳಿಸಬೇಕು. ಕನ್ನಡಿಗರು ಒಕ್ಕಟ್ಟಾಗಲು ಇರುವ ಏಕಮಾತ್ರ ಸಾಧನ ಅವರ ನುಡಿ; ಸಾವಿರಾರು ವರ್ಷಗಳಿಂದ ಧೃಷ್ಟಪುಷ್ಟವಾಗಿ ಕಲ್ಪವೃಕ್ಷದಂತೆ ಬೆಳೆದು ಸಕಲ ಇಷ್ಟಾರ್ಥವನ್ನೂ ಕೊಡಬಲ್ಲ ಅವರ ನುಡಿ. ಅದನ್ನು ಬಿಟ್ಟರೆ ಮಿಕ್ಕೆಲ್ಲವೂ ಭೇದಕ್ಕೆ ಕಾರಣವೇ ಹೊರತು ಒಕ್ಕಟ್ಟಿಗೆ ಕಾರಣಗಳಲ್ಲ—

ಜಾತಿ, ಮತ, ವೇಷ, ಭೂಷ, ಊಟ, ತಿಂಡಿ, ಸರ್ಕಾರ, ಮುಂತಾದವು. ಕನ್ನಡಿಗರು ತಮ್ಮ ಕನ್ನಡವನ್ನೂ ಕನ್ನಡತನವನ್ನೂ ಉಳಿಸಿಕೊಂಡರೆ ಅದೇ ಸಾಕಾಗಿದೆ. ಆದ್ದರಿಂದ “ನಾವು ಮೊದಲು ಕನ್ನಡಿಗರು, ಅನಂತರ ಭಾರತೀಯರು” ಎಂದರೆ ಅದು ಸ್ವಾಭಾವಿಕ, ಕಾರ್ಯಸಾಧ್ಯ, ಕ್ಷೇಮ ಕರ, ಅವಶ್ಯಕರ್ತವ್ಯ. ಇವಿಷ್ಟೂ ನೈಸರ್ಗಿಕ ದೃಷ್ಟಿಯಿಂದ, ವ್ಯಾವ ಹಾರಿಕ ದೃಷ್ಟಿಯಿಂದ, ವಿವೇಕದೃಷ್ಟಿಯಿಂದ, ಅವಶ್ಯಕವಾದವುಗಳು. ಇವುಗಳಲ್ಲಿ ಮಾತೃಭಾಷೆಗೆ ಮೊದಲನೆಯ ಸ್ಥಾನ, ದೇಶಭಾಷೆ ಎರಡನೆ ಯದು, ಇಂಗ್ಲಿಷು ಮೂರನೆಯದು. ಎಲ್ಲಿ ಮಾತೃ ಭಾಷೆಯೇ ದೇಶ ಭಾಷೆಯಾಗಿರುತ್ತದೆಯೋ ಅಲ್ಲಿ ದಾರಿ ಸುಗಮವಾಯಿತು; ಸೋದರಳಿ ಯನೇ ಸ್ವಂತ ಅಳಿಯನಾದಂತಾಯಿತು; ನೆಂಟೂ ಉಳಿಯಿತು, ಗಂಟೂ ಉಳಿಯಿತು; ಇಲ್ಲದಿದ್ದರೆ, ಹೊರಗಿನಿಂದ ಒಬ್ಬ ಹುಡುಗನನ್ನು ಹಿಡಿ ತಂದು, ವರಪೂಜೆ ಮಾಡಿ, ಮಗಳನ್ನು ಕೊಟ್ಟು, ಬಳುವಳಿ ಕೊಟ್ಟು, ಉಪಚಾರಮಾಡಿ ಒಲಿಸಿಕೊಂಡಂತಾಯಿತು. ಮಗನ ಜೊತೆಗೆ ಅವನೂ ಒಬ್ಬ—ಮಗಳ ಗಂಡ. ಮಿಕ್ಕ ಭಾಷೆಗಳು ಮನೆಗೆ ಬರುವ ನೆಂಟರು ಇಷ್ಟರ ಹಾಗೆ; ಆದರೆ ಅವರೆಲ್ಲರನ್ನೂ ಮಗನಂತೆ, ಅಳಿಯನಂತೆ ಕಾಣುವುದಕ್ಕಾಗುವುದಿಲ್ಲ.

ಕೆಲವರಿಗೆ ದೇಶಭಾಷೆಯೇ ಮಾತೃಭಾಷೆಗಿಂತ ಸುಗಮವಾದ ಉದಾಹರಣೆಗಳಿವೆ. ಶ್ರೀಮಾನ್ ಆರ್. ನರಸಿಂಹಾಚಾರ್ಯರು, ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, ಡಿ. ವಿ. ಗುಂಡಪ್ಪನವರು, ಕೈಲಾಸಂ- ಇವರ ಮನೆ ಮಾತು ತಮಿಳು; ಕಸ್ತೂರಿಯವರ ಮನೆ ಮಾತು ಮಲೆಯಾಳ; ಚ. ವಾಸುದೇವಯ್ಯನವರು, ಟಿ. ಎಸ್. ವೆಂಕಣ್ಣಯ್ಯ ನವರು, ಬಿ. ಕೃಷ್ಣಪ್ಪನವರು ಇವರ ಮನೆಮಾತು ತೆಲುಗು. ಇವರೆ ಲ್ಲರೂ ಪ್ರಸಿದ್ಧ ಕನ್ನಡ ವಿದ್ವಾಂಸರೋ ಲೇಖಕರೋ ಆಗಿದ್ದಾರೆ. ಅವರವರ ಮಾತೃಭಾಷೆಗಿಂತ ದೇಶಭಾಷೆಯೇ ಅವರಿಂದ ಹೆಚ್ಚು ಉಪಕಾರವನ್ನು ಪಡೆದಿದೆ. ಇದಕ್ಕೆ ಕಾರಣ—ಅವರು ಬಹು ದಿವಸ ದಿಂದ ಕನ್ನಡನಾಡಿನಲ್ಲಿ ನೆಲಸಿರತಕ್ಕವರು; ಕನ್ನಡವನ್ನೇ ಶಾಲೆಯಲ್ಲಿ ವ್ಯಾಸಂಗ ಮಾಡಿದವರು; ಕನ್ನಡದಲ್ಲಿ ಅಭಿಮಾನವುಳ್ಳವರು; ಕನ್ನಡಿ

ಗರಲ್ಲಿ ಸ್ನೇಹಬಾಂಧವ್ಯಗಳನ್ನು ಬೆಳಸಿಕೊಂಡು ಬಂದವರು. ಇವೆಲ್ಲಕ್ಕಿಂತ ಹೆಚ್ಚಾಗಿ, ತೆಲುಗು ತಮಿಳು ಮಲೆಯಾಳಗಳಿಗೆ ಕನ್ನಡವು ಅಕ್ಕತಂಗಿಯ ಹಾಗೆ. ಆದ್ದರಿಂದ, ಮೇಲೆ ಹೇಳಿದಂಥ ವಿದ್ವಾಂಸರು ತಮ್ಮ ಚಿಕ್ಕಮ್ಮ ದೊಡ್ಡಮ್ಮನ ಮುದ್ದಿನಲ್ಲಿ ಬೆಳೆದವರು: ಅವರಿಗೆ ಕನ್ನಡವ ಕುರುಹು ಕಷ್ಟವಲ್ಲ; ತೆಲುಗಿನವರು 'ಅಣ್ಣ' ನನ್ನು 'ಅನ್ನ' ಎನ್ನಬಹುದು. ಅಣ್ಣನಿಗೂ ಅನ್ನನಿಗೂ ತುಂಬ ದೂರವಿಲ್ಲ; ಅದೇ 'ಭಾಯಿ' ಯು ಇಬ್ಬರಿಗೂ ದೂರ. ನನಗೆ ತೆಲುಗು ತಮಿಳುಗಳಲ್ಲಿ ಇರುವ ಧೈರ್ಯ ಬಂಗಾಳಿಯಲ್ಲಿ ಇಲ್ಲ.

## ಸಂಸ್ಕೃತ ಮತ್ತು ಕನ್ನಡ

ಹೀಗೆ, ನಮ್ಮ ದೇಶದಲ್ಲಿ ವಿದ್ಯಾವಂತನೆನಿಸಿಕೊಳ್ಳಬೇಕಾದವನು, ತನ್ನ ಜನಕ್ಕೆ ತಿಳಿವಳಿಕೆ ಕೊಡಬಲ್ಲವನಾಗಬೇಕೆನ್ನುವವನು, ನೆಲಸಿದ ಕಡೆ ಬಾಳಿ ಬದುಕಬೇಕೆನ್ನುವವನು, ಈ ಎರಡು ಭಾಷೆಗಳನ್ನಾದರೂ ಕಲಿಯಬೇಕು. ಇದಾದಮೇಲೆ ಬರತಕ್ಕದ್ದು ಸಂಸ್ಕೃತ. ಇದು, ಬೇರೆ ವಂಶಕ್ಕೆ ಸೇರಿದ್ದರೂ, ಎಷ್ಟೋ ವರ್ಷದಿಂದ ಸಂಸಾರದಲ್ಲಿ ಸೇರಿಕೊಂಡು ಮನೆಯವರಿಗಿಂತ ಹೆಚ್ಚಾಗಿರುವ ವೈದಿಕ ಹಿರಿಯರಂತೆ ಇದೆ: ಹುಡುಗರೆಲ್ಲರೂ ಅವರನ್ನು 'ತಾತ' 'ಅಜ್ಜ' ಎಂದು ಕರೆದು ಗೌರವದಿಂದ ನಡೆಸಿಕೊಳ್ಳುವಂತೆ. ನಾವೂ ಇದನ್ನು ಆರ್ಯಭಾಷೆ, ವೇದಭಾಷೆ, ಶಾಸ್ತ್ರಭಾಷೆಯೆಂದು ಕರೆದು ಗೌರವಿಸುತ್ತಿದ್ದೇವೆ. ಇದರ ಪ್ರಾಬಲ್ಯ ಎಷ್ಟರಮಟ್ಟಿಗಾಗಿದೆಯೆಂದರೆ, ಇದು ಇಂಡಿಯಕ್ಕೆ' ಬರದಿದ್ದರೆ ಇಂದು ನಾವು ಹೇಗಿರುತ್ತಿದ್ದೆವು, ನಮ್ಮ ಭಾಷಾ ಸಾಹಿತ್ಯ ಸಂಸ್ಕೃತಿಗಳು ಹೇಗಿರುತ್ತಿದ್ದುವು ಎಂದು ಯೋಚಿಸುವುದು ಕೂಡ ಕಷ್ಟವಾಗುವುದು. ಆರ್ಯರು ನಮ್ಮ ದೇಶಕ್ಕೆ ಬಂದಾಗ ದ್ರಾವಿಡರು ಅನಾಗರಿಕರೇನಾಗಿರಲಿಲ್ಲ; ಆರ್ಯರಿಗಿಂತ ಅವರೇ ನಾಗರಿಕತೆಯಲ್ಲಿ ಮೇಲಾಗಿದ್ದರು; ಆದರೆ ಆರ್ಯರು ತೇಜಶ್ಶಾಲಿಗಳು, ವೈಭವಶಾಲಿಗಳು, ವ್ಯಾಪನಶಾಲಿಗಳು, ಅವರು ಎಲ್ಲವನ್ನೂ ಒಳಹಾಕಿಕೊಂಡರು. ಹೊಸದಕ್ಕೆ, ದರ್ಪಕ್ಕೆ, ಅಧಿಕಾರಕ್ಕೆ ಸೋಲುವುದು ಸ್ವಭಾವ; ಆದ್ದರಿಂದ ಆವಶ್ಯಕವಾದ ಎಡೆ

ಯಲ್ಲಿ, ಅದಕ್ಕಿಂತ ಹೆಚ್ಚಾಗಿ ಅನಾವಶ್ಯಕವಾದ ಎಡೆಯಲ್ಲಿ, ಸಂಸ್ಕೃತ ಉಪಯೋಗವಾಗುತ್ತ ಬಂತು:—ಈಗ ಇಂಗ್ಲಿಷ್ ತಿಳಿದವರು ನಮ್ಮ ಫಾದರ್ ಹೀಗೆ ಹೇಳಿದರು, ನಮ್ಮ ಮದರ್ ಬಂದರು, ನನ್ನ ವೈಫ್ ಒಳ್ಳೆ ಚೆನ್ನಾಗಿ ಅಡಿಗೆ ಮಾಡುತ್ತಾಳೆ ಎಂದು ಮಾತನಾಡುವುದಿಲ್ಲವೇ, ಹಾಗೆ. ಕನ್ನಡ ಸಂಸ್ಕೃತಗಳ ಒಂದಕ್ಷರವನ್ನೂ ಕಲಿಯದ ಒಕ್ಕಲಿಗನು 'ಇನ್ನೆಂಟು ದಿನಕ್ಕೆ ನಮ್ಮ ಮನೆಯಲ್ಲಿ ಲಗ್ನ' ಎನ್ನುತ್ತಾನೆ: 'ಮದುವೆ' ಎಂದರೆ ಏನೋ ಕೀಳು, 'ಲಗ್ನ' ಎಂದರೆ ಮರ್ಯಾದೆ ಎಂಬುದು ಅವನ ಭಾವ:—ಪಂಚೆ ಉಟ್ಟುಕೊಂಡರೆ ಮರ್ಯಾದೆಗೆ ಕಡಮೆ, ಷರಾಯಿ ಬೂಟು ಹಾಕಿಕೊಂಡು ಬಂದರೆ ಮರ್ಯಾದೆ ಎನ್ನುವಹಾಗೆ. ಸಂಸ್ಕೃತದ ಸಹಾಯವಿಲ್ಲದಿದ್ದರೆ ನಮಗೆ ಸಂಸ್ಕೃತಿಯೆ ಇರುತ್ತಿರಲಿಲ್ಲ ಎಂಬುದನ್ನು ನಾನು ನಂಬಲಾರೆ: ದ್ರಾವಿಡರು ಸ್ವತಂತ್ರವಾಗಿ ಬೆಳೆದುಕೊಂಡು ಬಂದಿದ್ದರೆ ಹೇಗಿರುತ್ತಿದ್ದರೋ ಬಲ್ಲವರಾರು? ಇಂದು ಪ್ರಪಂಚದಲ್ಲಿ ಉತ್ತಮವಾದ ಸಂಸ್ಕೃತಿಯುಳ್ಳವರೆಂದು ಗಣ್ಯವಾಗಿರುವ ಜನಕ್ಕೆಲ್ಲಾ ಸಂಸ್ಕೃತದ ಸಹಾಯವೇ ಇತ್ತೇ? ಅನೇಕರು, ಸಂಸ್ಕೃತದಲ್ಲಿ ಏನಿದೆ ಅದರ ಬೆಲೆ ಏನು ಇಂದಿನ ಪ್ರಪಂಚಕ್ಕೆ ಅದರಿಂದ ಎಷ್ಟು ಉಪಯೋಗ ಎಂಬುದನ್ನು ಅರಿಯದೆಯೇ ಬರಿಯ ಒಂದು ಸಾಂಪ್ರದಾಯಿಕವಾದ ಗೌರವಾಭಿಮಾನದಿಂದ ಅದನ್ನು ಎತ್ತಿ ಹಿಡಿಯುತ್ತಾರೆ. ನನಗೆ ಸಂಸ್ಕೃತದಲ್ಲಿಯೂ ಪ್ರವೇಶವಿದೆ; ಕನ್ನಡಕ್ಕಿಂತ ಅದರಲ್ಲಿ ಹೆಚ್ಚಾಗಿ ಪ್ರವೇಶವಿದೆ; ಆದ್ದರಿಂದ ನಾನು ಸಂಸ್ಕೃತದಮೇಲಿನ ನಿರಭಿಮಾನದಿಂದಾಗಲಿ, ಅದರ ಪರಿಚಯವಿಲ್ಲದೆಯಾಗಲಿ ಮಾತನಾಡುತ್ತಿಲ್ಲ. ಸಂಸ್ಕೃತದಲ್ಲಿ ಸಾರವತ್ತಾದದ್ದನ್ನು ಕೃತಜ್ಞತೆಯಿಂದ ತೆಗೆದುಕೊಳ್ಳೋಣ; ಕನ್ನಡಿಸಿಕೊಳ್ಳೋಣ: ಬರಿಯ ಅದರ 'ಗಾಂಭೀರ್ಯ'ಕ್ಕೆ ಮರುಳಾಗದಿರೋಣ; ಭಾಷೆಗಿಂತಲೂ ಭಾವ ಮುಖ್ಯ; ಭಾಷೆ ಗಾಡಿಯಿದ್ದ ಹಾಗೆ: ಗೊಬ್ಬರದ ಗಾಡಿಯಲ್ಲಿ ಚಿನ್ನದ ಗಟ್ಟಿಗಳನ್ನು ಹೇರಿಕೊಂಡು ಬಂದರೆ ಅವಕ್ಕೆ ಬೆಲೆ ಕಡಮೆಯಾಗುತ್ತದೆಯೇ? ಚಿನ್ನದ ಗಾಡಿಯಲ್ಲಿ ಗೊಬ್ಬರವನ್ನು ಹೇರಿಕೊಂಡು ಬಂದರೆ ಅದಕ್ಕೆ ಬೆಲೆ ಬರುತ್ತದೆಯೇ? 'ಗಂಭೀರ' ಭಾಷೆ, 'ಗಂಡು' ಭಾಷೆಯೆಂದು ಅನ್ಯಭಾಷೆಗಳಿಗೆ ಸೋತುಬಿಡೋಣವೇ?

"ಸಾನಂದಂ ನಂದಿಹಸ್ತಾಹತ ಮುರಜರವಾಹೂತ ಕೌಮಾರಬರ್ಹಿ ತ್ರಾಸಾನ್ನಾಸಾಗ್ರರಂಧ್ರಂ ವಿಶತಿ ಫಣಿಪತೌ ಭೋಗಸಂಕೋಚ ಭಾಜಿ" ಎಂದೋ "ನಿಸ್ತ್ರಿಶೋರಪ್ತಲನ್ಯಸ್ತಂ ವಸ್ತು ಸ್ವಸ್ತಿ ಕೃಪಸ್ತು ವಃ" ಎಂದೋ ಯಾರಾದರೂ ಹೇಳಿದರೆ "ಆಹಾಹಾ ಏನು ಭಾಷೆ ಏನು ಗಾಂಭೀರ್ಯ ಎಂದು ಬೆರಗುವಟ್ಟು ಭಕ್ತಿಪರವಶರಾಗುವವರೇ ಹೆಚ್ಚು ಜನ. ಇದು ಸಿಪ್ಪೆಯ ಬಣ್ಣಕ್ಕೆ ಮರುಳಾಗಿ ಹಣ್ಣನ್ನು ನಿರ್ಲಕ್ಷಿಸುವ ಕೆಲಸ. ಭಾಷಾಂತರ ಮಾಡಿದರೆ ಸಿಪ್ಪೆ ಹೋಗುತ್ತದೆ, ಅದರ ಬಣ್ಣ ಹೋಗುತ್ತದೆ, ಜೊತೆಯಲ್ಲಿ ಹಣ್ಣು ಸ್ವಲ್ಪ ಹೋಗುತ್ತದೆ: ಹೋಗಲಿ; ಬಣ್ಣದ ಸಿಪ್ಪೆಯನ್ನು ನೋಡಿ 'ಆಹಾ ಆಹಾ' ಎಂದು ಆಶ್ಚರ್ಯಪಡುತ್ತಿರುವುದಕ್ಕಿಂತ ಅಷ್ಟೋ ಇಷ್ಟೋ ಹಣ್ಣನ್ನು ತಿನ್ನುವುದು ವಿವೇಕವಲ್ಲವೇ? ಸಂಸ್ಕೃತ ಎಂದು ವ್ಯವಹಾರದಲ್ಲಿ ನಿಂತುಹೋಯಿತೋ ಅಂದೇ ಅದು ಪೂರ್ಣ ಪ್ರಮಾಣದಲ್ಲಿ ಜನಜೀವನಕ್ಕೆ ಅನ್ವಯಿಸುವುದು ತಪ್ಪಿಹೋಯಿತು: ಎಂಥ ಸಮರ್ಥನಾದ ಉಪಾಧ್ಯಾಯನೇ ಆಗಲಿ ಪಾಠ ಹೇಳಿಕೊಟ್ಟರೆ ಶಿಷ್ಯನಿಗೆ ಅರ್ಥ ಮಾತ್ರ ಬರುವುದೆಂದು ಹೇಳುತ್ತಾರೆ. ತರ್ಕ ವೇದಾಂತ ಮೊದಲಾದ ಶಾಸ್ತ್ರಗಳು, ಕೆಲವು ಉದ್ಗ್ರಂಥಗಳು ಭಾಷಾಂತರಕ್ಕೆ ನಿಲುಕುವುದಿಲ್ಲ. ನಿಜ: ಯಾವ ಭಾಷೆಯಲ್ಲಾದರೂ ಉದ್ಗ್ರಂಥಗಳು, ಅದರಲ್ಲಿಯೂ ಶಾಸ್ತ್ರೀಯ ಗ್ರಂಥಗಳು, ಹೀಗೆಯೇ; ಅವುಗಳನ್ನು ತಿಳಿದುಕೊಳ್ಳಬೇಕಾದ ಆವಶ್ಯಕತೆ ಅಧಿಕಾರಗಳು ಬರುವ ಹೊತ್ತಿಗೆ ಮೂಲವನ್ನೇ ಅರ್ಥಮಾಡಿಕೊಳ್ಳುವ ಯೋಗ್ಯತೆಯೂ ಬರುತ್ತದೆ. ಕನ್ನಡ ಚಂಪೂ ಗ್ರಂಥಗಳನ್ನು ಚೆನ್ನಾಗಿ ವ್ಯಾಸಂಗಮಾಡಿದವನಿಗೆ ಸಂಸ್ಕೃತ ಸಾಹಿತ್ಯವೇನೂ ಕಷ್ಟವಾಗುವುದಿಲ್ಲ. ಭಾವಕ್ಕೆ ಬೆಲೆಯಿದ್ದರೆ, ಭಾಷಾಂತರದಿಂದ ಅದು ಹರಡುವ ಹಾಗೆ ಮೂಲದಿಂದ ಹರಡುವುದಿಲ್ಲ; ರಾಮಾಯಣ ಭಾರತ ಭಾಗವತಗಳೇ ಇದಕ್ಕೆ ಉದಾಹರಣೆ.

ಕನ್ನಡಕ್ಕೆ ಸಂಸ್ಕೃತ ಹೇಗೋ ಇಂಗ್ಲಿಷಿಗೆ ಗ್ರೀಕ್, ಲ್ಯಾಟಿನ್, ಹೀಬ್ರೂ ಭಾಷೆಗಳು ಹಾಗೆ. ಆದರೆ ಇಂಗ್ಲಿಷರೆಲ್ಲಾ ಈಗ ಆ ಭಾಷೆಗಳನ್ನು ಕಲಿಯೋಣ ಎನ್ನುತ್ತಾರೆಯೇ? ಅವುಗಳ ಸಾಹಿತ್ಯವನ್ನು

ಭಾಷಾಂತರವಮಾಡಿ ನಮ್ಮ ಭಂಡಾರವನ್ನು ತುಂಬಿಕೊಳ್ಳೋಣ ಎನ್ನು ತ್ತಾರೆಯೋ? ಗ್ರೀಕ್ ಲ್ಯಾಟಿನ್‌ಗಳಲ್ಲಿಯೂ ಸುಗಮವಲ್ಲದ ಎಷ್ಟೋ ಕಠಿನವಾದ ಸಾಹಿತ್ಯವಿದೆ, ಶಾಸ್ತ್ರವಿದೆ.

ಹೀಗೆ ಸಂಸ್ಕೃತಕ್ಕೆ ನಾನು ಮೂರನೆಯ ಸ್ಥಾನವನ್ನು ಕೊಡು ತ್ತೇನೆ. ಮಾತೃಭಾಷೆಯೂ ದೇಶಭಾಷೆಯೂ ಒಂದೇ ಆಗಿರುವ ಅದೃಷ್ಟವಂತನು ಇದನ್ನು ಓದಬಹುದು—ಓದಬೇಕು. ಅದು ಫಲಕಾರಿ ಯಾಗಬೇಕಾದರೆ ಈಗಿಗಿಂತಲೂ ಹೆಚ್ಚು ಕಷ್ಟಪಟ್ಟು ಓದಬೇಕು; ಇಂಗ್ಲಿಷು ಎಷ್ಟು ಕಷ್ಟಸಾಧ್ಯವೋ, ಸಂಸ್ಕೃತವೂ ಅಷ್ಟೇ ಕಷ್ಟಸಾಧ್ಯ; ಇನ್ನೂ ಹೆಚ್ಚು ಎಂದು ಹೇಳಬಹುದು. ಹಿಂದೆ ಮನೆಯಲ್ಲೂ ಹೊರಗೂ ಸಂಸ್ಕೃತದ ಒಂದು ಪ್ರಭೆಯಿತ್ತು, ಪ್ರಭಾವವಿತ್ತು. ಶ್ಲೋಕ, ಸ್ತೋತ್ರ, ಮಂತ್ರ, ಅಮರ ಮುಂತಾದವುಗಳಿಂದ ಬಾಯಿ ನೆನೆದಿರುತ್ತಿತ್ತು; ಕಿವಿ ಪಳಗಿರುತ್ತಿತ್ತು. ಈಗ ಅದೆಲ್ಲಾ ಹೋಗಿದೆ. ಇಂಗ್ಲಿಷ್ ಆರಂಭ ಮಾಡುವ ಹುಡುಗರಿಗಾದರೂ ಅಷ್ಟು ಇಷ್ಟು ಅದರ ಮಾತನ್ನು ಕೇಳಿ ಪರಿಚಯವಾಗಿರುತ್ತದೆ; ಸಂಸ್ಕೃತವನ್ನು ಅಷ್ಟೂ ಕೇಳಿರುವುದಿಲ್ಲ. ತಮ್ಮ ಕನ್ನಡ ಪುಸ್ತಕಗಳಲ್ಲಿ ಬರುವ ಸಂಸ್ಕೃತ ಮಾತುಗಳನ್ನಾದರೂ ಸರಿಯಾಗಿ ಉಚ್ಚಾರಮಾಡಿ ಕೇಳಿ ನೋಡಿ ಬರೆದರೆ ಎಷ್ಟೋ ಉಪ ಯೋಗವಾದೀತು. ಅದೂ ಮಾಡುವುದಿಲ್ಲ. ಈಚೆಗೆ ನಾನು ಬೇರೆ ಬೇರೆ ಊರುಗಳಲ್ಲಿರುವ ಆರು ಪ್ರೌಢ ವಿದ್ಯಾ ಸಂಸ್ಥೆಗಳನ್ನು ನೋಡಿ ದಾಗ ಅಲ್ಲಿ ಅವರ ಭಾಷಾಸಾಮರ್ಥ್ಯವನ್ನು ನಿರ್ಧರಿಸಲು ಒಂದು ಸಣ್ಣ ಪ್ರಯತ್ನಮಾಡಿದೆ. ಮುಂದೆ ಹೇಳುವಂತೆ ಹದಿನೈದು ಮಾತುಗಳನ್ನು ಹೇಳಿ ಬರೆಯಿಸಿದೆ:—ಅಂತಃಕರಣ, ಇಂಥ, ಬಹಿಷ್ಕಾರ, ದ್ವೇಷ, ಶಿಷ್ಯ, ಶ್ರೇಷ್ಠ, ಸ್ಥಿತಿ, ಆಶೀರ್ವಾದ, ಅದೃಷ್ಟ, ಗೃಹಿಣಿ, ಬೋಧನೆ, ಸ್ವತಃ, ದುಃಖ, ಬಂಧನ, ಪಂಕ್ತಿ. ಇವುಗಳಲ್ಲಿ ಒಂದು ಹೊರತು ಮಿಕ್ಕೆಲ್ಲವೂ ಸಂಸ್ಕೃತ ಮಾತುಗಳು; ಆದರೆ ಕನ್ನಡದಲ್ಲಿ ಮಾತನಾಡುವಾಗ, ಬರೆಯು ವಾಗ, ಸಾಧಾರಣವಾಗಿ ಬರುವ ಶಬ್ದಗಳು. ಇವುಗಳಲ್ಲಿ ಮೂರರಿಂದ ಆರರವರೆಗೆ ತಪ್ಪುಮಾಡಿದವರೇ ಹೆಚ್ಚುಜನ. ಒಂದೊಂದು ಸಂಸ್ಥೆಯಲ್ಲಿ ಒಬ್ಬರು ಇಬ್ಬರು ಎಲ್ಲವನ್ನೂ ಸರಿಯಾಗಿ ಬರೆದರು; ಒಂದೇ ಒಂದು

ಸಂಸ್ಥೆಯಲ್ಲಿ ಮಾತ್ರ. ಮೂವರು ಹೊರತು ಮಿಕ್ಕವರೆಲ್ಲರೂ ಸರಿಯಾಗಿ ಬರೆದರು—ಅದು ಹೆಣ್ಣುಮಕ್ಕಳು ಓದುವ ಸಂಸ್ಥೆ. ಇದಕ್ಕಿಂತ ಆಶ್ಚರ್ಯವೂ ಕೊರಗೂ ಆಗುವ ಸಂಗತಿಯೇನೆಂದರೆ, ಇದೇ ಮಾತುಗಳನ್ನು ಸಂಸ್ಕೃತವಿದ್ಯಾರ್ಥಿಗಳಲ್ಲಿಯೂ ಅನೇಕರು ತಪ್ಪಿಲ್ಲದೆ ಬರೆಯಲಾರರು. ಹೀಗಿರುವುದರಿಂದ ಅಭಿಮಾನಕ್ಕಾಗಿ, ಭಕ್ತಿಗಾಗಿ. ಬಂದಷ್ಟು ಸಂಸ್ಕೃತ ಬರಲಿ, ಅದನ್ನು ಹೆಚ್ಚು ಜನ ಓದಲಿ, ಎಂದು ವಾದಿಸುವುದು ಇಂದಿನ ಸ್ಥಿತಿಯಲ್ಲಿ ಪ್ರಯೋಜನಕಾರಿಯಾಗುವುದಿಲ್ಲ.

ಇತರ ಭಾಷೆ ಬೇಡವೆಂದಾಗಲಿ, ನಿಷ್ಪ್ರಯೋಜನವೆಂದಾಗಲಿ ನಾನು ಹೇಳುವವನಲ್ಲ: ಭಾಷಾ ಸಾಹಿತ್ಯಗಳ ವಿದ್ಯಾರ್ಥಿಗೆ ಎಷ್ಟು ಭಾಷೆ ಬಂದರೂ ಬೇಕು. ಅದರಲ್ಲಿಯೂ ಸಂಸ್ಕೃತದಂಥ ಭಾಷೆ ಅಗತ್ಯವಾಗಿ ಬೇಕು: ತುಂಬಾ ಬೇಕು: ಚೆನ್ನಾಗಿ ಬರಬೇಕು. ಅದನ್ನು ಐಚ್ಛಿಕವಾಗಿಯೂ ಓದಲಿ. ವಿಸ್ತಾರವಾಗಿ ಓದಲಿ. ಮಿಕ್ಕ ಪ್ರಾಚ್ಯ ಮತ್ತು ಪಾಶ್ಚಾತ್ಯ ಭಾಷೆಗಳನ್ನೂ ಓದಲಿ. ಯಾರು? ಅದರಲ್ಲಿ ವಿದ್ವತ್ತು ಸಂಪಾದನೆ ಮಾಡಬಲ್ಲವರು. ಜನಸಾಮಾನ್ಯರಲ್ಲ: ಅವರಿಂದ ಅದು ಸಾಧ್ಯವೂ ಅಲ್ಲ. ಬಂಗಾರ ಎಲ್ಲರಿಗೂ ಬೇಕು; ಹೀಗೆಂದು ಎಲ್ಲರೂ ಖನಿಜ ಶಾಸ್ತ್ರ ಲೋಹಶಾಸ್ತ್ರಗಳಲ್ಲಿ ಪ್ರವೀಣರಾಗುವುದಕ್ಕಾಗುತ್ತದೆಯೇ? ಇದರಲ್ಲಿ ಪ್ರಯೋಜನದ ದೃಷ್ಟಿಯೂ ಉಂಟು, ವಿಶೇಷವಾಗಿ ಉಂಟು. ಇಂದು ಇಂಗ್ಲಿಷ್ ಭಾಷೆಯನ್ನು ಕಲಿತು. ಅದರ ಮೂಲಕ ನಾನಾ ಶಾಸ್ತ್ರಗಳನ್ನು ಓದಿ ವಿದ್ವಾಂಸರಾಗಿರತಕ್ಕವರು. ಅನೇಕರು ಸಂಸ್ಕೃತ ವಿದ್ವಾಂಸರ ಮಕ್ಕಳು: ವಂಶೀಯರು. ಸಂಸ್ಕೃತಕ್ಕೆ ಹಿಂದೆ ಇದ್ದ ಪ್ರಾಶಸ್ತ್ಯ ಆ ಭಾಷೆಗೆ ಸಂಬಂಧಪಟ್ಟ ಧರ್ಮ ಕರ್ಮ ಶಾಸ್ತ್ರಗಳಿಂದ; ಅವೆಲ್ಲವೂ ಈಗ ಹಿಂದೆ ಬಿದ್ದಿವೆ. ಪ್ರಪಂಚವು ಇಂದು ಧಾರ್ಮಿಕದಿಂದ ರಾಜಕೀಯ. ಆರ್ಥಿಕ, ವೈಜ್ಞಾನಿಕ ರೂಪಗಳಿಗೆ ತಿರುಗಿದೆ—'ಆರ್ಥಿಕ ರೂಪಕ್ಕೆ' ಎಂದರೂ ತಪ್ಪಾಗಲಾರದು. ನಮ್ಮ ಪುಣ್ಯಕ್ಕೆ ಅದು ಪಾಶ್ಚಾತ್ಯರ ಕಣ್ಣಿಗೆ ಬಿದ್ದು, ತಮ್ಮ ಭಾಷಾಸಾಹಿತ್ಯ ಸಂಸ್ಕೃತಿಗಳಿಗೆ ಅದರ ಉಪಯೋಗವು ತಿಳಿದು ಈಗ ಅದು ಪ್ರಪಂಚದ ಮುಖ್ಯ ಮುಖ್ಯ ವಿದ್ಯಾಪೀಠಗಳಲ್ಲೆಲ್ಲಾ ಸ್ಥಾನವನ್ನು ಪಡೆದಿದೆ. ಒಂದೊಂದು ಕಡೆಯಲ್ಲಿ

ನಾಲ್ಕಾರು ವರ್ಷಕ್ಕೆ ಒಬ್ಬಿಬ್ಬರು ಅವರ ವಿದ್ವತ್ತನ್ನು ಪಡೆಯಬಹುದು; ಆದರೆ ಅವರದು ಆಳವಾದ ವಿದ್ವತ್ತೂ, ವಿಶಾಲವಾದ ವಿದ್ವತ್ತೂ ಆಗಿರುತ್ತದೆ. ಅವರು ಪ್ರಕಟಿಸುವ ವೇದ ಶಾಸ್ತ್ರ, ಸಾಹಿತ್ಯ ಇವುಗಳಿಗೆ ಸಂಬಂಧಪಟ್ಟ ಮೂಲ ಗ್ರಂಥಗಳನ್ನೂ ಭಾಷಾಂತರಗಳನ್ನೂ ನೋಡಿದರೆ, ಇನ್ನೂ ನೂರಾರು ವರ್ಷಗಳಾದರೂ ನಾವು ಈ ಕೆಲಸ ಮಾಡಿಯೇವೇ ಎನ್ನಿಸುತ್ತದೆ. ಏನಾದರೂ ಒಂದು ದುರದೃಷ್ಟದಿಂದ—ಅಂಥ ದುರದೃಷ್ಟ ಬರದಿರಲಿ—ನಮ್ಮ ದೇಶದಲ್ಲಿ ಬೌದ್ಧಧರ್ಮ ಖಿಲವಾಗಿ ನಷ್ಟವಾಗಿ ಹೋದಂತೆ ಸಂಸ್ಕೃತವೂ ಆಗಿಹೋಗುವುದಾದರೆ, ಅದು ಹೊರ ದೇಶಗಳಲ್ಲಿ ಬದುಕಿರುತ್ತದೆ, ಬಾಳುತ್ತಿರುತ್ತದೆ. ಆದರೆ ಕನ್ನಡ? ಕನ್ನಡಿಗರೇ, ನಿಮ್ಮ ಕನ್ನಡವನ್ನು ಇಂಡಿಯ ದೇಶದ ದಕ್ಷಿಣಭಾಗದಲ್ಲಿ ಒಂದು ಅಂಗೈ ಅಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ನೀವು ಅದನ್ನು ಅಲಕ್ಷ್ಯಮಾಡಿದರೆ ಮಿಕ್ಕ ಯಾವ ದೇಶದ ಯಾವ ಜನರೂ ಅದನ್ನು ಎತ್ತಿ ಹಿಡಿಯಲಾರರು. ಅದು ಹೋದರೆ ಹೋಗಲಿ ಎನ್ನುವ ಹಾಗಿದ್ದರೆ, ಈಕಡೆ ಬಂಗಾಳಕೊಲ್ಲಿಯಿದೆ, ಆಕಡೆ ಅರಬ್ಬಿ ಸಮುದ್ರ ಇದೆ; ಗುಡಿಸಿ ಹಾಕಿಬಿಡಿ. ಇತರ ಭಾಷೆಗಳು ಒತ್ತಿಕೊಂಡು ಬರಲಿ, ಆಕ್ರಮಿಸಿಕೊಳ್ಳಲಿ!

## ಹಿಂದಿ ಮತ್ತು ಕನ್ನಡ

ಈ ಮೂರು ಭಾಷೆಗಳು ಹೊರತು ಜನಸಾಮಾನ್ಯಕ್ಕೆ—ಪ್ರವೀಣರಿಗಲ್ಲ, ಪಂಡಿತರಿಗಲ್ಲ—ನಾಲ್ಕನೆಯ ಭಾಷೆ ಅನಾವಶ್ಯಕವೆಂದು ನಾನು ತಿಳಿಯುತ್ತೇನೆ. ಈಗ ಹತ್ತು ಹನ್ನೆರಡು ವರ್ಷಗಳಿಂದ 'ರಾಷ್ಟ್ರಭಾಷೆ'ಯ ಚಳುವಳಿ ನಡೆಯದಿದ್ದರೆ ಈ ಪ್ರಸ್ತಾಪಕ್ಕೇ ಅವಕಾಶವಿರಲಿಲ್ಲ. ಆದರೆ ಅದು ದಿನ ದಿನಕ್ಕೆ ಹಬ್ಬುತ್ತಿದೆ. ಆದ್ದರಿಂದ ಅದರ ವಿಚಾರವಾಗಿ ಒಂದೆರಡುಮಾತು ಹೇಳಬೇಕು. 'ರಾಷ್ಟ್ರಭಾಷೆ' ಯೊಂದು ಆವಶ್ಯಕವೆಂಬುದೇ ನನಗೆ ಸಂದೇಹ. ಇಷ್ಟು ದೊಡ್ಡ ಖಂಡಕ್ಕೆ ಅದು ಸಾಧ್ಯವಾಗುತ್ತದೆಯೋ ಎಂಬುದು ಇನ್ನೂ ಸಂದೇಹ. ಇದರ ಪ್ರಯೋಜನ ಆರ್ಥಿಕವೇ ರಾಜಕೀಯವೇ ಸಾಮಾಜಿಕವೇ? ಒಂದು ವಿಧದಲ್ಲಿ ಆರ್ಥಿಕ ನಿಜ. ಎಷ್ಟೋ ಜನ ಹಿಂದೀ ಉಪಾಧ್ಯಾಯರು ಬೇಕಾಗು

ತ್ತಾರೆ; ಅವರಿಗೆ ಅಷ್ಟೋ ಇಷ್ಟೋ ಸಂಬಳ ಸಿಕ್ಕುತ್ತದೆ. ರಾಜಕೀಯವೆಂದರೆ ನಾನು ನಂಬಲಾರೆ: ಏಕೆಂದರೆ ಇದುವರೆಗೆ ಯಾವ ದೊಡ್ಡ ರಾಜಕೀಯ ಸಭೆ ಸಮಿತಿಗಳಲ್ಲಿಯೂ ಭಾಷಣಕಾರರು ಹಿಂದಿಯಲ್ಲಿ ಮಾತನಾಡಿಲ್ಲ. ಸಾಮಾಜಿಕವೆಂದರೆ ಅದೂ ಸುಳ್ಳೇ; ಏಕೆಂದರೆ, ಈಚೆಗೆ ಹಿಂದೀ ಪ್ರಚಾರಕರು ಅಲ್ಲಲ್ಲಿ ಏರ್ಪಡಿಸುವ, ಒಂದೆರಡು ಚರ್ಚೆಗಳು ಹೊರತು ಮತ್ತಾವ ಸಮಾರಂಭಗಳಾಗಲಿ ಉಪನ್ಯಾಸಗಳಾಗಲಿ ಸಾರ್ವಜನಿಕವಾಗಿ ನಡೆದಿಲ್ಲ. ಪತ್ರಿಕೆಗಳಲ್ಲೇನೋ ವರದಿಗಳು ಬರುತ್ತಿರುತ್ತವೆ—ನಾನು ನೋಡುವ ಒಂದೆರಡು ಕನ್ನಡ ಪತ್ರಿಕೆಗಳಲ್ಲಂತೂ ಹಿಂದಿಯ ವಿಚಾರವಿಲ್ಲದ ದಿನವೇ ಇಲ್ಲ: ಒಂದೊಂದು ದಿನ, ಎರಡು ಕಡೆ ಮೂರು ಕಡೆ, ಎರಡು ಅಂಕಣ ಮೂರು ಅಂಕಣ ಕೂಡ ಇರುವುದುಂಟು. ಇದರ ಪ್ರಚಾರಕ್ಕೆ ಹಿಂದಿಯ ಮಹತ್ವವೆಷ್ಟು ಕಾರಣವೋ ಅದಕ್ಕಿಂತ ಹೆಚ್ಚಾಗಿ, ಕನ್ನಡ ಪತ್ರಿಕೆಗಳ ಜೊಂಬು. ಅವರು ಪ್ರಕಟಿಸುವ ಸಭೆ ಸಮಾರಂಭ ಮುಂತಾದವುಗಳ ದೀರ್ಘವಾದ ವರದಿಗಳು ಇನ್ನೂ ಅಷ್ಟೇ ಕಾರಣ: ಉಪನ್ಯಾಸಾದಿಗಳು ಹಿಂದಿಯಲ್ಲಿ ನಡೆದರೆ, ಎರಡು ಮೂರು ವರ್ಷ ಆ ಭಾಷೆಯನ್ನು ಓದಿ ಎರಡು ಮೂರು ಪರೀಕ್ಷೆಗಳನ್ನು ಕೊಟ್ಟಿರತಕ್ಕವರೂ ಅದನ್ನು ಪೂರ್ತಿಯಾಗಿ ಅರ್ಥ ಮಾಡಿಕೊಂಡರೆಂದು ನನಗೆ ತಿಳಿದು ಬಂದಿಲ್ಲ. ಇನ್ನು ವ್ಯಾಪಾರ ವ್ಯವಹಾರಗಳಿಗೆ ಬೇಕಾದ ಹರುಕು ಮುರುಕು ಉರ್ದು ಅದರಲ್ಲಿ ಓಡಾಡುತ್ತಿರುವವರಿಗೆ ಬಂದೇ ಬರುತ್ತದೆ—ಜಟಕಾ ಗಾಡಿಯಲ್ಲಿ ಓಡಾಡುವವನಿಗೆ ಆ ಗಾಡಿ ಹೊಡೆಯುವವನೊಡನೆ ಆಡುವಷ್ಟು ಮಾತು ಬರುವಂತೆ: ಅವಶ್ಯಕತೆಯಿದ್ದರೆ ಇಂಥ ನಾಲ್ಕಾರು ಭಾಷೆಗಳು ವರ್ತಕರಿಗೆ ತಾವಾಗಿ ಬರುತ್ತವೆ. ಬೆಂಗಳೂರಿನ ದೊಡ್ಡ ಪೇಟೆಯಲ್ಲಿ ಈಗ್ಗೆ ಸುಮಾರು ೩೦ ವರ್ಷಗಳ ಕೆಳಗೆ ಪಾಪಯ್ಯಚೆಟ್ಟಿ ಎಂಬ ಬಟ್ಟೆ ಮಾರುವ ಒಬ್ಬ ವರ್ತಕನಿದ್ದ. ಅವನಿಗೆ ತಿಳಿಯದೆ ಇದ್ದ ಭಾಷೆಯೇ ಇಲ್ಲವೆಂದರೆ ಅದು ಅತಿಶಯೋಕ್ತಿಯಾಗುವುದಿಲ್ಲ; ಅದರಲ್ಲಿ ವಿಶೇಷವೇನೆಂದರೆ, ಆತನು ಆ ಎಲ್ಲ ಭಾಷೆಗಳನ್ನೂ—ಇಂಗ್ಲಿಷನ್ನೂ ಸಹ—ಸ್ವಚ್ಛವಾಗಿ ಸ್ಫುಟವಾಗಿ ಲಕ್ಷಣವಾಗಿ ಆಡುತ್ತಿದ್ದ. ನನಗೆ ಇಂದಿಗೂ ಇದೊಂದು ಸಮಸ್ಯೆ

ಬಗೆಹರಿಯದೆ ಇದೆ–ಅದು ಏನೆಂದರೆ, ಆತನ ಮಾತೃಭಾಷೆ ಯಾವುದು, ದೇಶಭಾಷೆ ಯಾವುದು, ಕಲಿತ ಭಾಷೆ ಯಾವುದು, ಅವುಗಳನ್ನು ಯಾರು ಹೇಳಿಕೊಟ್ಟರು, ಅವನು ಹೇಗೆ ಕಲಿತುಕೊಂಡ ಎಂಬುದು. ಇದನ್ನು ನಾವು ನಿಜವಾಗಿ ಇಷ್ಟು ದೊಡ್ಡದು ಮಾಡಿಕೊಳ್ಳಬೇಕಾಗಿಲ್ಲ; ಅದರ ಪ್ರಚಾರಕರು ಅದರ ಸೌಲಭ್ಯ ಉಪಯೋಗಗಳನ್ನು ಬಣ್ಣ ಬಣ್ಣವಾಗಿ ಬಣ್ಣಿಸುತ್ತಾರೆ–ಬೀಹಾರಿನಲ್ಲಿ ಭೂಕಂಪವಾದರೆ ಕನ್ನಡಿಗರು ಅಲ್ಲಿಗೆ ಹೋಗಿ ಹೇಗೆ ಸಹಾಯಮಾಡುತ್ತೀರಿ? ಕನ್ನಡದಲ್ಲಿ ಆಗಲೇ ಬೇಕಾದಷ್ಟು ಹಿಂದಿ ಮಾತುಗಳು ಸೇರಿವೆ, ಆದ್ದರಿಂದ ಅದನ್ನು ಕಲಿಯುವುದು ಸುಲಭ; ಹಿಂದಿಯಲ್ಲಿ ತುಲಸೀದಾಸ ರಾಮಾಯಣವಿದೆ. ಇದನ್ನು ಕಲಿತರೆ ಹಿಂದೂ ಮುಸ್ಲಿಂ ಐಕ್ಯಸಾಧನೆಯಾಗುತ್ತದೆ, ಇತ್ಯಾದಿ. ನಾವೂ ಅದಕ್ಕೆ ಪ್ರತಿಯಾಗಿ ದಕ್ಷಿಣ ದೇಶದಲ್ಲಿ ಕ್ಷಾಮ ಬಂದರೆ ಉತ್ತರ ದೇಶದವರು ಬಂದು ಹೇಗೆ ಸಹಾಯಮಾಡುತ್ತೀರಿ? ಆದ್ದರಿಂದ ತಮಿಳನ್ನೂ ಕನ್ನಡವನ್ನೂ ಕಲಿತುಕೊಳ್ಳಿ; ಕನ್ನಡದಲ್ಲಿ ಮಾತ್ರವೇ ಅಲ್ಲದೆ ನಮ್ಮೆಲ್ಲ ಭಾಷೆಗಳಿಗೂ ಆಗಲೇ ಬೇಕಾದಷ್ಟು ಸಂಸ್ಕೃತ ಇಂಗ್ಲಿಷು ಮಾತುಗಳು ಸೇರಿವೆ; ಆದ್ದರಿಂದ ಸಂಸ್ಕೃತವನ್ನೂ ಇಂಗ್ಲಿಷನ್ನೂ ಕಲಿಯುವುದು ಸುಲಭ; ಅವುಗಳನ್ನು ಎಲ್ಲರೂ ಕಲಿಯೋಣ; ನಮ್ಮ ಪಂಪಭಾರತವೂ ಕಂಬರಾಮಾಯಣವೂ ಬಹಳ ದೊಡ್ಡ ಗ್ರಂಥಗಳು; ಇವುಗಳನ್ನು ಮೂಲದಲ್ಲಿಯೇ ಓದಲು ನೀವು ಕನ್ನಡ ತಮಿಳುಗಳನ್ನು ಕಲಿತುಕೊಳ್ಳಿ. ಮುಸಲ್ಮಾನರಾರೂ ಈ ಹಿಂದಿಯನ್ನಾಗಲಿ ಹಿಂದಿ–ಹಿಂದುಸ್ತಾನಿಯನ್ನಾಗಲಿ ಅಂಗೀಕರಿಸುವುದಿಲ್ಲ—ಎಂದು ಮುಂತಾಗಿ ಉತ್ತರ ಕೊಡಬಹುದು. ನಾನು ಬೊಂಬಾಯಿನಿಂದ ಆಚೆ ಉತ್ತರಕ್ಕೆ ಹೋಗಿಲ್ಲ; ಆದರೆ ದಕ್ಷಿಣ ದೇಶವನ್ನು ಧನುಷ್ಕೋಟಿಯ ವರೆಗೂ ನೋಡಿದ್ದೇನೆ: ತಮಿಳು ಒಂದು ತಿಳಿಯುತ್ತಿದ್ದರೆ ಅಲ್ಲಿ ಯಾರೊಡನೆ ಬೇಕಾದರೂ ವ್ಯವಹರಿಸಬಹುದು. ಸಾಲದ್ದಕ್ಕೆ ಇಂಗ್ಲಿಷು ಇದೆ; ಅದು ಸದ್ಯಕ್ಕೆ ನಮ್ಮನ್ನು ಬಿಟ್ಟು ಹೋಗುವಂತಿಲ್ಲ, ನಾವು ಮರೆಯುವಂತೂ ಇಲ್ಲ.

ಈ ಸಂದರ್ಭದಲ್ಲಿ ಸಂಸ್ಕೃತ ರಾಷ್ಟ್ರಭಾಷೆಯಾಗಬೇಕೆಂದು ಯಾರೂ ಹೇಳುವಂತಿಲ್ಲವಲ್ಲ ಎಂದು ನನಗೆ ಅನ್ನಿಸುತ್ತದೆ. ಮೂಲ

ಇಂಗ್ಲಿಷನ್ನು ಸುಮಾರು ೮೫೦ ಮಾತುಗಳಲ್ಲಿ ವ್ಯವಹಾರಕ್ಕೆ ಬೇಕಾದಷ್ಟು ಕಲಿಯಬಹುದಾದರೆ, ಹೆಚ್ಚು ಕಡಮೆ ನೂರರಲ್ಲಿ ಒಂದುಪಾಲು ಶಬ್ದಗಳೇ ಸಂಸ್ಕೃತವಾಗಿರುವ ಭಾರತೀಯರೆಲ್ಲರೂ ೫೦೦-೬೦೦ ಮಾತುಗಳಲ್ಲಿ ಸಂಸ್ಕೃತ ಕಲಿಯುವುದು ಕಷ್ಟವಾಗುತ್ತದೆಯೇ? ಅದು ವೈಯಾಕರಣರ ಸಂಸ್ಕೃತವಾಗದಿರಬಹುದು. ಆದರೆ ಪಂಡಿತರು, ಸಂಸ್ಕೃತದಲ್ಲಿ ಮಾತಾಡಬಲ್ಲ ಪಂಡಿತರು. ಆಡುವ ಸಂಸ್ಕೃತಕ್ಕೂ ಹೆಚ್ಚು ವ್ಯಾಕರಣ ಪಾಂಡಿತ್ಯವೇನೂ ಬೇಕಾಗಿರುವುದಿಲ್ಲ.

ಈಗ್ಗೆ ಹತ್ತು ಹದಿನೈದು ವರ್ಷಗಳ ಕೆಳಗೆ ನಮ್ಮ ಕಡೆ ಯಾರೋ ಒಬ್ಬಿಬ್ಬರು ಹಿಂದೀ ಪ್ರಚಾರಕರು ಇದ್ದು ಗೌರವಾರ್ಥವಾಗಿ ಪಾಠಹೇಳಿ ಕೊಡುತ್ತಿದ್ದರು: ಅನಂತರ ತರಗತಿಗಳು ಆರಂಭವಾದುವು; ಅದಕ್ಕೆ ತರಗಳು ಬಂದುವು; ಪರೀಕ್ಷೆಗಳು ಹುಟ್ಟಿದುವು; ಅದಕ್ಕೆ ಯೋಗ್ಯತಾಪತ್ರ ಪ್ರಶಸ್ತಿಗಳೂ ದೊರೆಯಲಾದುವು: ಜನಕ್ಕೆ ಅದರ ಮೇಲೆ ಮೋಹ ಮಮತೆ ಹೆಚ್ಚಾಯಿತು. ಅದು ಸರ್ಕಾರಿ ಸ್ಕೂಲುಗಳಿಗೆ ಕಾಲಿಟ್ಟಿತು—ಮೊದಲು ಹೈಸ್ಕೂಲು, ಅನಂತರ ಮಾಧ್ಯಮಿಕಶಾಲೆ, ಅನಂತರ ಕಾಲೇಜು. ಈಗ ಪ್ರಾಥಮಿಕ ತರಗತಿಗಳಿಗೂ ಇರಬೇಕೆಂದು ಸೂಚನೆ ಬಂದಿದೆ! ಇದು 'ಹುಟ್ಟಿದ ಮಕ್ಕಳಿಗೂ ಹಾಲಿನ ಜೊತೆಯಲ್ಲಿ ಸಕ್ಕು ಹಿಂಡಿ ಬೆರಸಿ ಕುಡಿಸಿ' ಎಂದಹಾಗೆ! ಇಂದು ಜನ ಅದಕ್ಕೆ ಒಗ್ಗಿರಬಹುದು; ಅದನ್ನು ಸೂಚಕರೂ ಬಲ್ಲರು. ಆದರೆ ಇಂದಲ್ಲದಿದ್ದರೆ ನಾಳೆ ನಾವು ಗೆಲ್ಲುತ್ತೇವೆಂಬ ಆಸೆಯಿದೆ. ಭರವಸೆಯಿದೆ ಅವರಿಗೆ. ಇಂದು ಐಚ್ಛಿಕವಾಗಿರುವ ಕಡೆ ಅದು ನಿರ್ಬಂಧವಾಗಬೇಕೆಂದು ಪದೇ ಪದೇ ಸೂಚನೆ ಬರುತ್ತಿದೆ. ಗೌರವಾರ್ಥವಾಗಿ ಕೆಲಸಮಾಡುವವರಿಗೆ ಸಂಬಳವಾಯಿತು, ಬಡ್ತಿಯಾಯಿತು. ಅದು ನಾಳೆ, ಅದರ ಅಂತಸ್ತು ಹೆಚ್ಚಬೇಕೆಂಬ ಚಳುವಳಿಯಾಯಿತು, ಅದು ಸಫಲವಾಯಿತು. ನಾನು ಇದರ ಒಳ ಅಡಕಿತವನ್ನೆಲ್ಲಾ ಸ್ವಲ್ಪ ಸುಮ್ಮಗೆ ವಿಚಾರಮಾಡಿ ಕಣ್ಣಾರ ನೋಡಿ ತಿಳಿದುಕೊಂಡಿದ್ದೇನೆ. ಇದನ್ನು ಹೇಳಿಕೊಡುವುದರಿಂದ ಕನ್ನಡಕ್ಕೆ ಪ್ರಯೋಜನವಿಲ್ಲ, ಕನ್ನಡಕ್ಕೆ ಕ್ಷೇಮವಿಲ್ಲ. ತಮಿಳರು ಇದನ್ನು ಬಾಯಿಬಿಟ್ಟು ಅಡಿ ಪ್ರತಿಭಟಿಸಿದರು; ಸತ್ಯಾಗ್ರಹ ಮಾಡಿದರು, ಸೆರೆಮನೆಗೆ

ಹೋದರು. ಅವರು ಗಟ್ಟಿಗರು, ಕನ್ನಡಿಗರು ಮೆತ್ತಗರು. ಹಿಂದಿಗೆ ವಿರುದ್ಧವಾಗಿರುವ ದೊಡ್ಡ ದೊಡ್ಡವರೂ ಕೂಡ ಆ ಅಯ್ಯನವರು ಕಾಂಗ್ರೆಸ್ಸಿನಲ್ಲಿದ್ದಾರೆ, ಅವರೇನು ತಿಳಿದುಕೊಳ್ಳುತ್ತಾರೋ, ಈ ರಾಯರು ಹಿಂದಿ ಪಕ್ಷಪಾತಿಗಳಾಗಿದ್ದಾರೆ. ಅವರೇನನ್ನುತ್ತಾರೋ ಎಂದು ಉಸುರುತ್ತಲಿಲ್ಲ. ತಮಿಳರು ಸತ್ಯಾಗ್ರಹ ಮಾಡಿದ ಮೇಲೆ ಸ್ವಲ್ಪ ಧೈರ್ಯವಾಯಿತು. ಇದನ್ನು ನಾನು ಹೆಚ್ಚು ವಿವರಿಸುವ ಆವಶ್ಯಕತೆಯಿಲ್ಲ. ಹಿಂದಿಯವರು ದೇಶಕಂಡವರು. ಮಾತುಬಲ್ಲವರು ; ಅವರಿಗೆ ದೊಡ್ಡವರ ಅವಲಂಬನವಿದೆ, ಛಾಪ್ರಕತೆಯ ಬೆಂಬಲವಿದೆ, ಧನಸಹಾಯವಿದೆ. ಅಂಥವರು ಕೈಗೊಂಡ ಕೆಲಸ ಜಯವಾಗುವುದೇನು ಆಶ್ಚರ್ಯ? ಈ ಕಾಲದಲ್ಲಿ ಜಯ ಸತ್ಯಕ್ಕಿಲ್ಲ, ನ್ಯಾಯಕ್ಕಿಲ್ಲ, ಕೂಗಿಗೆ, ಪ್ರಕಟನೆಗೆ! ಹಿಂದಿಯಿಂದ ಕನ್ನಡಕ್ಕೆ ಪ್ರಯೋಜನವಿಲ್ಲವೆಂದು ಈಗ್ಗೆ ಹತ್ತು ವರ್ಷಗಳ ಕೆಳಗೆ ನಾನು ಶಿವಮೊಗ್ಗೆಯ ಕರ್ಣಾಟಕ ಸಂಘದ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷಸ್ಥಾನದಿಂದ ಹೇಳಿದೆ. ಅಂದು ಕನ್ನಡಿಗರ ನಾಯಕರು ಅದನ್ನು ಗಮನಿಸಲಿಲ್ಲ: ಒಬ್ಬ ಹಿಂದೀ ಪ್ರಚಾರಕರಾದ ತಮಿಳರು ಮಾತ್ರ ಪ್ರತಿಭಟಿಸಿದರು. ಬೀದಿಯುದ್ದಕ್ಕೂ ನನ್ನೊಡನೆ ಚರ್ಚೆಮಾಡಿಕೊಂಡು ಬಂದರು. ಆದರೆ ಅದು ಅಷ್ಟಕ್ಕೆ ನಿಂತಿತು. ಈಚೆಗೆ ಪರಿಷತ್ಪತ್ರಿಕೆಯ ಸಂಪಾದಕನಾಗಿ ಹೊಸ ಅನುಭವದಿಂದ ಇನ್ನು ಸ್ವಲ್ಪ ಖಾರವಾಗಿ ಬರೆದಾಗ, ಪರಿಷತ್ಸದಸ್ಯರೇ ಒಬ್ಬರು, ಕನ್ನಡದಲ್ಲಿ ಅಭಿಮಾನದಿಂದ ನಾನಾಮುಖವಾಗಿ ಕೆಲಸಮಾಡಿರುವ, ನನ್ನ ಮಾನ್ಯ ಮಿತ್ರರೇ ಒಬ್ಬರು, ನನ್ನ ಮೇಲೆ ಖಂಡನೆಯ ನಿರ್ಣಯವನ್ನು ತಂದರು. ಇಂದು ನಾನು ಈ ಮಾತನ್ನಾಡಿದ್ದರಿಂದ ಒಂದು ದೊಡ್ಡ ಗುಂಪೇ ನನ್ನನ್ನು ಖಂಡಿಸಬಹುದು. ನಾನು ಈ ಸಮ್ಮೇಳನದ ಅಧ್ಯಕ್ಷನಾದದ್ದಕ್ಕೆ ಸಂತೋಷಿಸಿ ಅಭಿನಂದಿಸಿದವರೇ ಇದಕ್ಕಾಗಿ ನನ್ನನ್ನು ಅಭಿನಿಂದಿಸಬಹುದು. ಸಂತೋಷ. ಆದರೆ ವಿಷಯ ಚರ್ಚೆಯಾಗಲಿ, ನನ್ನಲ್ಲಿ ತಪ್ಪು ಇದ್ದರೆ ಅದನ್ನು ತಿದ್ದಿಕೊಳ್ಳುವುದಕ್ಕೆ ನಾನು ಸದಾ ಸಿದ್ಧನಾಗಿದ್ದೇನೆ. ಕನ್ನಡಿಗರೇ, ನೀವು ಮಾತ್ರ ನಿಮ್ಮ ಕನ್ನಡದ ಅಭಿಮಾನವನ್ನು ಕಾಪಾಡಿಕೊಳ್ಳಿ, ಮೋಹಕ್ಕೆ ಸಿಲುಕಬೇಡಿ, ವಿಚಾರಮಾಡಿ; ನಿಮ್ಮ

ಕನ್ನಡದ ಅಭಿಮಾನವೆಂಬ ಕಾಮಧೇನು ಎಚ್ಚರವಾಗಿದ್ದರೆ, ಬ್ರಹ್ಮದಂಡ ಮುಂದೆ ಇದ್ದರೆ, ನಮ್ಮನ್ನು ಯಾವ ವಿಶ್ವಾಮಿತ್ರರ ಹಿಂದೀಪಡೆಯೂ ಏನೂ ಮಾಡಲಾರದು.

ಕನ್ನಡಿಗರು ಮೊದಲು ನಮಗೆ ಕನ್ನಡ ಚೆನ್ನಾಗಿ ಬರಲಿ, ಹಿಂದಿ ಹಾಗಿರಲಿ. ಎಂದರೆ ಇದು ಸಂಕುಚಿತ ಪ್ರಾಂತೀಯಬುದ್ಧಿ, ಇವರು ಕೂಪ ಕೂರ್ಮಗಳು, ಕುಂಟೆಯ ಕಪ್ಪೆಗಳು, ವಟಗುಟ್ಟಿಕೊಳ್ಳಲಿ ಎನ್ನಬಹುದು; ಎಂದೂ ಇದ್ದಾರೆ: ದೊಡ್ಡ ದೊಡ್ಡವರೇ ಎಂದಿದ್ದಾರೆ: ಅದನ್ನು ಕೇಳಿ ನಾವು ಸಂಕಟಪಟ್ಟುಕೊಂಡಿದ್ದೇವೆ. ಆದರೆ. ಅವರು ಹಾಗೆಂದರೆಂದು ನಾವೂ ಪ್ರತಿಯಾಗಿ ನೀವು ಸಮುದ್ರದ ತಿಮಿಂಗಿಲಗಳು ಎಲ್ಲವನ್ನೂ ನುಂಗಬೇಕೆಂದು ನೋಡುತ್ತೀರಿ ಎನ್ನಬಹುದೇ? ಇದು ಕೀಳು ಮಾತು. ಸಣ್ಣತನ. ಸೃಷ್ಟಿಯಲ್ಲಿ ಯಾವುದು ದೊಡ್ಡದೋ ಯಾವುದು ಚಿಕ್ಕದೋ. ಯಾವುದಕ್ಕೆ ಶಕ್ತಿ ಇದೆಯೋ ಯಾವುದಕ್ಕೆ ಇಲ್ಲವೋ, ಹೇಳಬಲ್ಲವರಾರು? ಮಹಾಭೂತಗಳು ಅಳಿದುಹೋಗಿವೆ. ಹುಳುಹುಪ್ಪಟೆಗಳು ಉಳಿದುಕೊಂಡಿವೆ.

ಹಿಂದಿಯಮೇಲೆ ನಮಗೇನೂ ನಿಷ್ಕಾರಣ ದ್ವೇಷವಿಲ್ಲ. ಇಂಡಿಯ ದೇಶದಲ್ಲಿರುವ ೩೫೦ ಭಾಷೆಗಳಲ್ಲಿ ೩೪೯ ರ ಮೇಲೆ ದ್ವೇಷವಿಲ್ಲ. ಇದರ ಮೇಲೇಕೆ? ಈಗ ಇಪ್ಪತ್ತೈದು ವರ್ಷಗಳ ಕೆಳಗೆ ಅದನ್ನು ಯಾರು ಮಾತನಾಡಿಸುತ್ತಿದ್ದರು? ಬೀದಿಯಲ್ಲಿ ಎಷ್ಟೋ ಜನ ಹೋಗುತ್ತಾರೆ; ಅವರ ತಕ್ಕರಾರು ನಮಗೇಕೆ? ಆದರೆ ಮನೆಬಾಗಿಲನ್ನು ಕಿತ್ತುಕೊಳ್ಳಲು ಬಂದರೆ ಯಾರು ಸುಮ್ಮನಿರುವುದಕ್ಕಾದೀತು?

ನಾವು ಮನುಷ್ಯರು, ಮನುಷ್ಯತ್ವವನ್ನು ಉಳಿಸಿಕೊಳ್ಳೋಣ ಉತ್ತಮಪಡಿಸಿಕೊಳ್ಳೋಣ, ಎಂದರೆ ಮಿಕ್ಕ ಪ್ರಾಣಿಗಳ ಮೇಲೆ ದ್ವೇಷವೆಂದಲ್ಲ. ಹಸುಗಳನ್ನು ಸಾಕಿಕೊಳ್ಳೋಣ, ಹಾಲು ಕರೆದುಕೊಳ್ಳೋಣ; ಕುರಿಗಳನ್ನು ಸಾಕೋಣ, ಕಂಬಳಿಗಳನ್ನು ಮಾಡಿಕೊಳ್ಳೋಣ; ನಮ್ಮ ಕೆಲಸಕ್ಕೆ ಉಪಯೋಗವಾಗುವುದಾದರೆ ಬೆಕ್ಕು ಮುಂತಾದ ಮಿಕ್ಕ ಪ್ರಾಣಿಗಳನ್ನೂ ಸಾಕಿಕೊಳ್ಳೋಣ. ಆದರೆ ಅವು ಎಲ್ಲಿರಬೇಕೋ ಅಲ್ಲಿರಲಿ; ಅವನ್ನು ಊಟದಮನೆಗೆ ಬಿಟ್ಟರೆ ನಾವು ತಿನ್ನುವ ಅನ್ನವೂ ನಮ್ಮ ಮಕ್ಕಳು ಕುಡಿಯುವ ಹಾಲೂ ಅವುಗಳ ಪಾಲಾಗುತ್ತವೆ.

ಸಂಸ್ಕೃತವಾಗಲಿ, ತೆಲುಗಾಗಲಿ, ತಮಿಳಾಗಲಿ, ಹಿಂದಿಯಾಗಲಿ, ಬಂಗಾಳಿಯಾಗಲಿ, ಇಂಗ್ಲಿಷಾಗಲಿ, ಗ್ರೀಕ್, ಜರ್ಮನ್ ಭಾಷೆಗಳಾಗಲಿ —ಇವುಗಳೆಲ್ಲಾ ಗಣಿಯ ಶೋಧಕರು ಪರೀಕ್ಷೆಗಾಗಿ ಹೊಡೆಯುತ್ತಿರುವ ಕುಳಿಗಳಹಾಗೆ. ಅಲ್ಲಿ ರತ್ನಗಳು ಸಿಕ್ಕಿದರೆ ಮುಂದಕ್ಕೆ ಅಗೆಯೋಣ; ಇಲ್ಲದಿದ್ದರೆ ವ್ಯಸನೋಯಿಸಿಕೊಳ್ಳುವುದು ಬೇಡ. ಭಾವುಕತೆಗೋ ಭ್ರಾಂತಿಗೋ ಒಳಗಾಗಿ ಮಾಡುವ ಕೆಲಸ ನಿಷ್ಫಲ. ಅಂತರಗಂಗೆಯ ಅಂದಕ್ಕೆ ಮರುಳಾಗಿ ಅದನ್ನು ತಂದು ನೆಟ್ಟುಕೊಂಡರೆ ಅದು ಕೆರೆಯೆಲ್ಲಾ ಹರಡಿ ಗಂಗೆಯೇ ಬತ್ತಿಹೋಗುವ ಸಂಭವ: ಬಳ್ಳಿ ಬಲಿತು ಬಿಗಿಯುವುದಕ್ಕೆ ಮೊದಲಾದರೆ ಗಿಡವೇ ಒಣಗಿ ಹೋಗುವ ಹೆದರಿಕೆ. ಮುಂದೆ ನೂರಕ್ಕೆ ೯೦ ಜನವಾದರೂ ಅಕ್ಷರಸ್ಥರಾಗಿ ಅವರಲ್ಲಿ ಅರ್ಧ ಜನವಾದರೂ ವಿದ್ಯಾವಂತರೆಂದು ಹೇಳಿಸಿಕೊಳ್ಳುವ ಸ್ಥಿತಿ ಬಂದರೆ, ಅವರಲ್ಲಿ ಹತ್ತು ಜನ ಹಿಂದಿ ಕಲಿಯಲಿ, ಹೀಬ್ರು ಕಲಿಯಲಿ, ಚೀನಿ ಕಲಿಯಲಿ, ಅವುಗಳಲ್ಲಿ ಪಂಡಿತರಾಗಲಿ: ಬೇಡವೆಂದವರಾರು? ಇಲ್ಲದಿದ್ದರೆ, ಪ್ರಬಲನಿಂದ ದುರ್ಬಲನಿಗೆ ಬಾಧೆಯೇ!

ಕನ್ನಡಿಗರು ಬಡವರು; ಭಾರತೀಯ ಜನದಲ್ಲಿ ಅಜ್ಞಾನ ತುಂಬಿಕೊಂಡಿದೆ: ಅದರ ನಿವಾರಣೆಗೇ ಎಷ್ಟು ಶ್ರಮಪಟ್ಟರೂ ಸಾಲದಾಗಿದೆ, ಎಷ್ಟು ವೆಚ್ಚ ಮಾಡಿದರೂ ಸಾಲದಾಗಿದೆ: ವಿದ್ಯೆ, ಅದರಲ್ಲಿಯೂ ಮೊದಲ ಮೆಟ್ಟಿಲಲ್ಲಿ. ಮಾತೃಭಾಷೆಯ ಮೂಲಕವೇ ಆಗಬೇಕು. ಹೀಗಿರುವಾಗ, ಹಿಂದಿಗಾಗಿ ಹಣವನ್ನೂ ಜನವನ್ನೂ ಅಭಿಮಾನವನ್ನೂ ಕೊಟ್ಟು ಅದನ್ನು ತುಂಬಿಕೊಳ್ಳುವುದು ನ್ಯಾಯವೇ ವಿಚಾರಮಾಡಿ; ಕನ್ನಡ ನಾಡಿನಲ್ಲಿ ಎಷ್ಟು ಪೌರಸಭೆಗಳು ಜಿಲ್ಲಾ ಬೋರ್ಡುಗಳು ತಮ್ಮಲ್ಲಿ ಹೆಚ್ಚಾದ ಆರ್ಥಿಕ ಉಪಪತ್ತಿಯಿಲ್ಲದಿದ್ದರೂ ಇದಕ್ಕೆ ಧನ ಸಹಾಯ ಮಾಡುತ್ತಿವೆ, ಎಷ್ಟು ಕೊಡುತ್ತಿವೆ, ಎಂದು ತಿಳಿದುಕೊಂಡರೆ ಅದು ನಿಜವಾಗಿ ಆಶ್ಚರ್ಯವಾಗುತ್ತದೆ. ಕನ್ನಡಕ್ಕೆ ಸಹಾಯವನ್ನು ಕೇಳಿದರೆ 'ನಿಮ್ಮ ಕನ್ನಡಕ್ಕೆ ಏನಾಗಿದೆರೀ?' ಎಂದು ಕೇಳುತ್ತಾರೆ. ಹಿಂದಿಗೆ ಸಹಾಯವನ್ನು ನಿಲ್ಲಿಸಿ ಎಂದರೆ, ಇದುವರೆಗೆ ಮಾಡಿರುವ ಕೆಲಸ ವ್ಯರ್ಥವಾಗುತ್ತದೆ ಎನ್ನುತ್ತಾರೆ. ಅಂತು, ಈಗ್ಗೆ ಇಪ್ಪತ್ತು ಅಥವಾ ಇಪ್ಪತ್ತೈದು

ವರ್ಷಗಳ ಕೆಳಗೆ ಹುಟ್ಟಿ ಹರಿದ ಕನ್ನಡದ ಅಭಿಮಾನವು ಈ ಹಿಂದೀ ಚಳುವಳಿಯಿಂದ ಹಿಂದಕ್ಕೆ ಹೋಯಿತು. 'ಪರಿಷತ್ಪತ್ರಿಕೆ'ಯಲ್ಲಿ ಇದರ ಚರ್ಚೆಯೆದ್ದಾಗ, ದೇಶದ ಎಲ್ಲಾ ಕನ್ನಡ ಪತ್ರಿಕೆಗಳಲ್ಲಿಯೂ ಅದನ್ನು ಖಂಡಿಸಿ ಲೇಖನಗಳು ಬಂದುವು. ಅದನ್ನು ಪ್ರತಿಯಾಗಿ ಖಂಡಿಸಿ, ಕನ್ನಡದ ಪಕ್ಷವನ್ನು ವಾದಿಸಿ, ಲೇಖನಗಳನ್ನು ಬರೆದು ಕಳುಹಿಸಿದರೆ ಅವನ್ನು ಪ್ರಕಟಿಸುವುದಕ್ಕೆ ಕನ್ನಡ ಪತ್ರಿಕೆಗಳೇ ಇರಲಿಲ್ಲ! ಈ ಪರಿಸ್ಥಿತಿಯನ್ನು ನೋಡಿ ಕೆಲವು ಜನ ಕನ್ನಡಿಗರು ಈ ಕಾರ್ಯಕ್ಕಾಗಿ 'ಕನ್ನಡದ ಸಂರಕ್ಷಕ' ಎಂಬ ಹೊಸ ಪತ್ರಿಕೆಯನ್ನು ಹೊರಡಿಸೋಣವೆಂದು ಸಂಕಲ್ಪಿಸಿದರು; ಅದಕ್ಕೆ ಬೆಂಬಲ ದೊರೆಯಲಿಲ್ಲ; ಅದು ನಮ್ಮಲ್ಲಿ ಕೆಲವರಿಗೆ ತುಂಬ ನಿರಾಶೆಯಾಯಿತು; ಅದು ಇಂದೂ ಹಾಗೆಯೇ ಇದೆ. ಪರಿಷತ್ಪತ್ರಿಕೆಯಲ್ಲಿ ಗದ್ದಲವೆಬ್ಬಿಸಿದುದರ ಫಲವೇನಾಯಿತೆಂದರೆ, ಇನ್ನು ಮೇಲೆ ಹಿಂದೀ ಪ್ರಚಾರಕರು ಕನ್ನಡವನ್ನೂ ಪ್ರಚಾರ ಮಾಡಬೇಕೆಂದು ಒಂದೆರಡು ಕಡೆ ಆದ ನಿರ್ಣಯ. ಇದು ಕಣ್ಣೊರಸುವ ಕೆಲಸ ಮಾತ್ರವೆಂದು ಗೊತ್ತಾಗಲು ಹೆಚ್ಚು ದಿನ ಬೇಕಾಗಲಿಲ್ಲ.

ಹೀಗೆಂದರೆ, ನನ್ನ ಕನ್ನಡದ ಅಭಿಮಾನವನ್ನು, ಕನ್ನಡಿಗರ ಮೇಲಿನ ಮಮತೆಯನ್ನು, ಹಿಂದಿಯ ದ್ವೇಷ, ಸಂಸ್ಕೃತದ ದ್ವೇಷ, ಎನ್ನಬಹುದು. ನನಗೂ ಅಲ್ಪಸ್ವಲ್ಪ ಹಿಂದಿಯ ಪರಿಚಯವಿದೆ. ಅದರ ವಿಚಾರವಾಗಿ ಬರೆದಿರುವ ಲೇಖನ ಗ್ರಂಥಗಳ ಪರಿಚಯವಿದೆ; ಅದಕ್ಕಿಂತ ಹೆಚ್ಚಾಗಿ ಸಂಸ್ಕೃತದ ಪರಿಚಯವಿದೆ; ನಾನು ಬರೆದಿರುವ ಲೇಖನಗಳೂ ಗ್ರಂಥಗಳೂ ಕನ್ನಡಕ್ಕಿಂತ ಹೆಚ್ಚಾಗಿ ಸಂಸ್ಕೃತ ವಿಷಯಗಳಿಗೆ ಸಂಬಂಧಪಟ್ಟವಾಗಿವೆ; ಆದರೂ ಕನ್ನಡಿಗರ ಅಭ್ಯುದಯದ ದೃಷ್ಟಿಯಿಂದ ಕನ್ನಡಕ್ಕೆ ಪ್ರಾಧಾನ್ಯ ಬೇಕೆಂದು ಸಾರುತ್ತೇನೆ. ಪೋಷಣೆ ಬೇಕೆಂದು ಹೇಳುತ್ತೇನೆ.

## ಶಿಕ್ಷಣದಲ್ಲಿ ಕನ್ನಡಕ್ಕೆ ಪ್ರಾಧಾನ್ಯ

ಹೀಗೆ ಮೂರು ಭಾಷೆಗಳನ್ನು ಕಲಿಯಬೇಕೆಂದರೆ, ಇದು ವ್ಯರ್ಥ ಕಾಲಹರಣ, ಅನಾವಶ್ಯಕ; ಇದು ಯಾವ ದೇಶದ ವಿದ್ಯಾಪದ್ಧತಿಯಲ್ಲಿಯೂ ಇಲ್ಲ ಎನ್ನುವವರಿದ್ದಾರೆ. ಇವರು ಮುಖ್ಯವಾಗಿ ವಿಜ್ಞಾನ

ಪಕ್ಷಪಾತಿಗಳು. ಇದು ವಿಜ್ಞಾನಪ್ರಾಬಲ್ಯ ಯುಗ; ಎಲ್ಲಿ ನೋಡಿದರೂ ವಿಜ್ಞಾನಪಂಡಿತರ ಸಂಖ್ಯೆಯೇ ಹೆಚ್ಚಾಗಿರುತ್ತದೆ. ಸ್ವಾಭಾವಿಕವಾಗಿಯೂ ಪ್ರಯೋಜನ ದೃಷ್ಟಿಯಿಂದಲೂ ಅವರು ವಿಜ್ಞಾನಕ್ಕೆ ಪ್ರಾಧಾನ್ಯ ಬೇಕೆನ್ನುತ್ತಾರೆ. ಆ ಪ್ರಾಧಾನ್ಯ ಹೆಚ್ಚಿದಂತೆಲ್ಲಾ ಭಾಷಾ ಸಾಹಿತ್ಯಗಳು ಹಿಂದೆ ಬೀಳುತ್ತವೆ. ಮೇಲಿನ ತರಗತಿಗಳಲ್ಲಿ, ಅದರಲ್ಲಿಯೂ ವಿಜ್ಞಾನ ವಿದ್ಯಾರ್ಥಿಗಳಿಗೆ, ಭಾಷೆಯ ವ್ಯಾಸಂಗ ಬರೆವಣಿಗೆಗಳೇ ಬೇಡ ಎನ್ನುವ ಒಂದು ಪ್ರಬಲವಾದ ಪಕ್ಷವಿದೆ. ಹೀಗೆ ಕೆಲವು ವರ್ಷಗಳ ಹಿಂದೆ ಬಿ.ಎ. ವಿದ್ಯಾರ್ಥಿಗಳು ಓದುತ್ತಿದ್ದಷ್ಟು ಕನ್ನಡವನ್ನೂ ಈಗ ಓದುತ್ತಿಲ್ಲ: ವಾರಕ್ಕೆ ಎರಡು ಘಂಟೆ ಮಾತ್ರ ಯಾವುದೋ ಒಂದು ಕಥೆಯೋ ನಾಟಕವೋ ಪುರಾಣ ನಡೆದಂತೆ ಪಾಠ ನಡೆಯುತ್ತದೆ; ಪುರಾಣ ಬರೆದಂತೆ ಅವರೂ ಉತ್ತರ ಬರೆಯುತ್ತಾರೆ. ಯಾವಾಗ ನೋಡಿದರೂ ಐಚ್ಛಿಕ ವಿಷಯಗಳ ಹೊರೆಯೇ ಹೆಚ್ಚಾಗಿದೆ ಎಂದು ಗೊಣಗುತ್ತಿರುತ್ತಾರೆ. ಈಗ ಐಚ್ಛಿಕ ವಿಷಯಗಳು ಮೂರಾಗಿವೆ. ವಿದ್ಯಾಧಿಕಾರಿಗಳನ್ನೂ ಸಂಸ್ಥೆಗಳನ್ನೂ ಈ ಕ್ರಮದ ರಚಕರನ್ನೂ ಕೇಳಿದರೆ, ನಿಮ್ಮ 'ರಾಯ ಕೇಳಿಂದ' ದೊಡ್ಡದೋ, ಭೌತಶಾಸ್ತ್ರ ರಸಾಯನಶಾಸ್ತ್ರ, ಗಣಿತಶಾಸ್ತ್ರ ಮುಂತಾದವುಗಳು ದೊಡ್ಡವೋ? ಎಂದು ಕೇಳುತ್ತಾರೆ. ಇದರಲ್ಲಿ ಸ್ವಲ್ಪಮಟ್ಟಿನ ನಿಜವಿದ್ದರೂ, ಸಾಹಿತ್ಯವನ್ನು ಹಿಂದುಮಾಡಿದ್ದಕ್ಕೆ ಸಮರ್ಥನೆಯೇನೋ ದೊರೆತಂತಾಗಲಿಲ್ಲ. ಏಕೆಂದರೆ ಐಚ್ಛಿಕವಿಷಯ ವ್ಯಾಸಂಗವನ್ನೇ ತೆಗೆದುಕೊಂಡರೆ, ಮೂರೇ ವಿಷಯ ಸಾಕೇ? ಅಲ್ಲಿಗೆ ವ್ಯಾಸಂಗ ಮುಗಿದುಹೋಯಿತೇ? ಮುಂದೆ ಅವನ್ನೇ ಇನ್ನೂ ಪ್ರೌಢವಾದ ರೀತಿಯಲ್ಲಿ ಎಂ. ಎ., ಎಂ. ಎಸ್‌ಸಿ., ಪಿ. ಎಚ್‌ಡಿ., ಡಿ. ಎಸ್‌ಸಿ., ಪರೀಕ್ಷೆಗಳಲ್ಲಿ ವ್ಯಾಸಂಗ ಮಾಡುವುದಿಲ್ಲವೇ? ಓದಿದ್ದನ್ನು ಬರೆಯುವುದಕ್ಕಾದರೂ ಬೇಕಾದಷ್ಟು ಭಾಷಾ ಸಾಮರ್ಥ್ಯ ಬೇಡವೇ? ಆದ್ದರಿಂದ ಐಚ್ಛಿಕ ವಿಷಯಗಳ ಸಂಖ್ಯೆಯನ್ನಾಗಲಿ ಪ್ರಮಾಣವನ್ನಾಗಲಿ ಏಕೆ ಇಳಿಸಬಾರದು? ಮೂರಿದ್ದದ್ದನ್ನು ಎರಡು ಮಾಡಬಾರದು? ಮೂರು ವಿಷಯಗಳನ್ನು ವ್ಯಾಸಂಗಮಾಡಿ ಪರೀಕ್ಷೆ ಕೊಟ್ಟವರು ಎರಡನ್ನೇ ಓದಿದವರಿಗಿಂತ ಉತ್ತಮರಾಗಿದ್ದಾ

ರೆಂದು ಹೇಗೆ ನಿರ್ಧರವಾಗಿದೆ? ಓದು ಪರೀಕ್ಷೆಕೊಟ್ಟ ಘಳಿಗೆಗೇ ನಿಂತು ಹೋಯಿತೇ? ಎಷ್ಟೋ ಜನ ಪರೀಕ್ಷೆಯೇ ಕೊಡದೆ ಸ್ವವ್ಯಾಸಂಗದಿಂದ ದೊಡ್ಡ ವಿದ್ವಾಂಸರಾಗಿಲ್ಲವೇ? ಇಂಗ್ಲಿಷಿಗೆ ತಾನೇ ಎರಡು ಪ್ರಶ್ನೆಪತ್ರಿಕೆಗಳು ಏಕೆ? ಒಂದೇ ಸಾಕು. ಇನ್ನೊಂದು ಪತ್ರಿಕೆಯನ್ನು ಸೇರಿಸಿ ಮತ್ತೆರಡು ಪಠ್ಯಪುಸ್ತಕಗಳನ್ನಿಟ್ಟರೂ ವಿದ್ಯಾರ್ಥಿಯ ಯೋಗ್ಯತೆ ಅಷ್ಟರಿಂದ ಹೆಚ್ಚಿಹೋಗುವುದೆಂದು ನನಗೆ ನಂಬಿಕೆಯಿಲ್ಲ. ಇನ್ನು, ಇಷ್ಟು ಭಾಷೆಗಳೇಕೆ? ಎಂಬುದು ಆಕ್ಷೇಪಣೆ. ಪ್ರತಿಯೊಂದು ದೇಶದ ಸಮಸ್ಯೆಯನ್ನೂ ಆಯಾ ದೇಶದ ಸನ್ನಿವೇಶ ಸಂದರ್ಭ ಸಂಬಂಧವಾಗಿ ತಾನೇ ವಿಚಾರಮಾಡಬೇಕು? ಇನ್ನಾವ ದೇಶದಲ್ಲಿ ಭರತಖಂಡದ ವಿಚಿತ್ರ ಪರಿಸ್ಥಿತಿಯಿದೆ? ಇನ್ನಾವ ದೇಶದಲ್ಲಿ ಪರಭಾಷೆಯ ಮೂಲಕ ಪಾಠ ಪ್ರವಚನ ಪರೀಕ್ಷೆಗಳು ನಡೆಯುತ್ತವೆ? ಹಿಂದೆ ನಮ್ಮ ದೇಶದಲ್ಲಿ ಒಂದೇ ಭಾಷೆಯ ವ್ಯಾಸಂಗವಿತ್ತು—ಅದು ಸಂಸ್ಕೃತ; ಕನ್ನಡ ಇಂಗ್ಲಿಷುಗಳು ಬಂದದ್ದು ಈಚೆಗೆ. ಇಂದಿಗೂ ಯೂರೋಪ್ ಮುಂತಾದ ದೇಶಗಳಲ್ಲಿ ಆಯಾ ದೇಶಭಾಷೆ ಮಾತ್ರ ಇದೆ. ಅದೇ ಪಾಠಭಾಷೆ, ಅದೇ ಪ್ರವಚನ ಭಾಷೆ. ಅದೇ ಪರೀಕ್ಷೆಯ ಭಾಷೆ. ಜಪಾನಿನಲ್ಲಿ ಕೊಂಚ ದಿನದ ಹಿಂದೆ ನಮ್ಮ ದೇಶದಂತೆಯೇ ಇತ್ತು; ಆದರೆ ಅದು ಈಗ ಮಿಕ್ಕೆಲ್ಲ ಗಂಡುರಾಜ್ಯಗಳಂತೆಯೇ ಆಗಿಬಿಟ್ಟಿದೆ. ಆದ್ದರಿಂದ ನಮ್ಮ ದೇಶದಲ್ಲಿ ಇಂಗ್ಲಿಷಿಗೆ ಸ್ವಲ್ಪ ಪ್ರಾಶಸ್ತ್ಯ ಕಡಮೆಮಾಡಿ, ಆವಶ್ಯಕವಿದ್ದರೆ ಐಚ್ಛಿಕ ವಿಷಯಗಳ ಹೊರೆಯನ್ನು ಸ್ವಲ್ಪ ಕಡಮೆಮಾಡಿ ಕನ್ನಡಕ್ಕೆ ಹೆಚ್ಚು ಪ್ರಾಧಾನ್ಯವನ್ನು ಕೊಡಬೇಕೆಂಬುದೇ ನನ್ನ ಅಭಿಪ್ರಾಯ.

ಕನ್ನಡದಲ್ಲಿ ಓದಬೇಕಾದದ್ದು ಬರಿಯ 'ರಾಯ ಕೇಳೆಂದ' ಎಂಬ ಎರಡು ಪದ್ಯಮಾತ್ರವಲ್ಲ. ಕನ್ನಡ ಸಾಹಿತ್ಯ, ನಾಡು, ನುಡಿ, ಇವೆಲ್ಲವುಗಳ ಚರಿತ್ರಾತ್ಮಕವಾದ, ಸವಿಮರ್ಶವಾದ ವ್ಯಾಸಂಗ ನಡೆಯಬೇಕು; ತಾನು ಕನ್ನಡದಲ್ಲಿ, ಇಂಗ್ಲಿಷಿನಲ್ಲಿ, ಇತರ ಭಾಷೆಯಲ್ಲಿ, ಕಲಿತದ್ದನ್ನು ಸಾರ ತೆಗೆದು ಹಿಂಡಿ ಕನ್ನಡದಲ್ಲಿ ಒದಗಿಸಿಕೊಡುವ ಸಾಮರ್ಥ್ಯ ಬರಬೇಕು. ಈ ದೃಷ್ಟಿಯಿಂದ ಮೈಸೂರು ವಿಶ್ವವಿದ್ಯಾನಿಲಯವು ಕನ್ನಡದ ಆನರ್ಸ್ ಪರೀಕ್ಷೆಗೆ ಓದುವ ವಿದ್ಯಾರ್ಥಿಗಳು ಕನ್ನಡದ ಜೊತೆಗೆ

ಮತ್ತೊಂದು ದ್ರಾವಿಡ ಭಾಷೆಯನ್ನೂ ಸಂಸ್ಕೃತವನ್ನೂ ಓದಬೇಕೆಂದು ವಿಧಿಸಿದೆ. ಇಂಗ್ಲಿಷಂತೂ ಸರಿಯೇ ಸರಿ. ಹೀಗೆ ಅವರು ಮೂರಲ್ಲ ನಾಲ್ಕು ಭಾಷೆಗಳನ್ನು ಓದುತ್ತಾರೆ. ಆದರೆ ಇಂಥವರು ವರ್ಷಕ್ಕೆ ಇಬ್ಬರೋ ಮೂವರೋ! ಸುಮಾರು ನಾಲ್ಕು ಅಥವಾ ಐದು ಸಾವಿರ ವಿದ್ಯಾರ್ಥಿಗಳಿರುವ ದೊಡ್ಡ ವಿಶ್ವವಿದ್ಯಾನಿಲಯಕ್ಕೆಲ್ಲಾ ಕನ್ನಡದಲ್ಲಿ ತಕ್ಕಮಟ್ಟಿನ ಯೋಗ್ಯತೆಯನ್ನು ಸಂಪಾದನೆ ಮಾಡುವವರೆಂದರೆ ಇವ ರಿಷ್ಟೇ ಜನ! ಅವರೂ ಮುಂದೆ ಎಲ್ಎಲ್.ಬಿ. ಪರೀಕ್ಷೆ ಕೊಟ್ಟು ವಕೀಲರಾಗುವುದೂ ಉಂಟು, ಕೆಲಸವಿಲ್ಲದೆ ಕೊಳೆಯುವುದೂ ಉಂಟು. ಮಿಕ್ಕವರಿಗೆ, ತಾವು ಕನ್ನಡವನ್ನು ಪಚ್ಚಾಗಿ ಓದಲಿಲ್ಲ ಬರೆಯಲಿಲ್ಲ, ತಮಗೆ ಮಾತನಾಡುವುದಕ್ಕೆ ಬರದು. ಬರೆಯುವುದಕ್ಕೆ ಬರದು ಎಂಬ ಅಧೈರ್ಯ ವಿಷ್ಟೇ ಇರುತ್ತದೆ. ಇವರ ಜಂಬವು ಕನ್ನಡಕ್ಕೆ ತಪ್ಪಿಹೋಗು ತ್ತಿದೆ. ಆದರೆ ಈಚೆಗೆ ಮೈಸೂರು ವಿಶ್ವವಿದ್ಯಾನಿಲಯವು ಕೊಡುತ್ತಿರುವ ಆಶ್ರಯ ಪ್ರೋತ್ಸಾಹಗಳಿಂದ ಅಲ್ಲಿಯ ಅಧ್ಯಾಪಕ ವರ್ಗದವರು-ಬರಿಯ ಕನ್ನಡದ ಅಧ್ಯಾಪಕರು ಮಾತ್ರವಲ್ಲ-ಧೈರ್ಯದಿಂದ ಮುಂದೆ ಬಂದು ಪ್ರಚಾರೋಪನ್ಯಾಸಗಳನ್ನು ಕೊಡುತ್ತಿದ್ದಾರೆ. ಅವುಗಳನ್ನು ಪುಸ್ತಕ ರೂಪವಾಗಿ ಪ್ರಕಟಿಸುತ್ತಿದ್ದಾರೆ. 'ಕನ್ನಡ ಗ್ರಂಥ ಪ್ರಕಾಶನ ಸಮಿತಿ'ಯ ಮೂಲಕ ಪ್ರಾಚೀನ ಗ್ರಂಥಸಂಗ್ರಹಗಳೂ ನವೀನ ಮೂಲಗ್ರಂಥ ಗಳೂ ಬರುತ್ತಿವೆ. ಮದರಾಸ್ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಸಂಶೋಧನ ಶಾಖೆಯು ಆರಂಭವಾಗಿ ಪ್ರಾಚೀನ ಗ್ರಂಥಗಳು ಪ್ರಕಟ ವಾಗುತ್ತಿವೆ. ಬೊಂಬಾಯಿ ವಿಶ್ವವಿದ್ಯಾನಿಲಯದವರೂ ಈಚೆಗೆ ಧಾರ ವಾಡದಲ್ಲಿ ಸಂಶೋಧನ ಕಾರ್ಯಕ್ಕೆ ಏರ್ಪಡಿಸಿದ್ದಾರೆ; ಅವರಿಂದ ಆಗಲೇ ಶಾಸನಗಳೂ ಉಪನ್ಯಾಸಗಳೂ ಪ್ರಬಂಧಗಳೂ ಪ್ರಕಟವಾಗಿವೆ. ಹೈದರಾಬಾದಿನ ಶಾಸನ ಇಲಾಖೆಯ ಮೂಲಕವೂ ಪ್ರಕಟನಕಾರ್ಯವು ನಡೆದಿದೆ. ಉರ್ದುವಿನಲ್ಲಂತೂ ಯಥೇಚ್ಛವಾಗಿ ನಡೆದಿವೆ.

ಈಗ ಯಾವ ವಿಷಯವನ್ನು ಕೊಡಲಿ, ಯಾವ ಮಟ್ಟದಲ್ಲಿ ಕೇಳಲಿ, ಕನ್ನಡದಲ್ಲಿ ಬರೆಯುವ ಜನರಿದ್ದಾರೆ. ಆದರೆ ಅವನ್ನು ಪ್ರಕಟಿ ಸುವವರಾರು? ಪ್ರಕಟವಾದ ಉತ್ತಮ ಗ್ರಂಥಕ್ಕೆ ಪ್ರೋತ್ಸಾಹಗಳನ್ನೂ

ಬಹುಮಾನಗಳನ್ನೂ ಕೊಡುವುದಕ್ಕೆ ಅಲ್ಲಲ್ಲಿ ಏರ್ಪಾಡುಗಳಿವೆ. ಆದರೆ ಕೊಳ್ಳುವವರಾರು? ಓದುವವರಾರು? ಏಕೆ ಓದಬೇಕು? ಪಠ್ಯ ಪುಸ್ತಕವಾದರೆ ಒಂದೆರಡು ವರ್ಷಗಳಲ್ಲಿ ನೂರಾರು ಪ್ರತಿಗಳು ಮಾರಬಹುದು; ಇಲ್ಲದಿದ್ದರೆ ಗೆದ್ದಲಪಾಲು: ಪುಸ್ತಕವನ್ನು ಹೊತ್ತುಕೊಂಡು ಮನೆ ಮನೆಗೆ ಊರೂರಿಗೆ ಅಲೆದರೆ, ದಾಕ್ಷಿಣ್ಯ ಖರ್ಚಾಗುತ್ತದೆ: ರೈಲುವೆಚ್ಚ ಗಾಡಿಬಾಡಿಗೆ ಕೂಡ ಹುಟ್ಟುವುದಿಲ್ಲ. ತಮಿಳು ತೆಲುಗರಲ್ಲಿ ಸ್ವಲ್ಪವಾಸಿ; ಏಕೆಂದರೆ ಅವರಲ್ಲಿ ಜನಸಂಖ್ಯೆ ಹೆಚ್ಚು; ವಿದ್ಯಾವಂತರ ಪ್ರಮಾಣ ಎಲ್ಲೂ ಒಂದೇ ಅದರೂ. ಅವರಲ್ಲಿ ಒಂದುಸಾವಿರ ಪ್ರತಿ ಲೀಲಾಜಾಲವಾಗಿ ಮುಗಿದು ಹೋಗುತ್ತದೆ. ಅಷ್ಟಾದರೂ ಅದರ ಅಚ್ಚಿನ ವೆಚ್ಚವಾದರೂ ಎದ್ದೀತು. ಕನ್ನಡಿಗರ ಸಂಖ್ಯೆ ಇನ್ನೂ ಕಡಮೆ; ಅವರ ಔದಾಸೀನ್ಯ, ಅಲಕ್ಷ್ಯ, ಅಲಸತೆ, ವ್ಯಾಸಂಗವಿಮುಖತೆ ಇನ್ನೂ ಹೆಚ್ಚು. ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರ 'ಕೆಲವು ಸಣ್ಣ ಕತೆ'ಗಳಂಥ ನವೀನಜಾತಿಯ, ಹೊಸ ರೀತಿಯ, ರಸವತ್ತಾದ ಕಥೆಗಳ ಸಾವಿರ ಪ್ರತಿಗಳು ಮುಗಿಯಲು ಹತ್ತು ವರ್ಷಗಳಾದುವು: ಹತ್ತುವರ್ಷದ ಮೇಲೆ ಅದು ಪಠ್ಯ ಪುಸ್ತಕವಾಯಿತು; ಇಲ್ಲದಿದ್ದರೆ ಪುನಃ ಮುದ್ರಣಮಾಡಿಸುವ ಸಂದರ್ಭವೇ ಬರುತ್ತಿರಲಿಲ್ಲ.

ಕನ್ನಡಕ್ಕೆ ಕೊಡುವ 'ಪ್ರೋತ್ಸಾಹ' ಭಿಕ್ಷವು ಆರೋಗ್ಯಸೂಚಕವಲ್ಲ: ಅದು ಅಜೀರ್ಣವಿರುವ ರೋಗಿಗೆ ಉತ್ತೇಜಕವಾದ ಔಷಧವನ್ನು ಕೊಟ್ಟು ಹಸಿವುಂಟುಮಾಡಿದಹಾಗೆ. ಅದು ಕೃತಕ ಸ್ಪರ್ಧೆಗಳನ್ನು ಏರ್ಪಡಿಸಿ ಪದಕಗಳನ್ನೂ ಪಾತ್ರೆಗಳನ್ನೂ ಕೊಡುವುದೂ ಹೀಗೆಯೇ. ಗಿಡ ಚೆನ್ನಾಗಿರಲೆಂದು ಅದರ ಒಂದೆರಡು ರೆಂಬೆಗೆ ಸುನೇರಿಯನ್ನು ಅಂಟಿಸಿ ದೀಪಗಳನ್ನು ತಗಲುಹಾಕಿದ ಹಾಗೆ. ಗಿಡವೇ ಹೂಬಿಡಬೇಕು; ಜೀವದಿಂದ ಕಳಕಳಿಸಬೇಕು. ಆಗ ಒಂದೊಂದು ಎಲೆಯೂ ಹೂವೂ ಸುನೇರಿಗಿಂತ, ದೀಪಗಳಿಗಿಂತ, ಸಾವಿರ ಪಾಲು ಸುಂದರವಾಗುತ್ತದೆ, ಸಜೀವವಾಗುತ್ತದೆ. ಸ್ವಾಭಾವಿಕವಾದ ಆರೋಗ್ಯ, ದಾರ್ಢ್ಯ, ಸೌಂದರ್ಯ ಬರಬೇಕಾದರೆ, ಒಂದೂವರೆ ಕೋಟಿ ಕನ್ನಡಿಗರಲ್ಲಿ ಒಂದು ಕೋಟಿ ಜನವಾದರೂ ಅಕ್ಷರಸ್ಥರಾಗಿ, ಐವತ್ತು ಲಕ್ಷ ಜನವಾದರೂ ವಿದ್ಯಾವಂತ

ರಾಗಿ, ಐದು ಲಕ್ಷ ಜನವಾದರೂ ದುಡ್ಡು ಕೊಟ್ಟು ಕೊಂಡು ಓದುವಂತಾಗಬೇಕು.

## ಏಕ ಲಿಪಿ ಮತ್ತು ಕನ್ನಡ

ಇಂಡಿಯ ದೇಶಕ್ಕೆಲ್ಲ ಒಂದೇ ಒಂದು ಭಾಷೆ ಅಸಾಧ್ಯ; ಅಪ್ರಿಯ. ಒಂದು ಲಿಪಿ ಅಷ್ಟು ಕಷ್ಟವಲ್ಲ, ಅದರಿಂದ ಅಷ್ಟು ನಷ್ಟವೂ ಇಲ್ಲ.—ಆದರೆ ದೇಶವ್ಯಾಪ್ಯಂತವೂ ಅದಕ್ಕೆ ಒಪ್ಪಬೇಕು. ಹಾಗಾದರೆ, ಎಲ್ಲರೂ ದೇವನಾಗರಿಯನ್ನು ಉಪಯೋಗಿಸಬಹುದು; ರೋಮನ್ ಲಿಪಿಯನ್ನು ಉಪಯೋಗಿಸುವುದಕ್ಕೂ ನನ್ನ ಆಕ್ಷೇಪಣೆಯಿಲ್ಲ; ಆಗ ನಾವು ಇದೊಂದು ಅಂಶದಲ್ಲಾದರೂ ಪ್ರಬಲ ಜನಾಂಗಗಳೊಡನೆ ಸಹಪಂಕ್ತಿಯಲ್ಲಿ ನಿಲ್ಲುತ್ತೇವೆ; ಮಿಕ್ಕ ಭಾಷೆಗಳ ಗ್ರಂಥಗಳನ್ನು ಬೇರೆ ಲಿಪಿಯ ಪರಿಚಯವಿಲ್ಲದೆಯೇ ತಕ್ಕಮಟ್ಟಿಗೆ ಓದಬಲ್ಲವರಾಗುತ್ತೇವೆ. ಒಂದು ಚಿಹ್ನೆಗೆ ಬದಲಾಗಿ ಮತ್ತೊಂದು ಚಿಹ್ನೆಯನ್ನು ಅಭ್ಯಾಸ ಮಾಡಬೇಕಾಗುತ್ತದೆ, ಅಷ್ಟೇಯೆ. ಕನ್ನಡದ ಶ್ರೀಕಾರವು ಎಷ್ಟು ಸುಲಭವೋ, ಕಷ್ಟವೋ ಸಂಸ್ಕೃತದ ಶ್ರೀಕಾರವೂ ಅಷ್ಟೇ ಸುಲಭ ಅಥವಾ ಕಷ್ಟ. ರೋಮನ್ ಲಿಪಿಯಲ್ಲಿ ಅನೇಕ ಸೌಕರ್ಯಗಳಿವೆ, ಲೋಪಗಳೂ ಇವೆ; ಅವುಗಳನ್ನು ಬೇಕಾದರೆ ಸರಿಪಡಿಸಿಕೊಳ್ಳಬಹುದು. ಈಗ ಹಳಗನ್ನಡ ಲಿಪಿಯನ್ನು ಓದಬಲ್ಲ ನಿಪುಣರಂತೆ ಆಗಲೂ ಕೆಲವರು ಹಳೆಯ ಗ್ರಂಥಗಳ ಲಿಪಿಯನ್ನು ಓದಬಲ್ಲವರು ಇದ್ದರೆ ಸಾಕು. ಕ್ರಮಕ್ರಮವಾಗಿ ಹೊಸ ಅಕ್ಷರಗಳು ರೂಢಿಗೆ ಬರಬಹುದು—ಆದರೆ ದೇಶವೆಲ್ಲಾ ಇದಕ್ಕೆ ಒಪ್ಪಿದರೆ ಸಾರ್ಥಕ; ಇಲ್ಲದಿದ್ದರೆ, ದೊಡ್ಡ ರಗಳೆಯನ್ನು ತಂದಿಟ್ಟುಕೊಂಡಂತಾಗುತ್ತದೆ. ಈಗ್ಗೆ ಎರಡು ಸಾವಿರ ವರ್ಷಗಳ ಕೆಳಗೆ ಭರತಖಂಡದಲ್ಲೆಲ್ಲಾ ಒಂದೇ ಲಿಪಿ ಇತ್ತು; ಒಂದು ಭಾಷೆಗೂ ಒಂದು ಲಿಪಿಗೂ ಅವಿನಾಭಾವ ಸಂಬಂಧವೇನೂ ಇಲ್ಲ. ಎಷ್ಟೋ ಜನ ಪಾಶ್ಚಾತ್ಯರು ಭಾರತೀಯ ಭಾಷೆಗಳನ್ನು ರೋಮನ್ ಲಿಪಿಯಲ್ಲಿಯೇ ಕಲಿತು, ರೋಮನ್ ಲಿಪಿಯಲ್ಲಿಯೇ ಓದುತ್ತಾರೆ. ಮೊನ್ನೆ ಮೊನ್ನೆಯವರೆಗೆ ಸಂಸ್ಕೃತ ವಿದ್ಯಾರ್ಥಿಗಳು ಸಂಸ್ಕೃತವನ್ನು ತೆಲುಗು ಅಥವಾ ಕನ್ನಡ ಲಿಪಿಯ ಪುಸ್ತಕಗಳಲ್ಲಿ ಓದುತ್ತಿದ್ದರು; ವಿದ್ವಾಂಸರಿಗೂ ಕೆಲವರಿಗೆ ದೇವನಾಗರೀ ಲಿಪಿ ಗೊತ್ತಿರು

ತ್ತಿರಲಿಲ್ಲ. ಇಂದಿಗೂ ಕೆಲವು ಸಂಸ್ಕೃತ ವಿದ್ವಾಂಸರಿಗೆ ದೇವನಾಗರೀ ಲಿಪಿಯಲ್ಲಿ ಬರೆಯಬೇಕೆಂದರೆ ಮಹಾಕಷ್ಟ. ಆದ್ದರಿಂದ ಕೆಲವು ಪರೀಕ್ಷೆಗಳಲ್ಲಿ ದೇವನಾಗರೀ ಲಿಪಿಜ್ಞಾನದ ಅಲ್ಪಸ್ವಲ್ಪ ಪ್ರದರ್ಶನವಾದರೂ ಇರುವುದು ಆಗತ್ಯವೆಂದು ನಿಯಮವಿದೆ.

## ಆಕಾಶವಾಣಿ ಮತ್ತು ಕನ್ನಡ

ಈಗಿನ ಕಾಲದಲ್ಲಿ ರೇಡಿಯೋ ಅಥವಾ ಆಕಾಶವಾಣಿಯು ವಿದ್ಯೆಗೂ ವಿನೋದಕ್ಕೂ ಒಂದು ದೊಡ್ಡ ಸಾಧನವಾಗಿದೆ. ಇದನ್ನು ಯಾರೋ ಕೆಲವರು ಐಶ್ವರ್ಯವಂತರು ಮಾತ್ರ ಉಪಯೋಗಿಸುವ ಕಾಲ ಹಿಂದೆ ಬಿತ್ತು. ಒಂದು ಕಡೆ ಈ ಯಂತ್ರಗಳು ಅಗ್ಗವಾದುವು. ಇನ್ನೊಂದು ಕಡೆ ಜನಸಾಮಾನ್ಯರು ಇದರ ರುಚಿಯನ್ನು ಕಂಡರು. ಸಾರ್ವಜನಿಕರ ಉಪಯೋಗಕ್ಕೆ ಇದನ್ನು, ನೀರು ದೀಪಗಳ ಹಾಗೆ, ಒದಗಿಸಿಕೊಡಬೇಕೆಂಬ ತತ್ವವನ್ನು ಸರ್ಕಾರವೂ ಅಂಗೀಕರಿಸಿತು. ಸಮುದ್ರದ ಕರೆ, ಆಟದ ಬಯಲು, ನಗರೋದ್ಯಾನ ಇವುಗಳಲ್ಲಿ ಈಗ ಸಂಜೆಯಹೊತ್ತು ಜನರು ಹಿಂಡುಹಿಂಡಾಗಿ ಕುಳಿತು ಇದರ ವಾಣಿಯನ್ನು ಕೇಳುವುದು ಸಾಮಾನ್ಯ ದೃಶ್ಯವಾಗಿದೆ. ವಿದ್ಯುಚ್ಛಕ್ತಿ ಒದಗಿರುವ ಗ್ರಾಮಾಂತರಗಳಲ್ಲಿ ಕೂಡ ಪೌರಸಭೆಯವರಾಗಲಿ ಸ್ಥಳೀಯ ಸಾಹುಕಾರರಾಗಲಿ ಇದರ ಉಪಯೋಗವನ್ನು ಜನಸಾಮಾನ್ಯಕ್ಕೆ ಒದಗಿಸುತ್ತಾರೆ. ಪುರಾಣ, ಹರಿಕಥೆ, ಸಂಗೀತ, ಸಾಹಿತ್ಯ ಇವು ಆಸಕ್ತರಿಗೆ ಈ ಮೂಲಕ, ಸಿನಿಮಾಗಳಿಂದ ಆಗುವಂತೆ, ಆದರೆ ವೆಚ್ಚವಿಲ್ಲದೆ ಆಯಾಸವಿಲ್ಲದೆ ಅನಾರೋಗ್ಯವಿಲ್ಲದೆ ಒದಗಿ, ಸಂಸ್ಕೃತಿಯನ್ನೂ ಸಂತೋಷವನ್ನೂ ತರುತ್ತವೆ. ಆದ್ದರಿಂದ ಈ ಕಡೆಗೆ ಹೆಚ್ಚು ಗಮನಕೊಡುವುದು ಆವಶ್ಯಕ. ಏಕೆಂದರೆ ಈಗ ರೇಡಿಯೊ ಮೂಲಕ ನಾವು ವರ್ತಮಾನವನ್ನಾಗಲಿ ವಿಚಾರವನ್ನಾಗಲಿ ಕೇಳುವುದು ಬಹುಮಟ್ಟಿಗೆ ಅನ್ಯಭಾಷೆಗಳ ಮೂಲಕ. ಯೂರೋಪ್, ಜಪಾನ್, ಆಸ್ಟ್ರೇಲಿಯಾ ಮುಂತಾದ ದೇಶಗಳ ಮಾತಿರಲಿ, ಇಂಡಿಯ ದೇಶದ ಮುಖ್ಯ ಪಟ್ಟಣಗಳಿಂದ ಬರುವವೇ ಕನ್ನಡಿಗರಿಗೆ ಹಿತವಾಗದವು, ಅರ್ಥವಾಗದವು; ಇವಕ್ಕಾಗಿ ನಾವು ಆಯಾ ಪ್ರಾಂತದವರನ್ನು ದೂರುವುದರಿಂದ ಪ್ರಯೋಜನವಿಲ್ಲ; ಏಕೆಂದರೆ

ಅವರು ತಮ್ಮ ತಮ್ಮ ಜನಕ್ಕಾಗಿ ಅವನ್ನು ಏರ್ಪಡಿಸಿಕೊಂಡಿದ್ದಾರೆ. ಕನ್ನಡಿಗರಿಗೆ ಹೀಗೆ ನಮ್ಮದು ಎಂದು ಹೇಳಿಕೊಳ್ಳುವ ಒಂದು ಆಕಾಶ ವಾಣಿಯು ಕಾರ್ಯಸ್ಥಾನವಿನ್ನೂ ಏರ್ಪಟ್ಟಿಲ್ಲ. ಮೈಸೂರಿನಲ್ಲಿ ಈಗ ಕೆಲವು ವರ್ಷಗಳಿಂದ ನನ್ನ ಮಿತ್ರರಾದ ಡಾಕ್ಟರ್ ಗೋಪಾಲಸ್ವಾಮಿ ಯವರ ಸಾಹಸ ಪರಿಶ್ರಮಗಳಿಂದ ಇಂಥ ಒಂದು ಸಂಸ್ಥೆ ನಡೆಯುತ್ತಿದೆ; ಬೆಂಗಳೂರಿನಲ್ಲಿಯೂ ಕೆಲವುಕಾಲ ನಡೆಯಿತು; ಆದರೆ ಇದರ ಶಕ್ತಿ ಸಾಲದು; ಖಾಸಗಿ ಪ್ರಯತ್ನ ಇಂಥ ವಿಚಾರದಲ್ಲಿ ಸಾರೋದ್ಧಾರವಾಗಿ ನಡೆಯುತ್ತದೆಂಬ ನಂಬಿಕೆಯೂ ಇಲ್ಲ. ಬೊಂಬಾಯಿ ಮದರಾಸಿನವ ರನ್ನು ಪ್ರಾರ್ಥಿಸಿಕೊಂಡು ಆಗಾಗ "ಕಾಲಚಕ್ರ" ವನ್ನು ಕೇಳುವು ದಾಗಿದೆ. ಇದರಿಂದ ಪುಣ್ಯವಿಲ್ಲ ಪುರುಷಾರ್ಥವಿಲ್ಲ. ಭಿಕ್ಷೆಹಾಕುವರು ಎಷ್ಟು ಹಾಕಿಯಾರು? ಅದರಿಂದ ಏನು ಹೊಟ್ಟೆತುಂಬೀತು? ಈಚೆಗೆ ಮೈಸೂರು ಸರಕಾರದವರು ಇದನ್ನು ಮನಸ್ಸಿಗೆ ತಂದುಕೊಂಡು ಡಾ|| ಗೋಪಾಲಸ್ವಾಮಿಯವರು ನಡಸುತ್ತಿದ್ದ "ಆಕಾಶವಾಣಿ" ಯನ್ನು ವಹಿಸಿಕೊಂಡರೆಂದು ತಿಳಿಯುತ್ತದೆ. ಅದು ಬಲಿಯಲಿ, ಬೆಳೆಯಲಿ; ಜೊತೆಗೆ ಹೈದರಾಬಾದಿನ ಮಂದಿರದಲ್ಲಿಯೂ ಕನ್ನಡಕ್ಕೆ ಹಿರಿಯ ಸ್ಥಾನ ಸಿಕ್ಕಲಿ. ಸರ್ ಅಕ್ಬರ್ ಹೈದರಿಯವರು ದಯೆತೋರಿ ದೆಹಲಿಯಿಂದಲೂ ಕನ್ನಡವನ್ನು ಕೇಳೋಣ. ಆದರೆ ಕನ್ನಡಿಗರು ಇದನ್ನು ಕೋರಬೇಕು, ಕೇಳಬೇಕು, ಬಳಸಬೇಕು. ಹಾಗಾದರೆ ಹೈದರಾಬಾದಿನ ಭಾಗ್ಯ, ಮೈಸೂರಿನ ಭಾಗ್ಯವೂ ಆಗುತ್ತದೆ; ಅಖಿಲ ಕರ್ಣಾಟಕದ ಭಾಗ್ಯವೂ ಆಗುತ್ತದೆ.

ಈ ಸಂದರ್ಭದಲ್ಲಿ ಸಾಹಿತಿಗಳ ಪರವಾಗಿ ಒಂದು ಮಾತನ್ನಾಡ ಬೇಕಾಗಿದೆ. ಸಂಗೀತಗಾರರಿಗೆ ರೇಡಿಯೊ ವ್ಯವಸ್ಥಾಪಕರು ಅಷ್ಟೋ ಇಷ್ಟೋ ಸಂಭಾವನೆಯನ್ನು ಕೊಡುತ್ತಾರೆ. ಸಾಹಿತಿಗಳಿಗೂ ಉಪನ್ಯಾಸ ಕರಿಗೂ ಅದು ಇಲ್ಲ. ಕೆಲವು ವೇಳೆ ಗಾಡಿ ಬಾಡಿಗೆ ದೊರೆಯುವುದೂ ದುರ್ಲಭ. ಸರಿಯಾದ ಸರಕು ಬೇಕಾದರೆ ಅದು ಬಿಟ್ಟಿ ಒದಗುವುದಿಲ್ಲ, ದಾಕ್ಷಿಣ್ಯಕ್ಕೆ ಒದಗುವುದಿಲ್ಲ. ಬಿಟ್ಟಿ ಬರುವುದು ಸಾಮಾನ್ಯವಾಗಿ ಉತ್ತಮ ವಸ್ತುವಲ್ಲ; ದಾಕ್ಷಿಣ್ಯಕ್ಕೆ ಬರುವುದು ಸಲಸಲಕ್ಕೂ ಬರುವುದಿಲ್ಲ. ಮದ

ರಾಸು ಪ್ರಾಂತದಲ್ಲಿ ಕೆಲವು ಉಪನ್ಯಾಸಕರು ಯಾವುದಾದರೂ ಒಂದು ವಿದ್ಯಾಸಂಸ್ಥೆಯಲ್ಲಿ ಉಪನ್ಯಾಸ ಮಾಡಿದರೂ ನೂರಾರು ರೂಪಾಯಿಗಳನ್ನು ಕೇಳುತ್ತಾರೆ. ಹೊರದೇಶದಲ್ಲಂತೂ ಇದು ಒಂದು ಉದ್ಯೋಗವಾಗಿದೆ. ಸಂಪಾದನೆಗೆ ಮಾರ್ಗವಾಗಿದೆ. ಆಕಾಶವಾಣಿಯ ನಿಯೋಜಕರನ್ನು ಕೇಳಿದರೆ ದುಡ್ಡಿಲ್ಲವೆನ್ನುತ್ತಾರೆ: ಇದನ್ನೇನು ಸಂಗೀತದ ಮೇಲಣ ಅಭಿಮಾನ ಎನ್ನೋಣವೋ ಸಾಹಿತ್ಯದ ಮೇಲಣ ನಿರಭಿಮಾನ ಎನ್ನೋಣವೋ?

## ಸಂಗೀತ ಮತ್ತು ಕನ್ನಡ

ಸಂಸ್ಕೃತದ ಸಂಬಂಧದಲ್ಲಿ ಹೇಗೋ ಸಂಗೀತದ ಸಂಬಂಧವಾಗಿಯೂ ಹಾಗೇ ಒಂದು ತೊಂದರೆದೆ. ಅದರಲ್ಲಿರುವುದು ಒಂದು ಸ್ವರಭಾಗ, ಇನ್ನೊಂದು ಸಾಹಿತ್ಯಭಾಗ. ಸ್ವರಭಾಗ ಎಲ್ಲರಿಗೂ ಒಂದೇ. ಆರೋಹಣಾವರೋಹಣಗಳೂ ಸಂಚಾರಗಳೂ ಒಬ್ಬೊಬ್ಬರಿಗೆ ಒಂದೊಂದು ಬೇರೆ ಬೇರೆ ಏನಲ್ಲ; ಒಬ್ಬರು 'ಸಾರಿಗಾಮುಪಾ'ಎಂದರೆ ಇನ್ನೊಬ್ಬರು 'ಟಾತಡಾಥಣಂ' ಎಂದೇನೂ ಎನ್ನುವುದಿಲ್ಲ. ಆದರೆ ಸಾಹಿತ್ಯ ಮಾತ್ರ ಬೇರೆ; ಅದರ ಭಾಷೆಗಳು ಬೇರೆಬೇರೆ: ಆದ್ದರಿಂದ ಅವುಗಳನ್ನು ಬಲ್ಲವರಿಗೆ ಅದರ ಬೆಲೆ ಹೆಚ್ಚುತ್ತದೆ; ಅವುಗಳಲ್ಲಿ ಮಮತೆ ಹೆಚ್ಚುತ್ತದೆ. ಅವುಗಳಿಂದ ಹೆಚ್ಚಿನ ಸಂಸ್ಕಾರವಾಗುತ್ತದೆ. ಈ ಕಡೆಗೆ ಗಮನ ಹೋದರೆ, ಹಾಡು ನಮ್ಮ ಮಾತಿನದಾಗಿರಲಿ ಎಂದು ಅಪೇಕ್ಷಿಸುವುದು ಅಸ್ವಾಭಾವಿಕವಲ್ಲ. ಈಗ್ಗೆ ಕೆಲವು ತಿಂಗಳ ಕೆಳಗೆ ಚಿದಂಬರದಲ್ಲಿ ನಡೆದ ಸಂಗೀತ ಸಮ್ಮೇಳನದಲ್ಲಿ ಇನ್ನು ಮೇಲೆ ತಮಿಳು ನಾಡಿನಲ್ಲಿ ನಡೆಯುವ ಸಂಗೀತ ಕಛೇರಿಗಳಲ್ಲಿ ತಮಿಳು ಕೀರ್ತನೆಗಳಿಗೆ ಪ್ರಾಧಾನ್ಯ ಕೊಡಬೇಕೆಂದು ಒಂದು ವಿಚಾರ ಬಂದು ನಿರ್ಣಯವಾಯಿತು. ಇದು ತಮಿಳರ ಭಾಷಾಭಿಮಾನದಿಂದ ನಿರೀಕ್ಷಿತವಾದದ್ದೆ. ಆದರೆ, 'ರಾಷ್ಟ್ರೀಯ' ಪತ್ರಿಕೆಗಳು ಕೆಲವು ಇದನ್ನು ಹಳಿದು 'ಪಾಕಿಸ್ತಾನದಂತೆ ಇವರೂ ಒಂದು ದ್ರಾವಿಡಸ್ತಾನವನ್ನು ಅಪೇಕ್ಷಿಸುವರೋ?' ಎಂದು ಟೀಕಿಸಿವೆ. ಆ ವಿಧವಾದ ಸಂಕಲ್ಪವಿದ್ದರೂ ತಾನೇ ಏನು ತಪ್ಪು? ಕಾಂಗ್ರೆಸ್ಸಿನವರೇ ಭಾಷಾನುಸಾರಿಯಾದ ಪ್ರಾಂತ ವಿಭಾಗಗಳನ್ನು

ಸೂಚಿಸಿ ಅನುಮೋದಿಸಿಲ್ಲವೇ? ನಮ್ಮ ಭಾಷೆ ಉಳಿಯಬೇಕೆಂದರೆ, ಅದನ್ನು ಸರ್ವ ಪ್ರಯತ್ನದಿಂದಲೂ ಉಳಿಸಿಕೊಳ್ಳಬೇಕು. ಈಗ್ಗೆ ಹನ್ನೊಂದು ವರ್ಷಗಳ ಕೆಳಗೆ ಮೈಸೂರು ನಗರದಲ್ಲಿ ಸಾಹಿತ್ಯ ಸಮ್ಮೇಳನ ನಡೆದಾಗ ಅಲ್ಲಿನ ಪ್ರಸಿದ್ಧ ಸಂಗೀತಗಾರರಾಗಿದ್ದ ಗಾನವಿಶಾರದ ಬಿ. ಕೃಷ್ಣಪ್ಪನವರಿಂದ ಸಂಗೀತ ಕಛೇರಿ ನಡೆಯಿತು. ಕನ್ನಡದ ಕೀರ್ತನೆಗಳನ್ನೇ ಹಾಡಬೇಕೆಂದು ಅತಿಥಿಗಳು ಅಪೇಕ್ಷಿಸಿದರು; ಕೃಷ್ಣಪ್ಪನವರು ಒಪ್ಪಿದರು. "ಪುರಂದರದಾಸರ ಕೀರ್ತನೆಗಳಲ್ಲಿ ಸಂಗೀತಸತ್ವವಿಲ್ಲ; ಅವುಗಳನ್ನು ತ್ಯಾಗರಾಜರ ಕೀರ್ತನೆಗಳಿಗೆ ಸರಿಸಮನಾಗಿ ಹಾಡುವುದಕ್ಕಾಗುವುದಿಲ್ಲ" ಎಂಬ ಅಪವಾದವು ತಿಳಿಯದವರಿಂದ ಬಂದದ್ದು ಎಂಬುದನ್ನು ಅಂದು ಕೃಷ್ಣಪ್ಪನವರು ತಮ್ಮ ಶಾಸ್ತ್ರಸಂಪತ್ತಿನಿಂದ ವ್ಯಕ್ತಪಡಿಸಿದರು; ತಮಿಳರು ಬರಿಯ ತಮಿಳು ಕೀರ್ತನೆಗಳೇ ಬೇಕೆಂದಿದ್ದರೂ, ತೆಲುಗರು ಬರಿಯ ತೆಲುಗು ಕೀರ್ತನೆಗಳೇ ಬೇಕೆಂದಿದ್ದರೂ, ಮುಸಲ್ಮಾನರು ಬರಿಯ ಹಿಂದೂಸ್ಥಾನಿ ಕೀರ್ತನೆಗಳೇ ಬೇಕೆಂದಿದ್ದರೂ ಅವರೆಲ್ಲರನ್ನೂ ಹೇಗೆಯೋ ಸಂತೃಪ್ತಿಪಡಿಸುವ ಅಮೋಘ ಪಾಂಡಿತ್ಯ, ರಸಿಕತೆ, ಶಾರೀರ ಮಾಧುರ್ಯಗಳು ಅವರಲ್ಲಿದ್ದುವು. ಹೀಗಿದ್ದರೂ ಅವರಿಂದ ಮಿಶ್ರ ಕಛೇರಿಯನ್ನು ಅಪೇಕ್ಷಿಸದೆ ಕನ್ನಡದ ಕೀರ್ತನೆಗಳನ್ನು ಕೇಳಿದ್ದು ಕನ್ನಡಿಗರ ತಪ್ಪೇ? ಇದರಿಂದ ತ್ಯಾಗರಾಜರಿಗಾಗಲಿ, ತೆಲುಗಿಗಾಗಲಿ ಅವಮಾನವೆಂದೆಣಿಸಬಹುದೇ? ರಾಗರಸ ಸಾಮಂಜಸ್ಯದಿಂದ ಕೂಡಿದ ಭಕ್ತಿಭಾಗ್ಯಸುಧೆಯನ್ನು ಸವಿಯಲು ತ್ಯಾಗರಾಜರಲ್ಲಿಗೇ ಹೋಗಬೇಕು. ಅವರು ಸಂಗೀತರಾಜರೂ ಹೌದು, ಸಾಹಿತ್ಯರಾಜರೂ ಹೌದು. ಸಾಹಿತ್ಯದ ವಿಚಾರವನ್ನು ಹತ್ತಿಸಿಕೊಳ್ಳದಿದ್ದವರಿಗೆ ಮೋಹಕವಾದ ಮಾಧುರ್ಯವಿದ್ದದ್ದೆಲ್ಲಾ ಒಂದು, ಸವಿ ಸೊಗಸು ತೋರಿದ್ದೆಲ್ಲಾ ಒಂದು —ಅದು ತಮಿಳ ಹಾಡಾಗಲಿ, ಹಿಂದಿಯದಾಗಲಿ, ಇಂಗ್ಲಿಷಿನದಾಗಲಿ! ಚಲ್‌ಚಲ್‌ರೆ ನೌಜವಾನ್, ಎಂದಾಗಲಿ, ಅಪ ಮೈನೇ ಜಾನಾ ಹೈ- ಎಂದಾಗಲಿ ಈಗ ಗಾಡಿ ಹೊಡೆಯುವ ದನ ಕಾಯುವ ಹುಡುಗರೂ ಹೇಳಿಕೊಂಡು ಹೋಗುವುದಿಲ್ಲವೇ? ಸಂಗೀತಕ್ಕೂ ಸಾಹಿತ್ಯಕ್ಕೂ ಸಂಬಂಧವಿದ್ದರೂ, ಸಂಗೀತ ಬೇರೆ, ಸಾಹಿತ್ಯ ಬೇರೆ. ಸಾಹಿತ್ಯವಲ್ಲಿ

ಭಾಷೆಯ ಪ್ರಶ್ನೆ ಎದ್ದೇ ಏಳುತ್ತದೆ. ‘ ಶಬ್ದಾರ್ಥೌ ಸಹಿತೌ ಕಾವ್ಯಂ ’ ಅಲ್ಲವೇ ?

## ಚಲನಚಿತ್ರ ಮತ್ತು ಕನ್ನಡ

ಆಧುನಿಕ ಜೀವನದಲ್ಲಿ ಚಲನಚಿತ್ರವು ಬಹು ಪ್ರಮುಖವಾದ ಪಾತ್ರವನ್ನು ವಹಿಸುತ್ತಿದೆ. ಅದನ್ನು ನೋಡಬೇಕೆಂದು ಅಪೇಕ್ಷೆ ಪಡದವರಿಲ್ಲ—ಪ್ರಣ್ಯಕಥೆಗಾಗಿ, ಸೌಖ್ಯಕ್ಕಾಗಿ, ಸೌಂದರ್ಯಕ್ಕಾಗಿ, ಹೊತ್ತು ಹೋಗದ್ದಕ್ಕಾಗಿ ನಾನಾ ಉದ್ದೇಶದಿಂದ ಜನರು ಅದಕ್ಕೆ ಹೋಗುತ್ತಾರೆ; ಬಡವರು ಭಾಗ್ಯವಂತರು, ಹೆಂಗಸರು ಗಂಡಸರು, ಮಕ್ಕಳು ಮುದುಕರು ಎಲ್ಲರೂ ಹೋಗುತ್ತಾರೆ. ಇದು ಇರುವ ಕಡೆಯಲ್ಲಿ ಜನರಿಗೆ ಪುರಾಣ ಬೇಡ, ಕಥಾ-ಭಜನ ಬೇಡ, ನಾಟಕ ಬೇಡ. ಏಕೆಂದರೆ ಸಿನಿಮಾ ಮಂದಿರದಲ್ಲಿ ಸುಖಾಸನಾಸೀನರಾಗಿ, ಸ್ನೇಹ ಪ್ರೇಮ ಪಾನ ಧೂಮ ಸುಂದರವಸ್ತುಗಳೊಡಗೂಡಿ ಎರಡು ಮೂರು ಘಂಟೆಗಳೊಳಗೆ ದೇಶ ವಿದೇಶಗಳ ಪ್ರಸಿದ್ಧ ನಟನಟಿಯರ ಅಭಿನಯವನ್ನು ನೋಡಬಹುದು, ಅವರ ಗಾನವನ್ನು ಕೇಳಬಹುದು. ಇದರಲ್ಲಿ ಪ್ರಪಂಚವೇ ಸ್ಫುರಿಸುತ್ತದೆ; ಆದ್ದರಿಂದ ಮನರಂಜನದಕ್ಕೇ ಬೆಲೆ. ಚೆಲುವಿರುವುದು ಎರಡು ಮೂರು ತಿಂಗಳು ನಡೆದರೆ, ಹುರುಳಿಲ್ಲದ್ದು ಎರಡು ಮೂರು ದಿನಗಳೂ ನಿಲ್ಲುವುದಿಲ್ಲ. ಇವುಗಳನ್ನು ನೋಡಿ ನೋಡಿ ಜನರಿಗೆ ರಸಿಕತೆ ವಿಮರ್ಶ ಬುದ್ಧಿಗಳು ಹೆಚ್ಚಾಗಿವೆ. ಆದರೆ ಅದನ್ನು ನೋಡಲು ಒಳಕ್ಕೆ ಹೋಗಬೇಕಾದರೆ ಟಿಕೇಟು ಕೊಡಬೇಕು; ಅವನ್ನು ಕೊಳ್ಳಬೇಕು; ಸಾಲ ಹೇಳಿದರೆ ಯಾರೂ ಕೇಳುವುದಿಲ್ಲ; ಎಲ್ಲರನ್ನೂ ಬಿಟ್ಟು ಬಿಡುವುದಿಲ್ಲ. ನಿರ್ದಾಕ್ಷಿಣ್ಯವಾಗಿ ಹಣ ಕಕ್ಕಬೇಕಾಗುತ್ತದೆ; ಇದರ ರುಚಿ ಹತ್ತಿದವರು ಉಪವಾಸವೋ ಸಾಲವೋ ಮಾಡಿ, ಹೋಗಿ ನೋಡುತ್ತಾರೆ. ಇದು ಎಷ್ಟೋ ವೇಳೆ ಜೂಜಿಗಿಂತ ಅನರ್ಥಕಾರಕವಾಗಿದೆ. ಮಿತಿಯಲ್ಲಿ ಎಲ್ಲ ಒಳ್ಳೆಯದೇ; ಅತಿಯಿಂದ ಅಮೃತವೂ ವಿಷ. ಇದರ ಅತಿಗೆ, ಚಟಕ್ಕೆ, ನನ್ನ ಆಕ್ಷೇಪಣೆ.

ಈ ಸಂದರ್ಭದಲ್ಲಿ ಕನ್ನಡಚಿತ್ರಗಳನ್ನು ಸಾಧಿಸಿರುವ ಕಲೆಗಾರ ಕನ್ನಡಿಗ ಸಾಹಸಿಗಳನ್ನು ನಾನು ಅಭಿನಂದಿಸುತ್ತೇನೆ. ಅವು ಇನ್ನೂ

ಹೆಸರಾಗಲಿ, ಇತರ ಭಾಷೆಗಳ ಚಿತ್ರಗಳು ಕನ್ನಡ ಪ್ರಾಂತದಲ್ಲಿ ಧನಮಾನಗಳನ್ನು ಸೂರೆಮಾಡುತ್ತಿರುವಂತೆ ಅವೂ ಮಿಕ್ಕ ಭಾಷಾಪ್ರಾಂತಗಳಲ್ಲಿ ಸೂರೆಮಾಡಿ ಕೀರ್ತಿ ಸಂಪಾದಿಸಲಿ, ಜನದ ಪ್ರೇಯಸ್ಸು ಶ್ರೇಯಸ್ಸುಗಳನ್ನು ಸಾಧಿಸಲಿ ಎಂದು ಪ್ರಾರ್ಥಿಸುತ್ತೇನೆ.

ಇಲ್ಲಿ ನಮಗೆ ಪ್ರಸಕ್ತವಾದ ಸಂಗತಿಯೇನೆಂದರೆ, ಕನ್ನಡ ಪುಸ್ತಕಗಳನ್ನು ಓದುವವರು ಇದರಿಂದ ಕಡಮೆಯಾಗಿದ್ದಾರೆ; ಸಿನಿಮಾ ಕಥೆಯಷ್ಟು, ಚಿತ್ರದಷ್ಟು, ಹಾಡಿನಷ್ಟು ರಮಣೀಯವಾಗಿ ಪುಸ್ತಕ ಬರೆಯಬಲ್ಲವರಾರು? ಅಂಥ ಒಂದು ಪುಸ್ತಕವಿದೆಯೆಂದು ತಿಳಿದರೂ, ಅದು ಎಂದು ಬೇಕಾದರೆ ಅಂದು ಅಂಗಡಿಯಲ್ಲಿ ಸಿಕ್ಕುತ್ತದೆ; ಆದ್ದರಿಂದ ಎಂದಾದರೂ ಕೊಂಡುಕೊಂಡರೆ ಸರಿ; ಕೊಂಡುಕೊಳ್ಳುವುದು ತಾನೇ ಏಕೆ? ಯಾರನ್ನಾದರೂ ಕೇಳಿ ತಂದರೆ ಸರಿ; ಯಾರನ್ನು ತಾನೇ ಏಕೆ ಕೇಳಬೇಕು? ಪುಸ್ತಕ ಭಂಡಾರಗಳಿರುತ್ತವಲ್ಲ! ಆದರೆ ಸಿನಿಮಾ ಚಿತ್ರ ಹೊರಟು ಹೋಗಿಬಿಡುತ್ತದೆ; ಅದು ನಮ್ಮನ್ನು ಕಾಯುವುದಿಲ್ಲ.

ಈ ಸಂದರ್ಭದಲ್ಲಿ ಒಂದು ಸಮಾಧಾನ. ನಮ್ಮ ದೇಶದ ಚಿತ್ರಗಳು ಪಾಶ್ಚಾತ್ಯ ದೇಶದವುಗಳಷ್ಟು ಅಶ್ಲೀಲವಲ್ಲ; ಎಷ್ಟೋ ಗಂಭೀರವಾಗಿರುತ್ತವೆ. ಅಶ್ಲೀಲವೆಂದರೆ ಯಾವುದು? ಮರ್ಯಾದೆವಂತರಿಗೆ ನಾಚಿಕೆಯುಂಟುಮಾಡುವುದೇ ಅಶ್ಲೀಲ. ನಾಚಿಕೆಯಾಗದಂತೆ ಮನಸ್ಸು ಮರದಾಗಿಬಿಟ್ಟರೇನು ಅಶ್ಲೀಲವು ಶ್ಲೀಲವಾಗುವುದಿಲ್ಲ; ವಿಟ ಚರ್ಯೆಯು ಶೃಂಗಾರವಾಗುವುದಿಲ್ಲ. ಸಿನಿಮಾಕ್ಕಿಂತಲೂ ಅನ್ಯ ಸಾಹಿತ್ಯಗಳಿಂದ ಭಾಷಾಂತರವಾಗಿ ಬರುವ ಕೆಲವು ಕಥೆಗಳು. ಹೀಗೆ ಅಶ್ಲೀಲಗಳಾಗಿರುತ್ತವೆ. ಮಾನವಂತರು ಇವುಗಳನ್ನು ಓದಲು ನಿಜವಾಗಿಯೂ ನಾಚಿಕೊಳ್ಳುತ್ತಾರೆ. ನೈಸರ್ಗಿಕವಾಗಿ ನಡೆಯುತ್ತೇವೆಂದು, ಬೀದಿಯಲ್ಲಿ ಮಂಚ ಹಾಕಿದ್ದರಿಂದ ಏನು ಪುಣ್ಯ, ಏನು ಪುರುಷಾರ್ಥ?

## ಆಟ ಮತ್ತು ಕನ್ನಡ

ಈ ಸೌಲಭ್ಯಾಕಾಂಕ್ಷೆ, ಭೋಗ ಪ್ರವೃತ್ತಿ, ವಿನೋದಾಸಕ್ತಿ, ಲಘು ಚಿತ್ತವೃತ್ತಿ, ಇವು ದೊಡ್ಡ ದೊಡ್ಡವರಲ್ಲಿಯೂ ವಿದ್ಯಾವಂತರಲ್ಲಿಯೂ ಕಂಡುಬರುತ್ತವೆ. ಹಿಂದೆ ಇಷ್ಟು ವಿನೋದ ಸಾಧನಗಳಿರಲಿಲ್ಲ;

ಇಪ್ಪವುಗಳಿಂದ ಇಷ್ಟು ಬಾಧಕವಿರಲಿಲ್ಲ. ಬೇಸರವಾಗಿ, ಏನೂ ತೋರದೆ ಹೋದರೆ, ಒಂದು ಪುಸ್ತಕವನ್ನು ಹಿಡಿದುಕೊಂಡು ಕೂರುವುದು ರೂಢಿಯಾಗಿತ್ತು. ಓದಿನಲ್ಲಿ ಸ್ವಾಭಾವಿಕವಾಗಿ ಹುಟ್ಟುವ ಪ್ರವೃತ್ತಿಯೇ ವಿದ್ಯಾವಂತನ ಮುಖ್ಯ ಲಕ್ಷಣ. ಈಗ ಒಟ್ಟಿನಲ್ಲಿ ಪಾಠಕ್ಕಿಂತ ಆಟ ಪ್ರಧಾನವಾಗಿದೆ; ಆಟ ಆಡುವವರು ಹತ್ತು ಜನವಾದರೆ, ನೋಡುವವರು ನೂರು ಜನ; ಅದರ ವಿಚಾರ [illegible] ಮಾತನಾಡುತ್ತ ಕಾಲ ಕಳೆಯುವವರು, ಕಾಸು ಕಳೆಯುವವರು, ಸಾವಿರ ಜನ; ತಮ್ಮೂರಿನಲ್ಲಿರಲಿ, ಹೊರ ಊರಿನಲ್ಲಿ ಯಾವುದಾದರೂ ದೊಡ್ಡ ಕ್ರಿಕೆಟ್ ಆಟ ನಡೆದರೆ ಅವರು ನೆರೆ ಹೊರೆಯ ರೇಡಿಯೋಗಳಿಗೆ ಅರ್ಧ ರಾತ್ರಿಯಲ್ಲಿ ಮುತ್ತಿಗೆ ಹಾಕುತ್ತಾರೆ. ಒಂದು ಕ್ರಿಕೆಟ್ ಟೆಸ್ಟ್‌ಗಳಿಗಾಗಿಯೇ ಎಷ್ಟು ಸಾವಿರ ರೂಪಾಯಿಗಳು ವೆಚ್ಚವಾಗುತ್ತಿವೆಯೆಂಬುದು ಜನಸಾಮಾನ್ಯಕ್ಕೆ ತಿಳಿಯುವುದಿಲ್ಲ. ಸತ್ತ್ವ ಶೌರ್ಯದಾಯಕಗಳಾದ ಧೈರ್ಯ ಕಾರ್ಯಗಳ ಮಾತಿರಲಿ, ಬಯಲಿನಲ್ಲಾದರೂ ಓಡಾಡಿದರೆ ಮೈಗೆ ಒಳ್ಳೆಯದು. ಆದರೆ ಬಯಲಾಟಕ್ಕಿಂತ ಒಳಗೆ ಕೂತು ಇಸ್ಪೀಟು, ಪಿಂಗ್ ಪಾಂಗ್, ಚೆಂಡು ಬಿಲ್ಲೆ ಮುಂತಾದ ಆಟಗಳನ್ನು ಆಡುವವರು ಬಹುಜನ. ಓದಿ ಓದಿ ಮರುಳಾದ ಕೂಚುಭಟ್ಟ—ಎಂದು ಹಿಂದೆ ಹೇಳುತ್ತಿದ್ದರು: ಈಗ ಅದಕ್ಕೆ ವಿರುದ್ಧವಾದ ಒಂದು ಹೇಳಿಕೆಯನ್ನು ಮಾಡಬೇಕಾಗಿದೆ. ಜೀವನದಲ್ಲಿ ಘನತ್ವವೂ ವಿಚಾರಪರತೆಯೂ ಹುಟ್ಟಬೇಕು. ಇಲ್ಲದಿದ್ದರೆ ಅದು ಬೀಳಾಗುತ್ತದೆ: ಜೀವನ ಹೇಗಿದ್ದರೆ ಸಾಹಿತ್ಯ ಹಾಗೆ ಆಗುತ್ತದೆ; ಆ ಸಾಹಿತ್ಯವನ್ನು ಓದಿದವರೂ ಹಾಗೇ ಆಗುತ್ತಾರೆ. ವಿದ್ಯಾವಂತನಾದವನು ನಿತ್ಯವೂ ಏನಾದರೊಂದು ದೊಡ್ಡ ಗ್ರಂಥವನ್ನು, ಅಲ್ಪಸ್ವಲ್ಪವಾದರೂ, ಓದುತ್ತಿರಬೇಕು. ಇಲ್ಲದಿದ್ದರೆ ಬುದ್ಧಿ ಬೆಳೆಯುವುದು ಹೇಗೆ? ಹೊಳೆಯುವುದು ಹೇಗೆ? ಸಜ್ಜನಸಂಗದಂತೆ ಸದ್ಗ್ರಂಥಸಂಗವೂ ಆವಶ್ಯಕ. ಹಿಂದಿನ ಸಂಸ್ಕೃತಿಯಲ್ಲಿ ಪಾರಾಯಣ ಪುರಾಣ ಶ್ರವಣಾದಿಗಳು ಈ ಸ್ಥಾನದಲ್ಲಿದ್ದುವು. ಸಾಧಾರಣವಾಗಿ ನವರಾತ್ರಿಯಲ್ಲಿ ಪ್ರತಿಯೊಬ್ಬರೂ ರಾಮಾಯಣ ಪಾರಾಯಣ ಮಾಡುತ್ತಿದ್ದರು; ನಿತ್ಯವೂ ಭಗವದ್ಗೀತೆ, ವಿಷ್ಣು ಸಹಸ್ರನಾಮಾದಿ

ಗಳನ್ನು ಹೇಳುತ್ತಿದ್ದರು; ಸ್ತೋತ್ರಗಳನ್ನೋ ದೇವರ ನಾಮಗಳನ್ನೋ ಪಠಿಸುತ್ತಿದ್ದರು. ಇವೆಲ್ಲಾ ಈಗ ಲುಪ್ತವಾಗಿವೆ: ಅವುಗಳ ಬದಲಿಗೆ ಯಾವುದೂ ಬಂದಿಲ್ಲ. ಇದರ ಪ್ರತಿಫಲನವನ್ನು ಸಾಹಿತ್ಯದಲ್ಲಿಯೂ ನೋಡುತ್ತೇವೆ: ಈಗ ಸಣ್ಣಕಥೆಗಳು, ಕವಿತೆಗಳು, ಹರಟೆಗಳು ಹೆಚ್ಚಾಗಿವೆ. ಚೆನ್ನಾಗಿರಬೇಕೆಂದರೆ ಇದಾವ ಬರವಣಿಗೆಯೂ ಸುಲಭವಲ್ಲ; ಆದರೆ ಚೆನ್ನಾಗಿ ಬರೆಯಬೇಕೆಂಬ ಇಚ್ಛೆಯಾಗಲಿ, ಅದಕ್ಕೆ ತಕ್ಕ ಶ್ರಮವಾಗಲಿ ಜನಕ್ಕೆ ಬೇಕಾದಂತೆ ತೋರುವುದಿಲ್ಲ. ಅವರು ಸುಲಭ ಸಂತೃಪ್ತರು. ಈ ವಿಧವಾದ ಕಾವ್ಯಜಾತಿಗಳಿಗೆ ಹೆಚ್ಚು ಓದಬೇಕಾದದ್ದಿಲ್ಲ, ಚಿಂತಿಸಬೇಕಾದದ್ದಿಲ್ಲ: ಅವು ಹೋದದ್ದೇ ದಾರಿ. ಈಗಿನ ಅನೇಕ ಲೇಖಕರಿಗೆ ನಿಯಮ ಪರಿಶ್ರಮಗಳು ಬೇಡ; ಅವು ಕೋಟಿನ ಗುಂಡಿಗಳ ಹಾಗೆ!

## ಕನ್ನಡದ ಓದುಬರಹ

ಪ್ರತಿಭಾಸಂಪನ್ನರಾದ ಕನ್ನಡಿಗರು, ಕನ್ನಡದಲ್ಲಿ ಬರೆಯಬೇಕಾದರೆ ಕಷ್ಟವಲ್ಲ, ಕಷ್ಟವಾಗಿರಬಾರದು. ಆದರೆ ಕೆಲವರು ತಮ್ಮ ವಿಚಾರವಾಗಿ ನೃಪತುಂಗನು ಒಂದು ಸಾವಿರ ವರ್ಷಗಳ ಕೆಳಗೇ ಕೊಟ್ಟ "ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್" ಎಂಬ ಪ್ರಶಸ್ತಿಯ ಸತ್ಯತೆಯನ್ನು ಸ್ಥಾಪಿಸಬೇಕೆಂದು ಹಟತೊಟ್ಟಿರುವಂತೆ ಕಾಣುತ್ತದೆ. ಸದಾ ಓದುತ್ತಿರಬೇಕಾದದ್ದೇ ವೃತ್ತಿಯಾಗಿ ಉಳ್ಳವರೂ ಕೂಡ ಓದುವುದು ಕಡಮೆಯಾಗಿದೆ: ಪರೀಕ್ಷೆಗೆ ಎಷ್ಟು ಓದಿದ್ದರೋ ಪಾಠ ಹೇಳುವುದಕ್ಕೆ ಎಷ್ಟು ಬೇಕೋ ಅಷ್ಟು ಮಾತ್ರ ಓದುವುದಾಗಿ ಹೋಗಿದೆ. ನಮ್ಮಲ್ಲಿ ಓದುವುದಕ್ಕೆ ಬೇಕಾದ ಸೌಲಭ್ಯಗಳೂ ಕಡಮೆ; ಸೌಲಭ್ಯಗಳು ಇರುವಕಡೆ ಅವುಗಳನ್ನು ನಾವು ಉಪಯೋಗಿಸಿಕೊಳ್ಳುವುದನ್ನು ಅರಿಯೆವು; ಖಂಡನೀಯವಾದ ರೀತಿಯಲ್ಲಿ, ನಿಂದನೀಯವಾದ ರೀತಿಯಲ್ಲಿ ಉಪಯೋಗಿಸಿಕೊಳ್ಳುವೆವು. ಪುಸ್ತಕಗಳೂ ಅವುಗಳ ಕಣ್ಣು ಮೂಗುಗಳೂ ನಮ್ಮ ಕೈಯಲ್ಲಿ ಸುರಕ್ಷಿತವಾಗಿರುತ್ತವೆಂಬ ನಂಬಿಕೆಯಿಲ್ಲ. ದೈವಭಕ್ತಿ, ಧರ್ಮಶ್ರದ್ಧೆ, ಪಾಪಭೀತಿ, ಕರ್ತವ್ಯಪರಾಯಣತೆ ಇವುಗಳಲ್ಲಿ ಉದಾಸೀನತೆ ಬಂದು, 'ಶಿಸ್ತು' ಇಲ್ಲವೆ, ಇಂದಿನ ಜೀವನವು ಕೆಲವು ವೇಳೆ ಲಂಗುಲಗಾಮಿಲ್ಲದ ಕುದುರೆಯಂತೆ ತೋರು

ತ್ತದೆ : ಇಂದಿನ ಫ್ರಾನ್ಸು ಹಿಂದಿನ ರೋಮ್ ಇವುಗಳನ್ನು ನೆನಪಿಗೆ ತರುತ್ತದೆ.

ಓದು ಕಡಮೆಯಾಗಿರುವುದಕ್ಕೆ ಮತ್ತೊಂದು ಕಾರಣ ಅವರ ಪ್ರಯೋಜನ ದೃಷ್ಟಿ ಮತ್ತು ಇಂದಿನ ವಿಶೇಷ ಪರಿಸ್ಥಿತಿ. ಕೆಲವರು ಎಷ್ಟು ಓದಿದರೂ ಅಷ್ಟೆ, ಕೆಲಸ ಸಿಕ್ಕುವುದಿಲ್ಲ ಎನ್ನುತ್ತಾರೆ; ಮಿಕ್ಕವರು ಎಷ್ಟು ಓದದಿದ್ದರೂ ಚಿಂತೆಯಿಲ್ಲ ಕೆಲಸ ಸಿಕ್ಕುತ್ತದೆ ಎನ್ನುತ್ತಾರೆ. ಅಂತೂ ಅನಾದರ ಸಾಮಾನ್ಯವಾಗುತ್ತದೆ. ಇನ್ನೊಂದು ಕಾರಣ, ಬರವಣಿಗೆಯ ಸ್ವರೂಪ. ಅನೇಕ ಬರವಣಿಗೆ ಸಪ್ಪೆ: ಬಡಕಲಾದ ಅನುಕರಣ: ಮತ್ತೆ ಕೆಲವು ಅರ್ಥವೇ ಆಗುವುದಿಲ್ಲ: ಹಿಂದೆ ಒಂದು ವಿಧವಾದ ಕ್ಲಿಷ್ಟನೈಷಧ ಪಾಂಡಿತ್ಯವಿದ್ದರೆ, ಇಂದು ಮತ್ತೊಂದು ವಿಧವಾದ ನಿರರ್ಥಕ ಪಾಂಡಿತ್ಯವಿರುತ್ತದೆ. ಎಷ್ಟೋ ಗದ್ಯಪದ್ಯಗಳು ನನಗೆ ಅರ್ಥವಾಗುವುದಿಲ್ಲ. ಕಷ್ಟವಾಗಿದ್ದರೆ ಇರಲಿ; ಅದಕ್ಕೆ ನನ್ನ ಆಕ್ಷೇಪಣೆಯಿಲ್ಲ; ಆದರೆ ಅಸ್ಪಷ್ಟ. ಮತ್ತೆ ಕೆಲವು ಬರಿಯ ಡೌಲು. ಡೊಳ್ಳು. ಆದರೂ ಇವುಗಳ ಕರ್ತರೋ ಪ್ರಚಾರಕರೋ ಊರೂರು ತಿರುಗಿ, ಮನೆಮನೆಗೆ ಅಲೆದು, ಅವುಗಳನ್ನು ತಲೆಗೆ ಕಟ್ಟುತ್ತಾರೆ: ಅವುಗಳನ್ನು ಕೊಂಡವರು ಓದಿ ಬೇಜಾರು ಪಡುತ್ತಾರೆ. ಅವುಗಳನ್ನು ಸರಸ, ಸುಂದರ, ಎನ್ನುವವರು ಇಲ್ಲವೆಂದಲ್ಲ—ಸೌಂದರ್ಯವಿಲ್ಲದ ಕಡೆಯಲ್ಲಿಯೂ ಅದನ್ನು ಕಂಡು ಮೆಚ್ಚುವ ಅಸಾಧಾರಣ ಔದಾರ್ಯ ಕೆಲವರಿಗೆ ಇದೆ. ಕಳಪೆಯ ಗ್ರಂಥವನ್ನು ಕಳಪೆಯೆಂದರೆ, ಇವರಿಗೆ ಕ್ರೋಧ. ಯಾರ ಮಾತನ್ನು ಯಾರು ಒಪ್ಪಬೇಕು? ಪರಿಷತ್ ಪತ್ರಿಕೆಯೇ ಆಗಲಿ ಈ ಪುಸ್ತಕಗಳು ಚೆನ್ನಾಗಿವೆ, ಇವು ಚೆನ್ನಾಗಿಲ್ಲ, ಎಂದು ಧೈರ್ಯವಾಗಿ ಹೇಳಬಹುದೇ? ಗ್ರಂಥಗಳು ಪತ್ರಿಕೆಗಳಿಗೆ ಅನೇಕ ವೇಳೆ ಬರುವುದು ವಿಮರ್ಶೆಗಲ್ಲ, ಸ್ತೋತ್ರಕ್ಕೆ. ನಿರ್ವಂಚನೆಯಾಗಿ ದೋಷವನ್ನು ತೋರಿಸಿಕೊಟ್ಟರೂ ಅದು ದ್ವೇಷಕ್ಕೆ ಕಾರಣವಾಗುತ್ತದೆ. ಆದ್ದರಿಂದ ಪತ್ರಿಕಾಕರ್ತರಿಗೆ ತಕ್ಕ ವಿಮರ್ಶಕರನ್ನು ಹಿಡಿದು ಒಪ್ಪಿಸುವುದೇ ದುರ್ಘಟವಾಗುತ್ತಿದೆ.

ಪ್ರತಿಯೊಂದು ಸಾಹಿತ್ಯದ ಬೆಳವಣಿಗೆಯ ಸ್ಥಿತಿಯಲ್ಲಿಯೂ ಇದು ಕಂಡುಬರುತ್ತದೆಂದು ಹೇಳಬಹುದು; ಅದರಲ್ಲಿಯೂ ಅಚ್ಚಿನ ಮತ್ತು

ಪ್ರಕಟನೆಯ ಸೌಕರ್ಯಗಳಿರುವಾಗ ಕೇಳಬೇಕೆ? ಆದರೆ ನಾವು ಬಡವರು; ಒಂದು ಪುಸ್ತಕವನ್ನು ಸ್ವಂತವಾಗಿ ಅಚ್ಚುಹಾಕಿಸಿಬಿಟ್ಟರೆ ಕೂಡಿಹಾಕಿಕೊಂಡಿದ್ದ ಹಣವೆಲ್ಲಾ ಕೈಬಿಟ್ಟುಹೋಗುತ್ತದೆ; ಸಾಲ ಹೇರಿಕೊಳ್ಳುತ್ತದೆ. ಕನ್ನಡ ಪುಸ್ತಕ ಬರೆದು, ಪ್ರಕಟಿಸಿ, ಯಾರೂ ಭಾಗ್ಯವಂತರಾಗಿಲ್ಲ. ಕೊಳ್ಳುವುದೂ ಹೀಗೆಯೇ. ಆದ್ದರಿಂದ ಪುಸ್ತಕಗಳು ಸಣ್ಣದಾಗಿ ಸೀರಾಗಿ ಬರುತ್ತವೆ. ಪುಸ್ತಕ ಭಂಡಾರಗಳಲ್ಲಿ ಕನ್ನಡ ವಿಭಾಗವನ್ನು ನೋಡಿದರೆ ಮನಸ್ಸು ಸೊರಗಿಹೋಗುತ್ತದೆ; 'ಮಾಧವ ಕರುಣಾ ವಿಲಾಸ', 'ನಾಡೋಜ ಪಂಪ', 'ಕಾನೂರು ಸುಬ್ಬಮ್ಮ', 'ಶ್ರೀಮನ್ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರವರ ಜೀವನ ಚರಿತ್ರೆ', 'ಸಂಭಾವನೆ' ಇಂಥ ವೈ ತುಂಬಿಕೊಂಡ ಪುಸ್ತಕಗಳನ್ನು ಕಂಡೇವೆ ಎನ್ನಿಸುತ್ತದೆ. ಆದರೆ ಇವು ಭಾಗ್ಯವಂತರ ಪುಸ್ತಕಗಳು. ತೆಳುವಾದವುಗಳಿಗೆ ಬೆಲೆ ಕೊಡುವುದೇ ನಮಗೆ ಕಷ್ಟ: ಇಂಗ್ಲಿಷ್ ಪುಸ್ತಕಗಳನ್ನು ನೋಡಿ! ಎಷ್ಟೋ ಜನ ರೈಲು ಪ್ರಯಾಣದಲ್ಲಿ ಐದಾರು ಆಣೆಗಳಿಗೆ ಸೇಬಿನ ಹಣ್ಣಿನಂತೆ ಬಣ್ಣ ಬಣ್ಣವಾದ ಒಂದು ಪುಸ್ತಕವನ್ನು ಕೊಂಡು ಓದಿ ಗಾಡಿಯಲ್ಲಿಯೇ ಬಿಸಾಟು ಹೋಗುತ್ತಾರೆ. ಕೊಳ್ಳುವುದೂ ಓದುವುದೂ ಬಿಸಾಡುವುದೂ ಅವರಿಗೆ ಅಷ್ಟು ಸುಲಭ: ಇದಕ್ಕೆ ಅವರ ಐಶ್ವರ್ಯ-ಅಭ್ಯಾಸ, ಓದುಗರ ಸಂಖ್ಯೆ ಇವು ಕಾರಣ. ಐಶ್ವರ್ಯವೊಂದೇ ಕಾರಣ ಎಂದರೂ ತಪ್ಪಾಗುವುದಿಲ್ಲ.

ನಾವು ಐಶ್ವರ್ಯವಂತರಾಗುವುದು ಹೇಗೆ ಎಂಬುದನ್ನು ನಾನು ಹೇಳಲರಿಯೆ: ಅದನ್ನು ನನಗಿಂತ ದೊಡ್ಡವರು ಯೋಚಿಸುತ್ತಿದ್ದಾರೆ, ಹೇಳುತ್ತಿದ್ದಾರೆ, ಮಾಡಿ ತೋರಿಸುತ್ತಿದ್ದಾರೆ. ಅದರ ಪ್ರಸ್ತಾಪ ಇಲ್ಲಿ ಬೇಕಿಲ್ಲ; ಇದು ಸಾಹಿತ್ಯಸಮ್ಮೇಳನ; ಆರ್ಥಿಕಸಮ್ಮೇಳನವಲ್ಲ, ರಾಜಕೀಯಸಮ್ಮೇಳನವಲ್ಲ.

ನಮ್ಮಲ್ಲಿ ವಿದ್ಯೆ ಐಶ್ವರ್ಯಗಳು ಇಷ್ಟು ಕಡಮೆಯಾಗಿರುವಾಗ ಜನ ಸಾಮಾನ್ಯಕ್ಕೆ ಉಪಯೋಗವಾಗುವಂಥ ಸರಳವಾದ ಸುಲಭವಾದ ಸಾಹಿತ್ಯ ಹುಟ್ಟಬೇಕೆಂಬುದು ಜನರ ಆಕಾಂಕ್ಷೆ. ಸರ್ ಪುಟ್ಟಣ್ಣಶೆಟ್ಟರಂಥ ಲಕ್ಷಾಧಿಕಾರಿಗಳು ಪುಮವಟ್ಟು ಕೊಟ್ಟರೆ ಸುಲಭವಾಗಿ, ಉಚಿತ

ವಾಗಿ, ಗ್ರಂಥಗಳು ಬರಬಹುದು. ಆದರೆ ಸರಳವೆಂದರೆ ಯಾರಿಗೆ, ಯಾವ ಮಟ್ಟದವರಿಗೆ, ಸರಳ? ಸಾಮಾನ್ಯ ಜನಕ್ಕೆ ಏನು ಬೇಕು? ಬರಿಯ ಕಥೆಯೆ? ನಮ್ಮ ತೋಟದಲ್ಲಿ ಬರಿಯ ಕೊತ್ತುಂಬರಿ ಸೊಪ್ಪನ್ನು ಬೆಳೆಯೋಣವೇ? ಕುಂಬಳಕಾಯಿ ತೆಂಗಿನಕಾಯಿ ಬೇಡವೆ? ಹಣ್ಣಿನ ಮರ ಬೇಡವೆ? ಸಾಮಾನ್ಯರಿಗೆ ಬೇಕಾದ ಸಾಹಿತ್ಯ ಸುಲಭವಾಗಿರಬೇಕೆಂಬ ತತ್ತ್ವವನ್ನು ನಾನೂ ಒಪ್ಪುತ್ತೇನೆ. ತಿಳಿಯುವವರನ್ನು ಪಾಂಡಿತ್ಯದಿಂದ ಬೆರಗುಗೊಳಿಸಿದರೆ, ಇಬ್ಬರಿಗೂ ಕಷ್ಟ. ಯಾರಿಗೂ ಲಾಭವಿಲ್ಲ. ಆದರೆ ಸಾಹಿತ್ಯವನ್ನು ಕೆಳಗೆ ಇಳಿಸುವುದಕ್ಕಿಂತ ಹೆಚ್ಚಾಗಿ ಸಾಮಾನ್ಯರನ್ನು ಮೇಲಕ್ಕೆ ಎತ್ತುವುದು ಲೇಖಕರ ಉದ್ದೇಶವಾಗಿರಬೇಕು; ಮಕ್ಕಳನ್ನು ಎಷ್ಟು ದಿನ ಹಸುಗೂಸಾದರೂ ಹಾಲಿನಬೋನಿಯಿಂದ ಬೆಳೆಸುವುದಕ್ಕಾದೀತೇ? ಈಗ ಸಾಮಾನ್ಯರ ಸಾಹಿತ್ಯ, ಶಿಶು ಸಾಹಿತ್ಯ, ಸ್ತ್ರೀ ಸಾಹಿತ್ಯಗಳು ಬರುತ್ತಿವೆ. ಆದರೆ ಎಲ್ಲರೂ ಎಲ್ಲ ವಿಧವಾದ ಸಾಹಿತ್ಯವನ್ನೂ ಬರೆಯಬಾರದೇ? ಮಾತು ಪಕ್ವವಾಗಿದ್ದರೆ ಅರ್ಥ ಸುಲಭವಾದೀತೇ? 'ಒಂದು ಕಾಡಿನಲ್ಲಿ ಒಬ್ಬ ಮುನಿಯಿದ್ದನಂತೆ...' ಎಂದು ನಾನು ಒಂದು ಸಾರಿ ನನ್ನ ಮಗುವಿಗೆ ಕಥೆ ಹೇಳಲು ಮೊದಲು ಮಾಡಿದೆ. ಅದು 'ಕಾಡು' ಎಂದರೆ ಏನು? ಎಂದು ಕೇಳಿಬಿಟ್ಟಿತು. ನನಗೆ ನಾಲಿಗೆ ಕಟ್ಟಿತು. ಅದಾದ ಒಂದು ತಿಂಗಳಮೇಲೆ ಮಾಯಾಬಜಾರ್ ಚಿತ್ರವನ್ನು ನೋಡುವುದಕ್ಕೆ ಹೋಗಿದ್ದಾಗ ಅಲ್ಲಿ ಕಾಡನ್ನು ತೋರಿಸಿ ಅದರ ಅರ್ಥವನ್ನು ಹೇಳಿದೆ. ಮಗುವನ್ನು ತೋರಿಸುವುದಕ್ಕಾಗಲಿ, ಅರ್ಥ ಹೇಳುವುದಕ್ಕಾಗಲಿ ಇನ್ನು ಎಗ್ಗಿಲ್ಲ. ಒಬ್ಬೊಬ್ಬರದು ಒಂದೊಂದು ಶಕ್ತಿ; ಗುಬ್ಬಚ್ಚಿ ಗರ್ಜಿಸಲಾರದು. ಸಿಂಹ ಚಿಲಿಪಿಲಿಗುಟ್ಟಲಾರದು. ಎಲ್ಲ ಶಕ್ತಿಗಳೂ ಒಂದೆಡೆ ಇರುವುದು ಅಪರೂಪ. ಸರಸ್ವತಿಯು ಒಂದೊಂದು ಸಾರಿ ಮನಸ್ಸು ಬಂದರೆ, ತನ್ನ ವರಪುತ್ರರೊಬ್ಬೊಬ್ಬರನ್ನು ಸರ್ವಸಾಮಗ್ರಿಗಳ ಅಂಗಡಿಯ ಮೇಲೆ ತಂದು ಕೂರಿಸುವುದುಂಟು. ಅಂಥ ಪ್ರಜ್ಞಾಶಾಲಿಗಳು ನಮ್ಮಲ್ಲಿ ಈಗ ಕೆಲವರು ಇದ್ದಾರೆ: ಇವರು ಭರತಖಂಡದ ಮಿಕ್ಕ ಕಡೆಯ ಸಾಹಿತಿಗಳಿಗೇನು ಕಡಮೆಯಿಲ್ಲ; ಇದು ಹೆಮ್ಮೆಯನ್ನೂ ಹಿರಿಯಾಶೆಯನ್ನು ತರತಕ್ಕ ಸಂಗತಿ; ದೊಡ್ಡವರಿರಲಿ, ಕಾಲೇಜಿನ

ವಿದ್ಯಾರ್ಥಿಗಳೂ, ಸ್ಕೂಲು ವಿದ್ಯಾರ್ಥಿಗಳೂ ಒಳ್ಳೊಳ್ಳೆಯ ಲೇಖನಗಳನ್ನು ಬರೆಯುತ್ತಿದ್ದಾರೆ. ಎಷ್ಟೋ ಹೈಸ್ಕೂಲು ಕಾಲೇಜುಗಳು ತಮ್ಮ ತಮ್ಮ ಅಚ್ಚಾದ ಅಥವಾ ಬರಹದ ಪತ್ರಿಕೆಗಳನ್ನು ನಡಸುತ್ತವೆ. ಇವುಗಳನ್ನು ನೋಡಿದರೆ ಸಂತೋಷವಾಗುತ್ತದೆ. ಇಂಥ ಪ್ರಯತ್ನಗಳಿಗೆ ಉಪಾಧ್ಯಾಯರೂ ಅಧಿಕಾರಿಗಳೂ ತಾಯಿತಂದೆಗಳೂ ಮಹಾಜನರೂ ಪ್ರೋತ್ಸಾಹ ಕೊಡಬೇಕು.

## ಪತ್ರಿಕೆಗಳು ಮತ್ತು ಕನ್ನಡ

ಕನ್ನಡ ಪುಸ್ತಕಗಳ ಸ್ಥಿತಿಯೇ ಪತ್ರಿಕೆಗಳಿಗೂ. ಪತ್ರಿಕಾಸಂಪಾದಕ ಪ್ರಕಾಶಕರಾಗಿ ನಮ್ಮಲ್ಲಿ ಎಷ್ಟು ಜನ ಐಶ್ವರ್ಯ ಗಳಿಸಿದ್ದಾರೆಯೋ ನಾನರಿಯೆ; ಅವರಿಗೆ ಸಾಲವಾಗಿರದಿದ್ದರೆ, ಅದು ಪ್ರಕಟನೆಗಳು ತರುವ ಹಣದಿಂದ; ಚಂದಾದಾರರು ಕೊಡುವ ಹಣದಿಂದಲ್ಲ. ಒಂದೆರಡು ಕನ್ನಡ ಪತ್ರಿಕೆಗಳಿಗೆ ಎಂಟು ಹತ್ತು ಸಾವಿರದ ವರೆಗೂ ಚಂದಾದಾರರಿದ್ದಾರೆಂದು ಕೇಳಿದ್ದೇನೆ. ಅದರ ಸಂಪಾದಕರು ಲೇಖಕರು ಪ್ರಕಾಶಕರು ಅಭಿನಂದ್ಯರು; ಅವರ ಸಾಹಸ ಮೆಚ್ಚತಕ್ಕದ್ದು; ಅವರು ಕನ್ನಡಿಗರ ಹಸಿವನ್ನೂ ರುಚಿಯನ್ನೂ ಹಿಡಿದು ಅವನ್ನು ತೃಪ್ತಿಗೊಳಿಸುತ್ತಿದ್ದಾರೆ. ಈ ಪಾಠಕರೂ ಪ್ರಕಾಶಕರೂ ಪರಸ್ಪರ ಭಾವನೆಯಿಂದ ಭಾಷೆಯ, ಆ ಮೂಲಕ ದೇಶದ, ಪರಮಶ್ರೇಯಸ್ಸನ್ನು ಸಾಧಿಸಬೇಕಾಗಿದೆ. ಕನ್ನಡದಲ್ಲಿ ಪತ್ರಿಕೆಗಳ ಕೆಲಸ, ಅದರಲ್ಲಿಯೂ ದಿನ ಪತ್ರಿಕೆಗಳ ಕೆಲಸ ಸುಲಭವಲ್ಲ; ತಂತಿಗಳು ಇಂಗ್ಲಿಷಿನಲ್ಲಿ ಬರುತ್ತವೆ; ಅವುಗಳನ್ನು ಹಾಗೇ ಅಚ್ಚಿಗೆ ಕಳುಹಿಸುವ ಹಾಗಿಲ್ಲ; ಅವುಗಳನ್ನು ಸಂಗ್ರಹಿಸಬೇಕು; ಕನ್ನಡಿಸಬೇಕು; ಮಾತುಗಳು ಸಿಕ್ಕುವುದಿಲ್ಲ; ಸರಸ್ವತಿಯ ಆತುರಾವೇಶವನ್ನು ನಂಬಿ ಮಾತುಗಳನ್ನು ಹಿಡಿದು ತಂದು ತುಂಬಬೇಕು. ಇದಿಷ್ಟೂ ಬಿಸಿ ಬಿಸಿಯಾಗಿದ್ದು, ಅಂಚೆಯ ಹೊತ್ತಿಗೆ ಮೂರುಮೊಳ ನೆಯ್ದು, ಅಚ್ಚಿಗೆ ಬಂದು ಹೊರಟು ಹೋಗಲೇಬೇಕು. ಬೆಳಗೆದ್ದರೆ ಮತ್ತೆ ಇದೇ ಕಥೆ, ಇದೇ ಆತುರ. ಈ ಆತುರದಲ್ಲಿ ಆಗುವ ಕೆಲಸ ಅದ್ಭುತವಾದದ್ದು; ಪರೀಕ್ಷೆಯಲ್ಲಿ ವಿದ್ಯಾರ್ಥಿಯು ನಾಲ್ಕೈದು ದಿನಗಳಲ್ಲಿ ಎಷ್ಟು ಪುಟಗಳನ್ನು ಬರೆದು ಹಾಕಿರುತ್ತಾನೆಂಬುದನ್ನು ನೆನಸಿಕೊಂಡರೆ ಅವನ ಸಾಮ

ಧೈರ್ಯಕ್ಕೆ ಅವನಿಗೇ ಆಶ್ಚರ್ಯವಾಗುತ್ತದೆ; ಪ್ರಾಯಶಃ ಒಂದು ವರ್ಷದಲ್ಲೆಲ್ಲಾ ಉಪಾಧ್ಯಾಯರ ಹಿಂಸೆಯಿಂದಲೂ ಅಷ್ಟು ಬರೆದಿರಲಾರ. ಹೀಗೆ ನಮ್ಮ ಇಂದಿನ ಭಾಷೆಯು, ಪತ್ರಿಕೆಗಳ ಮೂಲಕ ಅಂಟುರೋಗ ಕ್ರಿಮಿಯಂತೆ ನಿಲುವಿಲ್ಲದೆ ನುಗ್ಗುತ್ತಿದೆ; ಪುಸ್ತಕಗಳನ್ನು ಓದುವವರು ನೂರಾರು ಜನರೂ ಇಲ್ಲದಿರುವಾಗ ಪತ್ರಿಕೆಗಳನ್ನು ಸಾವಿರಾರು ಜನ ಓದುವರು. ವಿದ್ಯೆ ಇನ್ನೂ ಹರಡಿದರೆ ಲಕ್ಷಾಂತರ ಜನ ಓದುವರು! ಆದ್ದರಿಂದ ಪತ್ರಿಕೆಗಳ ಮೇಲೆ ಬಿದ್ದಿರುವ ಭಾಷಾರಕ್ಷಣ ಕಾರ್ಯದ ಜವಾಬುದಾರಿಯು ಬಹು ದೊಡ್ಡದು. ಒಂದು ಜನಪ್ರಿಯವಾದ ಪತ್ರಿಕೆ ಒಂದು ಹೊಸ ಮಾತನ್ನು ಕಲ್ಪಿಸಿ ಅದು ಒಪ್ಪಿಗೆ ಪಡೆದರೆ, ಒಂದು ಹಗಲಿನಲ್ಲಿ ಅದು ಸಾಮ್ಯವಾಗಿ ಸಾಹಿತ್ಯ ಭಂಡಾರವನ್ನು ಸೇರಿಬಿಡುತ್ತದೆ.

ಹೊಸ ಮಾತುಗಳನ್ನು ಸೃಷ್ಟಿಸುವಾಗ ಅನುಸರಿಸಬೇಕಾದ ನಿಯಮಗಳೇನು? ಅವು ಹೇಗಿರಬೇಕು? ಎಂಬುದನ್ನು ಚರ್ಚಿಸುವುದಕ್ಕೆ ಇಲ್ಲಿ ಅವಕಾಶವಿಲ್ಲ; ಅವುಗಳನ್ನು ಸ್ಥೂಲವಾಗಿ ಮಾತ್ರ ಹೇಳಬಹುದು; ಅವು ಎಲ್ಲರಿಗೂ ಗೊತ್ತು ಇವೆ. (ಈ ವಿಷಯದ ಮೇಲೆ ಈಚೆಗೆ ನನ್ನ ಪ್ರಾಜ್ಞ ಮಿತ್ರರಾದ ಶ್ರೀ ಡಿ. ವಿ. ಗುಂಡಪ್ಪನವರು ೧೯೨೧ ರ ಅಕ್ಟೋಬರ್ ತಿಂಗಳ 'ಕರ್ಣಾಟಕ [illegible]' ಪತ್ರಿಕೆಯಲ್ಲಿ ಬರೆದಿರುವ ಲೇಖನವನ್ನು ನೋಡಬಹುದು.) ಆದರೆ ಒಂದು ನಿಯಮಾನುಸಾರಕ್ಕೆಯಿಂದ ಒಂದು ದೊಡ್ಡ ಕೆಲಸ ಚೆನ್ನಾಗಿ ನಡೆಯಿತು? 'ಉತ್ತಮವಾಗಿ ಬರೆಯುವುದು ಹೇಗೆ?' ಎಂದು ಕೇಳಿದರೆ. 'ಬರೆಯುತ್ತ ಹೋಗುವುದರಿಂದ!' ಎಂಬುದು ಉತ್ತರ; ಇಲ್ಲಿಯೂ ಭಾಷೆಗಳ ಹೋರಾಟದ ಪ್ರಶ್ನೆ ಬರುತ್ತದೆ. ಪ್ರಾಕೃತವೇ, ಸಂಸ್ಕೃತವೇ, ಇಂಗ್ಲಿಷೇ? ಪ್ರಾಕೃತವಾದರೆ ಮಿತ್ರಮಾತ್ರವಾಯಿತು, ಸಂಸ್ಕೃತವಾದರೆ ಶ್ರೋತ್ರೀಯವಾಯಿತು. ಪ್ರಾಯಶಃ ಭಾರತೀಯವಾಯಿತು. ಇಂಗ್ಲಿಷಾದರೆ ಅಂತರ್ರಾಷ್ಟ್ರೀಯವಾಯಿತು. ಎಲ್ಲೆಲ್ಲಿ ಯಾವುದು ಅನುಕೂಲವೋ ಅಲ್ಲಲ್ಲಿ ಅದನ್ನು ಅನುಸರಿಸೋಣ; ಇಂಥ ಯಾವ ಭೇದವೆಲ್ಲ ಒಪ್ಪಿದರೆ, ಒಮ್ಮತವಾಗಿ ಉಪಯೋಗಿಸುವುದಾದರೆ, ಸಂಸ್ಕೃತ ಸಹಾಯವಾದೀತು; ಇಲ್ಲವಿದ್ದರೆ? ಇಂಗ್ಲಿಷ್ ಆಗಲಿ. ಇದು ಒಗ್ಗುವುದಿಲ್ಲ ಎನ್ನು

ತ್ತೀರೇನೋ! ಔಷಧಿ ಎಷ್ಟು ದಕ್ಕುತ್ತದೆಯೋ ಅಷ್ಟು ದಕ್ಕಲಿ, ಮಿಕ್ಕದ್ದು ಹೋಗಲಿ! ಹುಚ್ಚು ಮಳೆ ಬಂದು ಹಳ್ಳ ಕೊಳ್ಳ ತುಂಬಿ ಹರಿದರೆ, ನಿಲ್ಲುವಷ್ಟು ನಿಂತು, ನೀರು ಒದಗುತ್ತದೆಯೋ, ಹಾಳುಭಾವಿಗೆ ಚಂಬಿನಲ್ಲಿ ನೀರು ತಂದು ಹುಯ್ದರೆ ಒದಗುತ್ತದೆಯೋ? ಇಂಗ್ಲಿಷ್ ಭಾಷೆಯನ್ನು ನೋಡಿದರೆ ನಮ್ಮ ಭಾಷೆಯ ವಿಚಾರವಾಗಿ ಅನೇಕರಿಗೆ ಇರುವ ಮಡಿ ಭಾವನೆಯು ಹೋಗಿಬಿಡುತ್ತದೆ; ಯಾವುದನ್ನು ತೆಗೆದು ಕೊಳ್ಳೋಣ, ಯಾವುದನ್ನು ಬಿಡೋಣ ಎಂಬ ಸಂದೇಹ ನಿವಾರಣೆ ಯಾಗುತ್ತದೆ. ಇಂಗ್ಲಿಷಿನವರು ಯಾವ ಯಾವ ದೇಶಕ್ಕೆ ಹೋದರೆ, ಅಲ್ಲಲ್ಲಿ ಮಾತುಗಳನ್ನು ತೆಗೆದುಕೊಂಡುಬಿಟ್ಟಿದ್ದಾರೆ. ಒಂದೇ ಒಂದು ಇಂಗ್ಲಿಷ್ ವಾಕ್ಯದಲ್ಲಿ ಇಪ್ಪತ್ತೈದು ಭಾಷೆಗಳಿಂದ ಬಂದ ಮಾತುಗಳಿರ ಬಹುದು (ಇಂಥ ವಾಕ್ಯದ ಒಂದು ಉದಾಹರಣೆಯನ್ನು ೧೬-೯-೧೯೩೪ ರ ಟೈಮ್ಸ್ ಆಫ್ ಇಂಡಿಯಾ ವಾರಪತ್ರಿಕೆಯು ಕೊಟ್ಟಿತ್ತು). ಸಂಸ್ಕೃತ ದಲ್ಲಿಯೂ ಅನ್ಯಭಾಷಾ ಶಬ್ದಗಳು ಇರದೆ ಇಲ್ಲ. ಹೊಸಬರಿಗೆ, ಸಂಸ್ಕೃತವೂ ಹೊಸದೇ, ಇಂಗ್ಲಿಷೂ ಹೊಸದೇ; ಅದೂ ಕಷ್ಟವೇ, ಇದೂ ಕಷ್ಟವೇ. 'ಕಶೇರುಕ' ಎಂಬುದು ಎಷ್ಟು ಕಷ್ಟವೋ 'ವರ್ಟಿಬ್ರೇಟ್' ಎಂಬುದೂ ಅಷ್ಟೇ ಕಷ್ಟ. ಇಂಗ್ಲಿಷ್ ಜನರಲ್ಲಿಯೂ, ಎಲ್ಲ ಜನಕ್ಕೂ ಇಂಥ ಶಾಸ್ತ್ರೀಯ ಮಾತುಗಳೇನು ಉಚ್ಚರಿಸಲು ಸುಲಭ ವಲ್ಲ. ಪರಿಚಯವಾಗುತ್ತ ಆಗುತ್ತ ಅವು ಸುಲಭವಾಗುತ್ತವೆ—ಈಗ ವಿದ್ಯುಚ್ಛಕ್ತಿಯ ದೀಪಗಳು ಬಂದಮೇಲೆ ಅದರ ಸಂಬಂಧವಾದ ವಸ್ತು ಗಳ ಹೆಸರುಗಳಂತೆ; ಅವು ಸುಲಭವಾಗಿದ್ದರೆ, ಹೆಚ್ಚು ರೂಢವಾದರೆ, ಹಳೆಯದೂ ಹೋಗುತ್ತದೆ-ಬುಕ್ಕು, ಸ್ಲೇಟು, ಕೋರ್ಟು ಎಂಬ ಹಾಗೆ. ರೂಪ ಶುದ್ಧಿಯನ್ನು ಯೋಚನೆಮಾಡುತ್ತ ಕುಳಿತುಕೊಳ್ಳುವವನು ಕಾವ್ಯವನ್ನು ಹೇಗೆ ಬರೆಯಲಾರನೋ, ಭಾಷಾಶುದ್ಧಿಯನ್ನು ಯೋಚನೆ ಮಾಡುತ್ತ ಕುಳಿತುಕೊಳ್ಳುವವನೂ ಹಾಗೇ ಪತ್ರಿಕೆಯನ್ನು ನಡಸಲಾ ರನು. ಈಗ್ಗೆ ಸುಮಾರು ನಲವತ್ತು ವರ್ಷಗಳಿಂದ ಕನ್ನಡ ಬೆಳೆದು ದಾರಿಯಾಗಿರುವುದು ನಿಘಂಟುಗಳನ್ನೂ ಸೂತ್ರಗಳನ್ನೂ ಅನುಸರಿಸಿದವ ರಿಂದಲ್ಲ; ಮೀನಮೇಷ ನೋಡುತ್ತ ತತ್ವಾನ್ವೇಷದಲ್ಲಿ ಮಗ್ನರಾಗಿರುವ

ವರಿಂದಲ್ಲ; ಮುನ್ನುಗ್ಗಿ ಕಲ್ಲು ಮುಳ್ಳು ತುಳಿದು ಕಾಡು ಕಡಿದು ಕಾರ್ಯಮಾಡಿದವರಿಂದ.

ಈ ಸಂದರ್ಭದಲ್ಲಿ ಪತ್ರಿಕಾಕರ್ತರಿಗೆ ನನ್ನದೊಂದು ಸಣ್ಣ ವಿಜ್ಞಾಪನೆಯಿದೆ: ಈಗ ಪತ್ರಿಕೆಗಳಲ್ಲಿ ಅಂದಂದಿನ ವರ್ತಮಾನಗಳು ಪ್ರಪಂಚದ ಮೂಲೆ ಮೂಲೆಯಿಂದೆಲ್ಲಾ ಬರುವಂತಾಯಿತು. ಯುದ್ಧದ ಅಥವಾ ಇತರ ಮುಖ್ಯವಾದ ವಿಷಯವನ್ನು ತಿಳಿದುಕೊಳ್ಳಬೇಕೆಂಬ ಹಸಿವು ಬಾಯಾರಿಕೆಗಳು ಕನ್ನಡ ಪತ್ರಿಕೆಗಳನ್ನು ಓದುವುದರಿಂದಲೇ ಅಣಗುತ್ತಿವೆ: ಆದರೆ ಇನ್ನೂ 'ಹಿಂದೂ' ಮುಂತಾದ ಇಂಗ್ಲಿಷ್ ಪತ್ರಿಕೆಯನ್ನು ಅಪೇಕ್ಷಿಸದಂತೆ ಆಗಿಲ್ಲ: ಅವುಗಳ ಅಗ್ರಲೇಖನ, ಪ್ರಕಟನೆ, ಪ್ರಾಂತ ವರ್ತಮಾನ, ಹಣಕಾಸಿನ ಸ್ಥಿತಿ ಇವುಗಳ ಮಾತಿರಲಿ: ಅವು ಎಲ್ಲರಿಗೂ ಅಷ್ಟು ಮುಖ್ಯವಲ್ಲ. ಅವುಗಳಲ್ಲಿ, ಸರ್ ಎಂ. ವಿಶ್ವೇಶ್ವರಯ್ಯ, ಸರ್ ಸಿ. ವಿ. ರಾಮನ್, ಸರ್ ಎಸ್. ರಾಧಾಕೃಷ್ಣನ್, ಸರ್ ತೇಜ ಬಹದ್ದೂರ್ ಸಪ್ರು, ರೈಟ್ ಆನರಬಲ್ ಸರ್ ಅಕ್ಬರ್ ಹೈದರಿ, ರೈಟ್ ಆನರಬಲ್ ಶ್ರೀನಿವಾಸಶಾಸ್ತ್ರಿಗಳು ಮುಂತಾದ ಮಹೋದಯರು ತಮ್ಮ ಪಕ್ವವಾದ ಪಾಂಡಿತ್ಯ, ವಿಶಾಲವಾದ ಅನುಭವ, ತೀಕ್ಷ್ಣವಾದ ಪ್ರತಿಭೆ, ಇವುಗಳ ಕುಲುಮೆಯಲ್ಲಿ ಇಂದಿನ ಸಮಸ್ಯೆಗಳನ್ನು ಹಾಕಿ, ಪ್ರಯೋಗ ನಡೆಸಿ, ಬಂದ ಫಲವನ್ನು ಅಲ್ಲಲ್ಲಿ ಉಪನ್ಯಾಸಗಳ ಮೂಲಕ ತಿಳಿಸುತ್ತಾರೆ; ಅಕ್ಟೋಬರ್ ತಿಂಗಳಿನ ಸುಮಾರಿನಲ್ಲಿ ಎಲ್ಲೆಲ್ಲೂ ವಿಶ್ವವಿದ್ಯಾನಿಲಯಗಳ ಪ್ರಶಸ್ತಿ ಪ್ರದಾನೋತ್ಸವದಲ್ಲಿ ಪ್ರಸಿದ್ಧ ವಿದ್ವಾಂಸರಿಂದ ಉಪದೇಶ ಭಾಷಣಗಳು ನಡೆಯುತ್ತವೆ. ಇವುಗಳಾವವುಗಳ ಸಾರಾಂಶವೂ ಕನ್ನಡ ಪತ್ರಿಕೆಗಳಲ್ಲಿ ಬರುವುದಿಲ್ಲ; ಇವುಗಳನ್ನು ಕಂಡು, ಓದಿ, ತಿಳಿದು, ಸಂಗ್ರಹಿಸಿ ಬರೆಯಬಲ್ಲ ಜನರು ಸಿಕ್ಕುವುದು ಕಷ್ಟ; ಓದಬಲ್ಲ ಜನರೂ ಹೆಚ್ಚಾಗಿರುವುದಿಲ್ಲ; ಆದರೆ ಇದು ಮಾಡಬೇಕಾದ ಕೆಲಸ; ದೇಶದಲ್ಲಿ ತಿಳಿವಳಿಕೆಯ ಮಟ್ಟವು ಏಳುವುದು ಇಂಥ ವ್ಯಕ್ತಿಗಳ ವಾಣಿಯನ್ನು ಕೇಳಿ ಮನನ ಮಾಡುವುದರಿಂದ.

## ಶಾಸ್ತ್ರ ಗ್ರಂಥಗಳು ಮತ್ತು ಕನ್ನಡ

ಆಧುನಿಕ ಸಾಹಿತ್ಯದಲ್ಲಿ ಶಾಸ್ತ್ರ ಗ್ರಂಥಗಳು ಬಹಳ ಕಡಮೆ

ಎಂಬುದು ಒಂದು ಲೋಪವಾಗಿ ಎಣಿಸಲ್ಪಟ್ಟಿದೆ. ಇದು ಲೋಪ, ನಿಜ; ಆದರೆ ಬರೆಯುವವರಿಲ್ಲವೆಂದಲ್ಲ; ಈಗ ಬೇಕಾದಷ್ಟು ಜನರಿದ್ದಾರೆ. ಆದರೆ ಬರೆದು ಏನು ಮಾಡಬೇಕು? ಅಚ್ಚು ಮಾಡಿಸುವುದಕ್ಕೆ ದುಡ್ಡೆಲ್ಲಿ ಬರಬೇಕು? ಆ ಪುಸ್ತಕಗಳನ್ನು ಹೇಗೆ ಉಪಯೋಗಿಸುವುದು? ಇದು ಸಮಸ್ಯೆ. ಮೈಸೂರು ದೇಶದ ಹೈಸ್ಕೂಲು ತರಗತಿಗಳಲ್ಲಿ ಕನ್ನಡದ ಮೂಲಕ ಬೋಧನೆಯಾಗಬೇಕೆಂದು ನಿರ್ಧರವಾದಾಗ, ಆರು ತಿಂಗಳೊಳಗೆ ಎಲ್ಲ ಶಾಸ್ತ್ರಗಳ ವಿಚಾರವಾಗಿಯೂ ಪಠ್ಯಗ್ರಂಥಗಳು ಆದುವು; ಅಚ್ಚಾದುವು; ವಿದ್ಯಾರ್ಥಿಗಳ ಕೈಗೆ ಬಂದುವು. ನಾಳೆ ಕಾಲೇಜಿಗೂ ಕನ್ನಡವೇ ಬೋಧಕ ಭಾಷೆಯಾಗಬೇಕೆಂದು ನಿರ್ಧಾರವಾಗಲಿ, ಆರು ತಿಂಗಳಲ್ಲದಿದ್ದರೆ ವರ್ಷದಲ್ಲಿ ಬೇಕಾದ ಪಠ್ಯಪುಸ್ತಕಗಳೆಲ್ಲ ಬಂದಾವು. ಕನ್ನಡಿಗರಲ್ಲದವರು, 'ಪಠ್ಯಪುಸ್ತಕಗಳೆಲ್ಲಿವೆ?' ಎಂದು ಆಕ್ಷೇಪಣೆ ಹೂಡುವರೇ ಹೊರತು, ಕನ್ನಡಿಗರು ಎಂದಿಗೂ ಹೂಡುವಂತಿಲ್ಲ; ಕೆಲವು ದಿನ ಇಂಗ್ಲಿಷ್ ಗ್ರಂಥಗಳು ಸಹಾಯಕ್ಕಿರಲಿ; ಕನ್ನಡದ ಅಲಂಕಾರ ಛಂದಸ್ಸುಗಳನ್ನು ಪಾಠ ಹೇಳುವಾಗ ಸಂಸ್ಕೃತ ಗ್ರಂಥಗಳನ್ನು ನಾವು ಉಪಯೋಗಿಸಿಕೊಳ್ಳುವುದಿಲ್ಲವೆ? ಪುಸ್ತಕಗಳು ದೇಶಭಾಷೆಯಲ್ಲಿ ಆಗುವುದು ಅಸಾಧ್ಯವಾದುದರಿಂದ, ಅದು ಬೋಧನ ಭಾಷೆಯಾಗುವುದು ಅಸಾಧ್ಯ ಎಂಬ ತರ್ಕದ ಪೊಳ್ಳುತನವನ್ನು, ಉಸ್ಮಾನಿಯಾ ವಿಶ್ವವಿದ್ಯಾನಿಲಯವು ಎಲ್ಲರಿಗೂ ಬೆಳ್ಳಂಬೆಳಕಾಗುವಂತೆ ತೋರಿಸಿಬಿಟ್ಟಿದೆ. ಕನ್ನಡವು ಸಾರ್ವತ್ರಿಕವಾದರೆ ಜನರಿಗೆ ಕನ್ನಡದಲ್ಲಿ ಯೋಚಿಸುವ ಶಕ್ತಿ ತಾನೇ ಬರುತ್ತದೆ. ಕನ್ನಡದಲ್ಲಿ ಓದಬೇಕೆಂಬ ಬಯಕೆ ಬರುತ್ತದೆ. ಓದುವವರು ಹೆಚ್ಚಾಗುತ್ತಾರೆ; ಓದು ರುಚಿಸುತ್ತದೆ.

## ಸಂಶೋಧನಕಾರ್ಯ ಮತ್ತು ಕನ್ನಡ

ಆಧುನಿಕ ಸಾಹಿತ್ಯದಲ್ಲಿ ಸಂಶೋಧನೆಯ ಕಾರ್ಯವಿಲ್ಲ, ಅಥವಾ ಸಾಲದು, ಎಂಬುದು ಇನ್ನೊಂದು ಲೋಪವಾಗಿ ಎಣಿಸಲ್ಪಟ್ಟಿದೆ. ಸಂಶೋಧನಕಾರ್ಯದಲ್ಲಿ ಒಂದು ಹೊಸ ಸಂಗತಿ ತಿಳಿಯಬರಬೇಕು; ಅದು ಬೆಲೆಯುಳ್ಳದ್ದಾಗಿರಬೇಕು; ಸಾಮಾನ್ಯವಾದ ಬರವಣಿಗೆ ಮಣ್ಣನ್ನು ಅಗೆಯುವುದು, ಕಲ್ಲು ಬಂಡೆ ಒಡೆಯುವುದು, ಅವುಗಳಿಂದ

ಗೋಡೆ ಹಾಕಿ ಕಟ್ಟಡ ಕಟ್ಟುವುದು–ಇವುಗಳಂತೆ ಇರುತ್ತದೆ. ಸಂಶೋಧನೆಯು ಭೂಮಿ ಅಗೆದು ಚಿನ್ನ ತೆಗೆಯುವ ಹಾಗೆ; ಅದಕ್ಕೆ ಬುದ್ಧಿ ಬೇಕು, ಆಯುಧ ಬೇಕು, ಯಂತ್ರ ಸಾಮಗ್ರಿ ಬೇಕು; ಹಲವು ಕೆಲಸಗಾರರ, ಶಾಸ್ತ್ರಜ್ಞರ ಸಹಕಾರ ಬೇಕು. ಅಗೆಯುತ್ತ ಅಗೆಯುತ್ತ ಶ್ರಮವು ಹೆಚ್ಚಾಗುತ್ತದೆ, ಹೊನ್ನು ಕಡಮೆಯಾಗುತ್ತದೆ. ನಮ್ಮಲ್ಲಿ ಇವೆಲ್ಲಕ್ಕೂ ಅಭಾವ. ಪಾಶ್ಚಾತ್ಯರು. ನಮ್ಮ ಚಿನ್ನದ ಗಣಿಗಳಲ್ಲಿ ಕೆಲಸ ಮಾಡಿರುವಂತೆ ಈ ಕ್ಷೇತ್ರದಲ್ಲಿಯೂ ಕೆಲಸಮಾಡಿದ್ದಾರೆ. ಅವರೊಡನೆ ಈಗ ಸ್ಪರ್ಧೆ ನಡಸಿ ಸ್ಥಾನವನ್ನುಳಿಸಿಕೊಳ್ಳುವುದು ಕಷ್ಟ. ವೈಜ್ಞಾನಿಕ ಸಂಶೋಧನ ಕಾರ್ಯದಲ್ಲಿ ಪ್ರಪಂಚವೇ ಒಂದು. ಪುಸ್ತಕಾಲಯಗಳು ಒಬ್ಬರಿಗೆ ಒಂದು ಮತ್ತೊಬ್ಬರಿಗೆ ಇನ್ನೊಂದು ಇಲ್ಲ. ಅವರಿಗೆ ದೊರೆಯುವ ಅಕಾಡಮಿ ಪ್ರಯೋಗಶಾಲೆಗಳು ಕೂಡ ನಮಗೆ ದೊರೆಯುವುದಿಲ್ಲ. ಕ್ಷೇತ್ರವೋ ವಿಸ್ತಾರವಾದದ್ದು: ನಾನಾ ದ್ರಾವಿಡ ಸಂಸ್ಕೃತ ಪ್ರಾಕೃತ ಭಾಷೆಗಳು, ಪಾಶ್ಚಾತ್ಯ ಭಾಷೆಗಳು, ಪ್ರಾಚೀನ ಶಾಸ್ತ್ರಗಳು, ಸಾಹಿತ್ಯ, ಚರಿತ್ರೆ ಇವುಗಳನ್ನು ಎಷ್ಟು ಓದಿದರೂ ಇದೆ: ಅವುಗಳ ಮೇಲೆ ಪತ್ರಿಕಾ ಲೇಖನಗಳಿಗೂ ಗ್ರಂಥಗಳಿಗೂ ಕೊನೆ ಮೊದಲಿಲ್ಲ. ಇವುಗಳಲ್ಲಿ ಒಂದಕ್ಕೊಂದಕ್ಕೆ ಸಂಬಂಧವಿರುತ್ತದೆ: ಯಾವುದೋ ಒಂದು ಸಣ್ಣ ಅಂಶವನ್ನು ಹಿಡಿದುಕೊಂಡು ಹೋದರೂ ಅದು ಎಲ್ಲಿಗೋ ತೆಗೆದುಕೊಂಡು ಹೋಗುತ್ತದೆ: ಸಂದೇಹವು ಸಿದ್ಧಾಂತವಾಗುವುದೇ ಕಷ್ಟವಾಗುತ್ತದೆ. ಅದಕ್ಕೇ ಅಭಿರುಚಿ ಇರುವವರು ಕೆಲವರು: ಅವರಿಗೆ ತಕ್ಕ ಅನುಕೂಲಗಳನ್ನು ಕಲ್ಪಿಸಿಕೊಡಬೇಕು: ಹಾಗಾದರೆ ಈ ಕೆಲಸ ಚೆನ್ನಾಗಿ ನಡೆದೀತು. ಈ ಕ್ಷೇತ್ರದಲ್ಲಿ ನಮಗೆ ಸಂಬಂಧಪಡುವಂತೆ ಏನು ನಡೆಯುತ್ತಿದೆ ಎಂಬುದನ್ನು ಸೂಕ್ಷ್ಮವಾಗಿಯಾದರೂ ಪರಿಚಯ ಮಾಡಿಕೊಡಬೇಕೆಂದು 'ಪ್ರಾಚ್ಯಲೇಖನಾವಳಿ' ಎಂಬ ಭಾಗವನ್ನು ಪರಿಷತ್ ಪತ್ರಿಕೆಯಲ್ಲಿಯೂ ಪ್ರಬುದ್ಧ ಕರ್ಣಾಟಕದಲ್ಲಿಯೂ ಇಟ್ಟುಕೊಂಡಿರುವುದಾಗಿದೆ. ಆದರೆ ನಮಗೆ ಇರುವ ಉಪಪತ್ತಿ, ಸಹಕಾರ, ಸೌಕರ್ಯ ಇವಕ್ಕೆ ಏನೇನೂ ಸಾಲದು. ಇವೊತ್ತು ಪಂಪನ ಅಥವಾ ಬಸವಣ್ಣನವರ ಮೇಲೆ ಏನೇನು ಲೇಖನಗಳು ಬಂದಿವೆ ಎಂದು ಒಂದು

ಕಡೆ ನೋಡಬೇಕೆಂದರೆ ಎಲ್ಲಿಯೂ ಆ ವಿಷಯ ಸಮಗ್ರವಾಗಿ ಸಿಕ್ಕುವು ದಿಲ್ಲ. ಹೊಸ ಸಾಮಗ್ರಿಯಂತೂ ದೊರಕುವುದೇ ಇಲ್ಲ. ಪರಿಷತ್ಪತ್ರಿಕೆ ಯಲ್ಲಿ ಈಗ ಇಪ್ಪತ್ತೈದು ವರ್ಷಗಳಿಂದ ಬಂದ ಲೇಖನಗಳಿಗೆ ಅಕಾರಾದಿ ಮಾಡಿಕೊಡಬೇಕೆಂದು ಪರಿಷತ್ತು ಯೋಚಿಸಿತು ; ಅದೂ ನಡೆದಿಲ್ಲ ; ಇಂಗ್ಲಿಷಿನಲ್ಲಿ ರಾಯಲ್ ಏಷಿಯಾಟಿಕ್ ಸೊಸೈಟಿಯ ಪತ್ರಿಕೆ ಇಂಡಿ ಯನ್ ಆಂಟಿಕ್ವೆರಿಯಂಥ ಪತ್ರಿಕೆಗಳಿಗೆ ಈ ಸೌಕರ್ಯವಿದೆ.

### ಸಾಹಿತ್ಯಪರಿಷತ್ತು ಮತ್ತು ಕನ್ನಡ

ಪರಿಷತ್ತು ಅದು ಮಾಡಲಿಲ್ಲ, ಇದು ಮಾಡಲಿಲ್ಲ ; ಅದು ಮಾಡ ಬೇಕಾಗಿತ್ತು, ಇದು ಮಾಡಬೇಕಾಗಿತ್ತು ಎಂದು ಸೂಚಿಸುವವರು ಅದು ಹುಟ್ಟಿದಂದಿನಿಂದ ಇದ್ದಾರೆ. ಅದರಲ್ಲಿ ಕೆಲಸಮಾಡುವವರೆಲ್ಲರೂ ಅಕ್ಷರಶಃ ತನುಮನಧನಗಳನ್ನು ಅದಕ್ಕೆ ಸಮೆಸಿ ಕೆಲಸಮಾಡಿಯೂ ಇದ್ದಾರೆ. ಅದರಲ್ಲೇನು ಕಡಮೆಯಿಲ್ಲ. ಆದರೆ ಪರಿಷತ್ತೆಂದರೆ ಯಾರು? ಅವರ ನಾಲ್ಕಾರು ಜನ ಅಧಿಕಾರಿ ವರ್ಗದವರೇ ? ಪರಿಷತ್ತು ಒಂದೂ ವರೆ ಕೋಟಿ ಪ್ರಜೆಗಳ ಪ್ರತಿನಿಧಿ ಎಂದರೆ. ಈ ನಾಲ್ಕಾರು ಜನ ಸಾಕೇ? ಅವರು ಗೌರವಾರ್ಥವಾಗಿ ಕೆಲಸಮಾಡುವವರು ; ಎಷ್ಟು ಕಾಲವನ್ನು, ಎಷ್ಟು ಶಕ್ತಿಯನ್ನು, ಎಷ್ಟು ಭಕ್ತಿಯನ್ನು, ಎಷ್ಟು ಯುಕ್ತಿಯನ್ನು, ಕೊಡ ಬಲ್ಲರು? ಅದಕ್ಕಿರುವ ಆಸ್ತಿ ಅನುಪಪತ್ತಿಗಳನ್ನು ನೋಡಿದರೆ ಈಗ ನಡೆದಿರುವ ಕೆಲಸ ಅಪಾರವಾಗಿದೆ. ಇದನ್ನು ತಕ್ಕಡಿಯಲ್ಲಿ ತೂಗಿ ಗಜ ಕಡ್ಡಿಯಲ್ಲಿ ಅಳೆದು ತೋರಿಸುವುದಕ್ಕಾಗುವುದಿಲ್ಲ. ಕನ್ನಡಿಗರು ತಮ್ಮ ಅಭಿಮಾನದ ಕಣ್ಣಿನಿಂದ ನೋಡಿದರೆ ಆಗ ಇದು ಕಾಣುತ್ತದೆ. ಇನ್ನೂ ಉಳಿದಿರುವ ಕಾರ್ಯಕ್ಕೆ ಹೋಲಿಸಿದರೆ ಇದು ಅತ್ಯಲ್ಪ, ನಿಜ. ಆದರೆ ಯಾವ ಕೆಲಸಕ್ಕೂ ಬೇಕಾದದ್ದು ಧನ, ಜನ, ಅಭಿಮಾನ ; ಧನವಿದ್ದರೆ ಮಿಕ್ಕೆರಡೂ ಒದಗುತ್ತವೆ. ಪರಿಷತ್ತಿಗೆ ವರ್ಷಕ್ಕೆ ಹತ್ತು ಹದಿನೈದು ಲಕ್ಷ ರೂಪಾಯಿನ ವರಮಾನವಿದ್ದರೆ ಒಂದು ವಿಶ್ವವಿದ್ಯಾನಿಲಯದ ಕೆಲಸವನ್ನೇ ಕೈಕೊಂಡು ಮಾಡಬಹುದು. ಆದರೆ ಅದರ ದಾರಿದ್ರ್ಯ ಲೋಕವಿದಿತ ವಾಗಿದೆ ; ಅದರ ಅಧಿಕಾರಿಗಳು ದಿನಕ್ಕೆ ನಾಲ್ಕು ಸಲ ಕಚೇರಿಗೆ ಬಂದು ಹೋಗಿ ದುಡಿದರೆ, ಅವರಿಗೆ ಗಾಡಿ ಬಾಡಿಗೆಯೆಂದು ನಾಲ್ಕು ಆಣೆ

ಕೊಡುವುದಕ್ಕೆ ಅದಕ್ಕೆ ಚೈತನ್ಯವಿಲ್ಲ. ಅವರು ಪುಣ್ಯವಂತರಾದರೆ, ತಾವೇ ಸಾವಿರಾರು ರೂಪಾಯಿ ದಾನಮಾಡುತ್ತಾರೆ. ಇಲ್ಲದಿದ್ದರೆ ಸಾಲ ಮಾಡಿಕೊಳ್ಳಬೇಕೇ? ಮಾಡಿದರೆ ತೀರಿಸುವವರು ಯಾರು? ಮಿಕ್ಕ ಭಾಷೆಗಳಿಗಾಗಿ ದುಡಿಯುತ್ತಿರುವವರಿಗೆ ಇರುವ ಸಂಪಾದನೆಯಲ್ಲಿ ಒಂದು ಭಾಗವನ್ನಾದರೂ ಕೊಡಬಲ್ಲೆವಾದರೆ, ಅವರು ಸಂತೋಷದಿಂದ ಕನ್ನಡಕ್ಕೆ ದುಡಿದಾರು. ಆದರೆ ಕೊಡಲು ಪರಿಷತ್ತಿಗೆ ಹಣವೆಲ್ಲಿದೆ? ಅದರ ಸದಸ್ಯ ಸಂಪತ್ತು ಬಹುದಿನ ಸುಮಾರು ನೂರು ನೂರೈವತ್ತು ಇದ್ದು ಈಗ ವಿಶ್ವಪ್ರಯತ್ನದಿಂದ ಸುಮಾರು ಏಳುನೂರಾಗಿದೆ. ಇವರಲ್ಲಿ ಅನೇಕರು ಆಜೀವಸದಸ್ಯರು; ಅವರ ಹಣವನ್ನು ಸ್ಥಿರವಾಗಿ ಬ್ಯಾಂಕಿನಲ್ಲಿಟ್ಟದೆ; ಅದಕ್ಕೆ ಬರುವುದು ವರ್ಷಕ್ಕೆ ಒಂದು ಎರಡು ರೂಪಾಯಿ ಬಡ್ಡಿ; ಹಲವರು ಹೆಸರು ಮಾತ್ರದವರು; ಅವರಿಂದ ಹಣವೇ ಬರುವುದಿಲ್ಲ. ಚಂದಾ ನಾಲ್ಕಾಣೆ ಮಾಡಿದರೆ ಬಹು ಜನ ಸೇರುವರೆಂದು ಒಂದು ಸಲಹೆ ಬಂತು; ಒಂದು ಲಕ್ಷ ಜನವಾದರೂ ಸದಸ್ಯರಾದರೆ ಈ ಸಲಹೆಯಿಂದ ಪ್ರಯೋಜನ; ಅಂಥ ಕನಸನ್ನು ಕಾಣುವುದು ಸಾಧ್ಯವೇ? ಸರ್ಕಾರದವರು, ಮಠಗಳು, ಮಾನ್ಯಮಹನೀಯರು ಈಚೆಗೆ ಉದಾರಹಸ್ತದಿಂದ ಸಾವಿರಾರು ರೂಪಾಯಿಗಳನ್ನು ಕೊಟ್ಟಿರುವುದರಿಂದ, ಮುಖ್ಯವಾಗಿ ಮೈಸೂರು ಸರ್ಕಾರವು ಪರಿಷತ್ತಿನ ಕೆಲಸ ಹೆಚ್ಚಾಗುತ್ತ ಬಂದಂತೆಲ್ಲ ಧನಸಹಾಯುವನ್ನು ಹೆಚ್ಚುಮಾಡಿಕೊಟ್ಟು ಅದರ ಅಭ್ಯುದಯದಲ್ಲಿ ಆಸಕ್ತವಾಗಿರುವುದರಿಂದ, ಶ್ರೀಮನ್ಮಹಾರಾಜ ನಾಲ್ಮಡಿ ಕೃಷ್ಣರಾಜ ಒಡೆಯರವರು, ಕಂಠೀರವ ನರಸಿಂಹರಾಜ ಒಡೆಯರವರು, ಶ್ರೀ ಜಯಚಾಮರಾಜ ಒಡೆಯರವರು ಅದನ್ನು ಮಮತೆಯಿಂದ ತಮ್ಮ ಕೃಪಾಛತ್ರದ ನೆರಳಿನಲ್ಲಿ ಪೋಷಿಸಿಕೊಂಡು ಬಂದದ್ದರಿಂದ ಇದೊಂದು ಸಂಸ್ಥೆಯು ನಿಂತಿದೆ. ಅದು ಬೆಳೆಯಬೇಕಾದರೆ ಮಿಕ್ಕಾದ ಸಂಸ್ಥಾನಾಧಿಪತಿಗಳೂ, ಸಾಹುಕಾರರೂ ಅದಕ್ಕೆ ಸಾಂಪತ್ತಿಕ ಮತ್ತು ನೈತಿಕ ಬೆಂಬಲಗಳನ್ನು ಕೊಡಬೇಕು; ಜನರು ಅದರಲ್ಲಿ ಅಭಿಮಾನವಿಟ್ಟು ಸಹಕರಿಸಬೇಕು. ಕನ್ನಡದ ವಾತಾವರಣವನ್ನು ಹಬ್ಬಿಸಿ, ಕನ್ನಡವನ್ನು ಬಲಪಡಿಸಿಕೊಳ್ಳಬೇಕು. ಪರಿಷತ್ತು ಶಾರದೆಯ ದೇವಸ್ಥಾನ;

ಅದಕ್ಕೆ ಗುಡಿ ಗೋಪುರಗಳನ್ನು ಕಟ್ಟಿಸುವುದೂ ಸೇವಾಕಾರ್ಯಕ್ಕೆಂದು ದತ್ತಿಬಿಡುವುದೂ ಪೂಜೆ ನಡಸುವುದೂ ಪಣ್ಯವಾರಗಳನ್ನು ಹಂಚುವುದೂ ಅದರ ಭಕ್ತಾದಿಗಳ ಕೆಲಸ. ಏನೇ ಆದರೂ, ಇದು ಸರ್ಕಾರದ ಇಲಾಖೆಯಂತೆ ಅಧಿಕಾರಬಲದಿಂದ ಕೆಲಸ ನಡಸಲಾರದು. ಇಂಗ್ಲೆಂಡಿನಲ್ಲಿರುವ ರಾಯಲ್ ಏಷಿಯಾಟಿಕ್ ಸೊಸೈಟಿಯಂಥವುಗಳಿಗೂ ಇದು ಸಾಧ್ಯವಾಗಿಲ್ಲ. ಇಲ್ಲಿ ಕೆಲಸ ಮಾಡುವುದು ಸತ್ವಕ್ಕಿಂತಲೂ ಹೆಚ್ಚಾಗಿ ಸ್ನೇಹ.

## ತಾಯ್ನುಡಿಯ ಉಪಾಸನೆ

ಹಿಂದೆ ಮಹಾನುಭಾವರಾದ ಗೌತಮಬುದ್ಧ ಮಹಾವೀರರು ಜನದ ಭಾಷೆಯಲ್ಲಿ ಸಾಹಿತ್ಯ ಹುಟ್ಟುವುದಕ್ಕೆ ತಳಹದಿ ಹಾಕಿದರು; ವಚನಕಾರರೂ ದಾಸಭಕ್ತರೂ ಈ ಸಂಪ್ರದಾಯವನ್ನು ಮುಂದುವರಿಸಿ, ಜನಸಾಹಿತ್ಯವನ್ನು ಬೆಳಸಿದರು, ಕನ್ನಡವನ್ನು ಬೆಳಸಿದರು; ಹಿಂದೆ ಕನ್ನಡ ಸಂಸ್ಕೃತಗಳ ಬಲಾಬಲ ವಿಚಾರಗಳಲ್ಲಿ ಮೇಲಾಟ ಹೋರಾಟಗಳು ನಡೆದರೂ, ಕನ್ನಡವು ನಮ್ಮದೆಂಬ ಮಮತೆಯು, ಅಭಿಮಾನವು, ಈಚಿನದು; ಕನ್ನಡಿಗರಿಗೆ ಕನ್ನಡದಿಂದಲೇ ಭುಕ್ತಿ, ಕನ್ನಡದಿಂದಲೇ ಮುಕ್ತಿ—ಎಂಬ ತತ್ತ್ವವನ್ನು ನಾವು ಪೂರ್ತಿಯಾಗಿ ಗ್ರಹಿಸಿದ್ದು ಈಚೆಗೆ. ಈಗಲೂ, ಈ ವಿಚಾರವಾಗಿ ಸ್ವಲ್ಪ ವೀರೋಪಾಸನೆಯಿಲ್ಲದಿದ್ದರೆ ಅದು ಬದುಕದು; ಏಕದೇವೋಪಾಸನೆಯಂತೆ ಏಕಭಾಷೋಪಾಸನೆ ಮಾಡಿದರೆ ತಾನೇ ವರ ಸಿಕ್ಕೀತು? ಕನ್ನಡ ಭಕ್ತನು, 'ತೈಲಧಾರೆಯಂತೆ ಕನ್ನಡದಲ್ಲಿ ಮನವ ಕೊಡು ಇಂಗ್ಲಿಷ್, ಸಂಸ್ಕೃತಾ!' ಎಂದು ಪ್ರಾರ್ಥಿಸಬೇಕು; ವೀರದೀಕ್ಷೆ ವಹಿಸಬೇಕು. ಕನ್ನಡದ ಭಕ್ತರಾಗಿ ಮಿಕ್ಕ ಭಾಷೆಗಳಿಗೆ ಪೂಜೆ ಸಲ್ಲಿಸುವುದನ್ನು ವಚನಕಾರರಾಗಿದ್ದರೆ ಬಹು ಕಠಿಣವಾದ ಮಾತಿನಲ್ಲಿ ಖಂಡಿಸುತ್ತಿದ್ದರು. ಈಗ ಅನೇಕ ಸಂಘ ಸಮಾಜಗಳಲ್ಲಿ ಕನ್ನಡದಲ್ಲಿ ಉಪನ್ಯಾಸಗಳಾಗುತ್ತವೆ. ಇವುಗಳಲ್ಲಿ ಎಷ್ಟು ಜನಕ್ಕೆ ನಿಜವಾದ ಆಸಕ್ತಿ ಇರುತ್ತದೆ ಎಂದು ನನಗೆ ಒಂದೊಂದು ಸಾರಿ ಸಂದೇಹ ಹುಟ್ಟುತ್ತದೆ. ಇವುಗಳಲ್ಲಿ ಉತ್ಸವಕ್ಕಾಗಿ ನಡಸಿದವೆಷ್ಟು, ವರದಿಗಾಗಿ ನಡಸಿದವೆಷ್ಟು ಎಂಬ ಸಂದೇಹ ಹುಟ್ಟುತ್ತದೆ.

ಕನ್ನಡಿಗರಲ್ಲಿ ಕಾವು ಸಾಲದು ; ಕಾವಿನಿಂದ ಕಾವ್ಯ, ಕಾವಿನಿಂದ ಕಾರ್ಯ; ಕನ್ನಡದ ಕಣ್ಮಣಿಗಳಂತಿರುವ ದೊಡ್ಡ ದೊಡ್ಡ ನಗರಗಳನ್ನು ನೋಡಿದರೆ, ಈಗ್ಗೆ ಇಪ್ಪತ್ತೈದು ವರ್ಷಗಳಿಗೂ ಈಗಿಗೂ ಏನು ಅಂತರ! ಕನ್ನಡ ಮೇಲಕ್ಕೆ ಬಂತು, ಜನದ ಅಭಿಮಾನ ಹೆಚ್ಚಿತು, ಅದು ಬೋಧನ ಭಾಷೆಯಾಯಿತು ಎಂದು ಸಂತೋಷಪಡುವಷ್ಟರಲ್ಲಿ, ಕನ್ನಡೇತರರು ಅದಕ್ಕೆ ಅಡ್ಡಿ ಹಾಕಿದರು ; ತಮ್ಮ ಭಾಷೆಯೂ ಬೋಧನಭಾಷೆಯಾಗಲಿ! ಎಂದರು. ಅವರು ನಮ್ಮಲ್ಲಿ ಬಂದು ನಿಂತು ಬಲವಾದರು, ಭಾಗ್ಯವಂತರಾದರು. ನಾವು ದೌರ್ಬಲ್ಯವನ್ನೂ ದಾರಿದ್ರ್ಯವನ್ನೂ ವರಿಸಿದರೆ ಅವರೇನು ಮಾಡಿಯಾರು ? ಅವರ ಧೈರ್ಯ ಸಾಹಸಗಳಿಗೆ ಪ್ರತಿಫಲವಿಲ್ಲವೇ ?

ಕನ್ನಡಿಗರಿಗೆ ಕನ್ನಡ ದೇಶದಲ್ಲಿ ಹಿರಿಯ ಆಸ್ತಿಯಾಗಿ ಉಳಿದಿರುವುದು ಅವರ ಕನ್ನಡ ಭಾಷೆ; ಅದನ್ನು ಉಳಿಸಿಕೊಳ್ಳಿ ಎಂದು ಕನ್ನಡಿಗರಿಗೂ ಉಳಿಸಿಕೊಡಿ ಎಂದು ಇತರರಿಗೂ ಪ್ರಾರ್ಥನೆಮಾಡಬೇಕಾಗಿದೆ. ಈಗ ಇರುವ ಅಡ್ಡಿ ಅಡಚಣೆಗಳು ಶಾಶ್ವತವಾಗಿರಲಾರವು. ಆದರೆ ಅವು ಹೋಗುವಾಗ ತಮ್ಮಲ್ಲಿ ಒಳ್ಳೆಯದಿದ್ದರೆ ಅದನ್ನು ಗಂಟುಕಟ್ಟಿಕೊಂಡು ಹೋಗುತ್ತವೆ; ಬಿಟ್ಟು ಹೋದುದನ್ನು ಛತ್ರದವರು ಗುಡಿಸಿ ಸಾರಿಸುವುದೇ ದೊಡ್ಡ ಕೆಲಸವಾಗಿ ಬಿಡುತ್ತದೆ. ದೇವಸ್ಥಾನದ ಗೋಪುರದ ಮೇಲೆ ಸಾಸವೆ ಕಾಳಿಗಿಂತ ಚಿಕ್ಕದಾದ ಒಂದು ಆಲದ ಬೀಜ ಬಿದ್ದು, ಕಣ್ಣಿಗೆ ಕಾಣದಂತೆ ಬೇರೂರಿ ಗಿಡವಾದರೆ, ಅದರಿಂದ ಮುಂದೆ ಶಿಖರವು ಚೂರುಚೂರಾಗಿ, ದೇವಾಲಯವು ದೇಗುಲವಾಗಬಹುದು. ಹಳೆಯಬೀಡಿನಲ್ಲಿ ಹೀಗಾಗಿದೆ. ಈ ಮಾತುಗಳು ಕನ್ನಡ ಒಂದಕ್ಕೇ ಅನ್ವಯಿಸುವುದಿಲ್ಲ; ಎಲ್ಲ ಮಾತೃಭಾಷೆಗಳಿಗೂ ಅನ್ವಯಿಸುತ್ತವೆ. ಆದ್ದರಿಂದ ಎಲ್ಲ ಜನರೂ ಈ ಭಾಷಾ ಭಕ್ತಿಪರಾಯಣತೆಯನ್ನು ಅನುಮೋದಿಸುತ್ತಾರೆಂದು ನಂಬುತ್ತೇನೆ.

## ಮಹಿಳೆಯರಿಗೆ ಒಂದು ಮಾತು

ನನ್ನ ಅಕ್ಕತಂಗಿಯರೇ, ನೀವು ಮನಸ್ಸು ಮಾಡಿದರೆ ಕಾವ್ಯ ಸಮ್ಮಿತಿಯಿಂದ ಕೋಮಲವಾಗಿ ಉಪದೇಶ ಮಾಡಬಲ್ಲಿರಿ. ಪ್ರಭು

ಸಮ್ಮತಿಯಿಂದ ಕಠೋರವಾಗಿ ಕಾರ್ಯಮಾಡಬಲ್ಲಿರಿ. ಕಾರ್ಯಮಾಡಿ ಗೆಲ್ಲಬಲ್ಲಿರಿ, ಕಟ್ಟಬಲ್ಲಿರಿ. ಶಿವಾಜಿಯನ್ನು ಸಾಕಿದವರು ನೀವು, ಪ್ರತಾಪನನ್ನು ಪ್ರೋತ್ಸಾಹಿಸಿದವರು ನೀವು. ಕನ್ನಡವನ್ನು ಓದುವವರು ನೀವು, ಕನ್ನಡದ ಅಭಿಮಾನ ಬೆಳದಿರುವುದು ನಿಮ್ಮಿಂದ—ಹಿಂದಿ ಮುಂದಾಗಿರುವುದೂ ನಿಮ್ಮಿಂದಲೇ. ನಾನು ನೋಡಿರುವ ಮಟ್ಟಿಗೆ, ಈ ವಿಚಾರವಾಗಿ ಇರುವ ಅನುಕೂಲದಾಂಪತ್ಯ ಹೆಂಡತಿಯಿಂದಲೇ ಗಂಡನಿಗೆ ಬಂದಿರುತ್ತದೆ: ನೀವು ಕನ್ನಡವನ್ನು ಕಾಪಾಡಿಕೊಂಡು ಬಂದರೆ ಅದು ತಾಯಿನುಡಿಯಾಗಿ ಉಳಿಯುತ್ತದೆ, ಬೆಳೆಯುತ್ತದೆ. ಇಲ್ಲದಿದ್ದರೆ ಬಾಯಿಮಾತಾಗಿ ಅಳಿಯುತ್ತದೆ.

## ಹೈದರಾಬಾದಿನಿಂದ ಕರ್ಣಾಟಕದ ಮುನ್ನಡೆಗೆ ಬೆಳಕು

ಮಾತಿಗೂ ಸಾಹಿತ್ಯಕ್ಕೂ ಜಾತಿ ಕಸಬುಗಳಿಲ್ಲ; ಕುಲ ಕೋಮುಗಳಿಲ್ಲ. ಆಕಾಶ ಗಾಳಿ ಬೆಳಕುಗಳು ಹೇಗೋ ಜ್ಞಾನವೂ ಹಾಗೆಯೇ—'ಸರ್ವಶುಕ್ಲಾ ಸರಸ್ವತೀ.' ಹಿಂದಿನ ಸಂಸ್ಕೃತ ಪ್ರಾಕೃತ ಸಾಹಿತ್ಯಗಳಾಗಲಿ, ಇಂದಿನ ದೇಶಭಾಷಾ ಸಾಹಿತ್ಯಗಳಾಗಲಿ, ಯಾವ ಒಬ್ಬ ಜಾತಿ ಮತದವರಿಂದಲೂ ಸೃಷ್ಟವಾದವಲ್ಲ; ಒಂದು ಗ್ರಾಮದ ಬೆಳೆವಳಿಗೆ ಹೇಗೆ ಹಲವು ಜನದ ಸಹಕಾರದಿಂದ ಆಗಿ ನಿಂತು ಬೆಳೆದುಬರುವುದೋ ಹಾಗೆಯೇ ಇವೂ ಹಲವು ಜನರಿಂದ ಆಗಿ ಬೆಳೆದುಬಂದುವು. ಎಲ್ಲಿಯುವರೆಗೆ ಹಲವರು? ಒಂದಾಗುವವರೆಗೆ! ಸಂಗಮದವರೆಗೆ ನದಿ ಉಪನದಿ; ಸಮುದ್ರವನ್ನು ಸೇರಿದಮೇಲಂತೂ ಎಲ್ಲಾ ಸಾಗರವೇ! ಪ್ರಾಚೀನ ಸಾಹಿತ್ಯದಲ್ಲಿ ಭಿನ್ನ ಭಿನ್ನ ಮತ ವಿಷಯಗಳುಂಟು, ಭಿನ್ನ ಭಿನ್ನ ಧರ್ಮ ವಿಚಾರಗಳುಂಟು; ವೈಷಮ್ಯಗಳೂ ಉಂಟು. ಹಿಂದಿನ ಕಾಲದಲ್ಲಿ ಅವು ಇಲ್ಲದ್ದು ಎಲ್ಲಿ? ಇಂದು ಧರ್ಮಮತಗಳು ಹಿಂದೆ ಬೀಳುತ್ತಿವೆ; ಒಂದಾಗುತ್ತಿವೆ; ಸಾಹಿತ್ಯವು ಶುದ್ಧವಾಗುತ್ತಿದೆ, ಸಾರ್ವಜನಿಕವಾಗುತ್ತಿದೆ; ಈಗ ವಿದ್ಯಾವಂತರು ವಿವೇಕಮತಿಗಳಾಗಿ, ಕೊಟ್ಟು, ಕೊಂಡು, ಸ್ನೇಹದಿಂದಲೂ ಶಾಂತಿಯಿಂದಲೂ ಸುಖವಾಗಿ ಬಾಳುವ ಮಾರ್ಗವನ್ನು ಹುಡುಕಬೇಕು. ನಮ್ಮ ಕಜ್ಜಾಯ ನಮ್ಮದು; ಅದನ್ನು ಉಳಿಸಿಕೊಂಡು ತಿನ್ನುವುದು ವಿವೇಕ; ಅದಕ್ಕಾಗಿ ಕಚ್ಚಾಡಿ ಮಂಗ

ರಾಯನನ್ನು ಕರೆವರೆ ಆಗುವುದು ಗೊತ್ತೇ ಇದೆ— 'ಕೊಟ್ಟೋನು ಕೋಡಂಗಿ, ತಗೊಂಡೋನು ವೀರಭದ್ರ!'

ಈ ವಿಚಾರದಲ್ಲಿ ಇಂದಿನ ಬಂಗಾಳಾಪ್ರಾಂತವು ಅಭಿನಂದ್ಯವಾಗಿಯೂ ಅನುಕರಣೀಯವಾಗಿಯೂ ಇದೆ. ಆಧುನಿಕ ಭರತಖಂಡದಲ್ಲಿ ಮೊದಲು ಬೆಳಕು ಹರೆದದ್ದು ಅಲ್ಲಿ; ರಾಜಾ ರಾಮಮೋಹನ ರಾಯ್, ವಿವೇಕಾನಂದ, ಬಂಕಿಂಚಂದ್ರ, ರವೀಂದ್ರನಾಥ ಠಾಕೂರರು ಹುಟ್ಟಿ ಬಾಳಿ ಕೀರ್ತಿ ತಂದದ್ದು ಅಲ್ಲಿ. ಇಂದು ಅಲ್ಲಿ ದೇಶಮಾನ್ಯರಾದ ಫಜುಲುಲ್ ಹಕ್‌ರವರೂ ಶ್ಯಾಮಪ್ರಸಾದಮುಖರ್ಜಿಯವರೂ ಪರಸ್ಪರ ಸೌಹಾರ್ದದಿಂದ ಎರಡು ಚಕ್ರಗಳಾಗಿ ನಿಂತು ನಾಡದೇವಿಯ ತೇರನ್ನು ಹೊತ್ತು ನಡೆಸಲು ಮಾಡಿರುವ ಯೋಜನೆಯು ಮುಂದಿನ ಮಂಗಳದ ಶುಭಸೂಚನೆಯಾಗಿದೆ. ಬಂಗಾಳದಲ್ಲಿ ಹಿಂದೂ ಮುಸಲ್ಮಾನರಿಬ್ಬರೂ ದೊಡ್ಡ ಸಂಖ್ಯೆಯಲ್ಲಿದ್ದಾರೆ; ಆದರೆ ಭಾಷೆ, ಆದ್ದರಿಂದ ಸಾಹಿತ್ಯ ಅವರಿಗೆ ಬೇರೆ ಬೇರೆಯಲ್ಲ; ಆದ್ದರಿಂದ ಅವು ಅಷ್ಟು ಪುಷ್ಟವಾಗಿವೆ. ಇಂದು ನಾವು ಅದರಿಂದ ಪಾಠ ಕಲಿಯಬೇಕಾಗಿದೆ. ಭಗವಂತನ ಕೈವಾಡದಿಂದ ನಾವೆಲ್ಲ ಏಕೋ ಹೇಗೋ ಇಲ್ಲಿ ಒಟ್ಟಿಗೆ ಸೇರಿದ್ದೇವೆ. ಎಲ್ಲರೂ ಇಲ್ಲಿಯವರೇ, ಎಲ್ಲರೂ ಹೊರಗಿನಿಂದ ಬಂದು ನೆಲಸಿದವರೇ. ಯಾರನ್ನು ಯಾರೂ ಬಿಡುವ ಹಾಗಿಲ್ಲ; ಬಿಟ್ಟು ಹೋಗುವ ಹಾಗಿಲ್ಲ. ಇದನ್ನು ಅರಿತು ಭ್ರಾತೃಭಾವವನ್ನು ಬೆಳಸಿಕೊಂಡು ಹೋಗಬೇಕು.

ಬೊಂಬಾಯಿಯಂಥ ಮಹಾನಗರದ ಬೀದಿಯಲ್ಲಿ ಹೋಗುತ್ತಿದ್ದರೆ ಅಲ್ಲಿ ಯಾವ ಭೇದಭಾವಗಳು ಹೇಗೆ ಬಂದಾವು, ಬಂದರೆ ನಿಂತಾವು, ಎನ್ನಿಸುತ್ತದೆ. ಬೀದಿಯ ತುಂಬ ಕಾರುಗಳ, ಟ್ರಾಮುಗಳ, ಜನರ, ಗದ್ದಲವೋ ಗದ್ದಲ; ಬೆಳಗಿನ ಜಾವದಿಂದ ಅರ್ಧರಾತ್ರಿಯ ವರೆಗೆ ನಾನಾ ವಿಧವಾದ ಗದ್ದಲ; ನಾನಾ ಭಾಷೆಗಳನ್ನು ಆಡುವ ನಾನಾ ಜನದ ಗದ್ದಲ; ಅದರ ಮಧ್ಯದಲ್ಲಿ ನಗಾರಿ ಹೊಡೆದರೂ ಕೇಳುವುದಿಲ್ಲ. ಅಲ್ಲಲ್ಲೇ ದೇವಸ್ಥಾನಗಳೂ ಇವೆ. ಮಸೀದಿಗಳೂ ಇವೆ, ಕಛೇರಿಗಳೂ ಇವೆ, ಸ್ಕೂಲುಗಳೂ ಇವೆ. ಅಲ್ಲಿ ಯಾರನ್ನು ಯಾರು ಆಕ್ಷೇಪಿಸಬಹುದು? ಬೊಂಬಾಯಿನಗರ ನಾಗರಿಕ ಪ್ರಪಂಚದ ಒಂದು 'ಮಾದರಿ'ಯ

ತುಂಡು, 'ಮಚ್ಛ'ದ ಚೂರು. ಬಂಗಾಳದಿಂದಲೂ ಬೊಂಬಾಯಿ ಮಹಾನಗರದಿಂದಲೂ ನಾವು ಪಾಠ ಕಲಿತುಕೊಳ್ಳುವುದಾದರೆ, ಕನ್ನಡಿಗರು ಒಕ್ಕಟ್ಟಿನಿಂದ, ಸ್ನೇಹದಿಂದ, ಶ್ರೇಯಸ್ಸನ್ನು ಸಾಧಿಸುವುದು ಕಷ್ಟವಾಗುವುದಿಲ್ಲ: ಹೈದರಾಬಾದು ಪ್ರಾಂತದಲ್ಲಿ, ಕನ್ನಡವಿದೆ, ಮರಾಠಿಯಿದೆ, ತೆಲುಗಿದೆ; ಇವೆಲ್ಲಕ್ಕೂ ಸಂಬಂಧಿಸಿ ಉರ್ದು ಭಾಷೆ ಇದೆ. ಮಹಾಘನತೆವೆತ್ತ 'ಸುಲ್ತಾನ್-ಉಲ್-ಉಲೂಮ' ರವರೂ, ಸರ್ ಅಕ್ಬರ್ ಹೈದರಿಯವರೂ, ನವಾಬ್ ಮೆಹದಿ ಯಾರ್ ಜಂಗ್ ಬಹಾದ್ದೂರ್ ಅವರೂ ಆಧುನಿಕ ಹೈದರಾಬಾದಿನ ನಿರ್ಮಾಣದಲ್ಲಿ, ಭರತಖಂಡದ ನಿರ್ಮಾಣದಲ್ಲಿ, ಆಸಕ್ತಿ ವಹಿಸಿ ಜನದ ಅಭ್ಯುದಯವನ್ನು ಸಾಧಿಸುತ್ತಿದ್ದಾರೆ. ಇಲ್ಲಿ ಕನ್ನಡಿಗರ ಸಮಸ್ಯೆಯ ತೊಡಕು, ಭಾಷಾ ಸಾಹಿತ್ಯ ಸಂಸ್ಕೃತಿಗಳ ತೊಡಕು ಹರಿದು, ಕರ್ಣಾಟಕವು ಬದುಕಿ ಬಾಳುವ ಮಾರ್ಗವನ್ನು ಕಂಡುಕೊಳ್ಳಬಹುದೆಂದು ನನಗೆ ಪೂರ್ಣ ಭರವಸೆಯಿದೆ.

# ಅನುಬಂಧ

[ಈ ಭಾಷಣದ ಮೇಲೆ (ಪುಟ ೧೯-೭೧) ಖಂಡನಗಳೂ ಮಂಡನಗಳೂ ಬಂದುವು. ಅವುಗಳಲ್ಲಿ ಖಂಡನಗಳು ತಪ್ಪು ತಿಳಿವಳಿಕೆಯಿಂದ ಹುಟ್ಟಿ, ತಪ್ಪು ಭಾವನೆಗಳನ್ನು ಹರಡುವಂತಿದ್ದದ್ದರಿಂದ, ವಿವರಣಾತ್ಮಕವಾದ ಉತ್ತರಗಳನ್ನು ಕೊಟ್ಟು ಸಮಾಧಾನ ಹೇಳಬೇಕಾಯಿತು. ಅಂಥ ಉತ್ತರಗಳಲ್ಲಿ ಕೆಲವನ್ನು ಮುಂದೆ ಕೊಟ್ಟಿದೆ. ವ್ಯಕ್ತಿಗಳ ಹೆಸರನ್ನು ಈಗ ಮುದ್ರಿಸುವುದರಿಂದ ಪ್ರಯೋಜನವಿಲ್ಲವೆಂದು ಬಿಟ್ಟಿದೆ.]

೧

....ಸಂಸ್ಕೃತ ಭಾಷೆಯ ಮಹತ್ವದ ವಿಚಾರವಾಗಿ ಭಿನ್ನಾಭಿಪ್ರಾಯವಿಲ್ಲ. ಆದರೆ ವಿಲ್ಸನ್ ಪಂಡಿತನ ವೇದ ಭಾಷಾಂತರವನ್ನೂ ಮ್ಯಾಕ್ಸ್ ಮುಲರ್ ಪಂಡಿತನಿಂದ ಸಂಪಾದಿತವಾದ ಸ್ಮೃತಿಸೂತ್ರಾದಿಗಳ ಭಾಷಾಂತರಗಳನ್ನೂ ಒಂದು ತಿಂಗಳಲ್ಲಿ ಓದುವುದಕ್ಕಾಗುವುದಿಲ್ಲವೇ? ಬಿ.ಎ., ಎಂ.ಎ., ಪ್ರಶಸ್ತಿಗಳನ್ನು ಪಡೆದವರಿಗೆ ಸಾಧ್ಯವೆಂದು ನಾನು ತಿಳಿಯುತ್ತೇನೆ. ಸಾಯಣಭಾಷ್ಯ ಸಹಾಯದಿಂದ ಋಗ್ವೇದವನ್ನೂ ಹರದತ್ತ ಮಸ್ಕರಿ ಮುಂತಾದವರ ವೃತ್ತಿಯ ಸಹಾಯದಿಂದ ಧರ್ಮಸೂತ್ರಗಳನ್ನೂ ಮಹಾಮಹೋಪಾಧ್ಯಾಯ ಡಾ|| ಶಾಮಶಾಸ್ತ್ರಿಗಳ ಭಾಷಾಂತರದ ಸಹಾಯವಿಲ್ಲದೆ ಕೌಟಿಲ್ಯನ ಅರ್ಥಶಾಸ್ತ್ರವನ್ನೂ ಇಂಗ್ಲಿಷ್ ಅರಿಯದ ಸಂಸ್ಕೃತ ಪಂಡಿತರೂ ಓದಿ ಅರ್ಥಮಾಡಿಕೊಳ್ಳುವುದಕ್ಕೆ ಎಷ್ಟು ಕಾಲ ಹಿಡಿಯುತ್ತದೆ? ಇದಕ್ಕೆ ಎಷ್ಟುಮಟ್ಟಿನ ಸಂಸ್ಕೃತ ವಿದ್ವತು ಬೇಕು? ಅದು ಎಷ್ಟು ಜನಕ್ಕೆ ಸಾಧ್ಯ? ಇದು ಪ್ರಕೃತವಾದ ಸಂಗತಿ. ಸ್ವತಂತ್ರವಾಗಿ ಸಂಸ್ಕೃತವನ್ನು ಅಭ್ಯಾಸ ಮಾಡಬಾರದೆಂದು ನಾನು ಎಲ್ಲಿಯೂ ಹೇಳಿಲ್ಲ. ಅದರ ಸಹಾಯವು ಭಾರತೀಯ ಭಾಷೆಗಳೆಲ್ಲಕ್ಕೂ ಬೇಕೆಂದು ಹೇಳಿದ್ದೇನೆ. ನನ್ನ ಸೂಚನೆಯ ಪ್ರಕಾರ, ಈಗ ಬರಿಯ ಕನ್ನಡವನ್ನು ಓದುತ್ತಿರುವವರೆಲ್ಲರೂ ಜೊತೆಗೆ ಸಂಸ್ಕೃತವನ್ನೂ ಓದಬೇಕು. ಅಷ್ಟೇ ಅಲ್ಲ. ಸಂಸ್ಕೃತವೇ ರಾಷ್ಟ್ರಭಾಷೆ ಏಕಾಗಬಾರದೆಂದು

ನಾನು ಕೇಳಿದ್ದೇನೆ. ಆದಾದರೆ ನನಗಿಂತ ಹೆಚ್ಚಾಗಿ ಯಾರೂ ಸಂತೋಷಿಸಲಾರರು.

ಸಂಸ್ಕೃತಕ್ಕೂ ಇಂಗ್ಲಿಷಿಗೂ ಇರುವ ರಕ್ತಸಂಬಂಧ, ಜ್ಞಾತಿ ಸಂಬಂಧ, ಸಂಸ್ಕೃತಕ್ಕೂ ಕನ್ನಡಕ್ಕೂ ಇಲ್ಲವೆಂಬುದೇ ಭಾಷಾಶಾಸ್ತ್ರಜ್ಞರ ಬಹುಮತ ಸಿದ್ಧಾಂತ.

ಸಂಸ್ಕೃತದ ದೇಹ ಸಂಸ್ಕೃತ ರೂಪವಾಗಿ ಉಳಿದರೂ ಅದರ ಜೀವ ದೇಶಭಾಷೆಗಳ ಮೂಲಕವೇ ಹರಿಯಬೇಕು; ದೇಹಕ್ಕಿಂತ ಜೀವ ದೊಡ್ಡದು. ನಾನು 'ನವೀನ ಕನ್ನಡಿಗ' ನೂ ಹೌದು, ಪ್ರಾಚೀನ 'ಸಂಸ್ಕೃತ ಪ್ರೇಮಿ' ಯೂ ಹೌದು. ನಾನು ಈಗ್ಗೆ ಸುಮಾರು ನಲವತ್ತೈದು ವರ್ಷಗಳಿಂದ ಮಹಾರಾಜರವರ ಸಂಸ್ಕೃತ ಮಹಾಪಾಠಶಾಲೆಯ ಹಲವು ಸಂಸ್ಕೃತ ವಿದ್ವಾಂಸರ ಪದತಲದಲ್ಲಿ ಕುಳಿತು ಪ್ರಾಚೀನ ಸಂಪ್ರದಾಯ ರೀತಿಯಲ್ಲಿ ಸಂಸ್ಕೃತ ಶಾಸ್ತ್ರ ಸಾಹಿತ್ಯಗಳನ್ನು ವ್ಯಾಸಂಗ ಮಾಡಿದವನು. (ಇದು ಆತ್ಮಸ್ತುತಿಯೆಂದು ತೋರುವುದಾದರೂ ಅದನ್ನು ಸ್ವಲ್ಪವಾದರೂ ಸೂಚಿಸದೆ ಇದ್ದರೆ ಜನಕ್ಕೆ ನಿಜವಾದ ಸಂಗತಿ ಗೊತ್ತಾಗದಿರಬಹುದೆಂದು ಈ ಮಾತು ಹೇಳಬೇಕಾಯಿತು. ಕ್ಷಮಿಸಬೇಕು.) ನನಗೆ ಸಂಸ್ಕೃತ ಪಾಠ ಹೇಳಿದವರೆಲ್ಲರೂ ಕನ್ನಡದಲ್ಲಿ, ಇಲ್ಲವೇ ತಮಿಳಿನಲ್ಲಿ, ಪಾಠ ಹೇಳಿದ್ದಾರೆ. ಇಂದಿಗೂ ಸಂಸ್ಕೃತ ಪಾಠಶಾಲೆಗಳಲ್ಲಿ ನಡೆಯುತ್ತಿರುವುದು ಹೀಗೆಯೇ....ಯವರೂ ತಮ್ಮ ಚರ್ಚೆಯನ್ನು ಕನ್ನಡದಲ್ಲಿಯೇ ನಡಸಿರಬೇಕೆಂದು ಊಹಿಸುತ್ತೇನೆ.

ಇಂದಿನ ಸ್ಥಿತಿಯಲ್ಲಿ ಸಂಸ್ಕೃತವನ್ನು ಭರತಖಂಡದ ಆದ್ಯಂತವೂ ವ್ಯಾಸಂಗದ ಪ್ರಥಮ ಭಾಷೆ ಅಥವಾ ಏಕಮಾತ್ರ ಭಾಷೆಯಾಗಿ ಮಾಡುವುದು ಕಾರ್ಯಸಾಧ್ಯವೇ? ಪ್ರಯೋಜನಕಾರಿಯೇ? ದೇಶಭಾಷೆಗಳಿಗೆ ಸಂಸ್ಕೃತ ಹೇಗೆ ಬೇಕೋ ಸಂಸ್ಕೃತಕ್ಕೂ ಹಾಗೇ ದೇಶ ಭಾಷೆಗಳು ಬೇಡವೇ? ಬರಿಯ ಶಪಥದಿಂದಲೇ ಯಾವುದಕ್ಕೂ ಸದವಸ್ಥೆಯಾಗಲಿ ದುರವಸ್ಥೆಯಾಗಲಿ ಬರುವುದಿಲ್ಲ.

ನಾನು ಜೇನುಗೂಡಿಗೆ ಕೈ ಇಟ್ಟದ್ದೇನೆ; ಜೇನು ಎದ್ದಿದೆ; ಅದು

ನನ್ನನ್ನು ಕಡಿದರೆ ಚಿಂತೆಯಿಲ್ಲ. ನಮ್ಮ ಜನಕ್ಕೆ ಜೇನುತುಪ್ಪ ದೊರಕಿದರೆ ಸರಿ.

—ತಾಯಿನಾಡು, ೧೨—೧—೧೯೪೨.

೨

....ನನ್ನ ಅಧ್ಯಕ್ಷ ಭಾಷಣದಲ್ಲಿ ನಾನು "ಇಂದಿನ ಜನಜೀವನದಲ್ಲಿ ಕನ್ನಡ"ದ ಸ್ಥಾನ ಸಂಬಂಧಗಳನ್ನು ಕುರಿತು ನನ್ನ ಅನುಭವಕ್ಕೆ ಬಂದ ಕೆಲವು ಅಂಶಗಳನ್ನು ಅರಿಕೆ ಮಾಡಿಕೊಂಡಿದ್ದೇನೆ. ಅವುಗಳಲ್ಲಿ ಭಾಷಾ ಸಮಸ್ಯೆಯು ಮುಖ್ಯವಾದದ್ದು. ವಿದ್ಯಾವಂತನಾಗಿ ತನ್ನ ನಾಡಿಗೆ ಪ್ರಯೋಜನವಾಗಬೇಕೆಂಬ ಪ್ರತಿಯೊಬ್ಬನೂ ಮೂರು ಭಾಷೆಗಳನ್ನಾದರೂ ಕಡ್ಡಾಯವಾಗಿ ಕಲಿಯಬೇಕು.—೧. ಮಾತೃಭಾಷೆ, ೨. ಪ್ರಾಂತ ಭಾಷೆ, ಅಥವಾ (ಮಾತೃಭಾಷೆಯೂ ಪ್ರಾಂತಭಾಷೆಯೂ ಒಂದೇ ಆಗಿದ್ದರೆ) ಸಂಸ್ಕೃತ. ೩. ಇಂಗ್ಲಿಷ್. ಮಿಕ್ಕ ಭಾಷೆಗಳು, ವ್ಯವಹಾರಕ್ಕೆ ಮಾತ್ರ ಬೇಕಾಗಿದ್ದರೆ, ಅವು ಬೇಕಾಗಿದ್ದವರಿಗೆ ವ್ಯವಹಾರ ಮಾಡುತ್ತ ಬರುತ್ತವೆ; ಬರದೆ ಇದ್ದರೆ ಕಲಿತುಕೊಳ್ಳಬೇಕು. ಇಷ್ಟಕ್ಕೋಸ್ಕರ ಅವಕ್ಕೆ ಶಿಕ್ಷಣದಲ್ಲಿ ಕಡ್ಡಾಯವಾದ ಸ್ಥಾನ ಬೇಕಿಲ್ಲ. ಸಾಹಿತ್ಯ ಸಂಪತ್ತಿನಿಂದ ವ್ಯಾಸಂಗಕ್ಕೆ ಬೇಕಾಗಿದ್ದರೆ, ಅವುಗಳು ಐಚ್ಛಿಕವಾಗಿ ಶಿಕ್ಷಣ ಕ್ರಮದಲ್ಲಿ ಸ್ಥಾನ ಪಡೆಯಬೇಕು. ಇಂಗ್ಲಿಷಿಗೆ ಈಗ ಇರುವ ಸ್ಥಾನವನ್ನು ಇಳಿಸಿ, ಬೇಕಾದರೆ ಐಚ್ಛಿಕ ವಿಷಯಗಳ ಸಂಖ್ಯೆಯನ್ನೋ ಪ್ರಮಾಣವನ್ನೋ ತಗ್ಗಿಸಿ, ಇದನ್ನು ಸಾಧಿಸಿಕೊಳ್ಳಬೇಕು; ಕನ್ನಡದ ವ್ಯಾಸಂಗ ಇನ್ನೂ ವಿಸ್ತಾರವಾಗಬೇಕು—ಎಂಬುದು ಮುಖ್ಯ ಸಾರಾಂಶ.

ನನ್ನ ಆ ಭಾಷಣದಲ್ಲಿ ಸಂಸ್ಕೃತ ಹಿಂದಿಗಳ ವಿಚಾರವಾಗಿ ಸಂಕುಚಿತ ಭಾವನೆಯಿದೆ ಎಂಬುದು ಕೆಲವರ ಆಕ್ಷೇಪಣೆ. ಕನ್ನಡ ನಾಡಿನಲ್ಲಿದ್ದೂ ಅರೆಗನ್ನಡಿಗರಾಗಿ ಕನ್ನಡವನ್ನು ಆಗ್ರಾ ಅಲಹಾಬಾದುಗಳಿಂದ ನೋಡುವವರಿಗೆ ಹೀಗೆನ್ನಿಸುವುದು ಸಹಜ. ಇಂತಹವರಿಗೆ ಕನ್ನಡದಲ್ಲಿ ಅಭಿಮಾನವಿದ್ದರೆ, ಇತರ ಭಾಷೆಗಳಲ್ಲಿ ಅದಕ್ಕಿಂತ ಹೆಚ್ಚಿನ ಅಭಿಮಾನವಿರುತ್ತದೆ.

ಸಂಸ್ಕೃತದ ವಿಚಾರದಲ್ಲಿ ನನಗೆ ಇರುವ ಗೌರವವು ಮಿಕ್ಕ ಯಾರದಕ್ಕಿಂತ ಏನೂ ಕಡಮೆಯದಲ್ಲ; ರಾಷ್ಟ್ರ ಭಾಷೆಯೊಂದು ಬೇಕಾ

ದರೆ ಅದೇ ಏಕಾಗಬಾರದೆಂದು ನಾನು ಕೇಳಿದ್ದೇನೆ. ಆದರೆ ಅದು ಸ್ವಭಾಷೆಯೇ ಅನ್ಯ ಭಾಷೆಯೇ? ಹೇಗೆ ಸ್ವಭಾಷೆಯಲ್ಲ, ಹೇಗೆ ಅನ್ಯ ಭಾಷೆಯೆಂಬುದನ್ನು ಚರ್ಚಿಸಿದ್ದೇನೆ; ಅದರ ಉಪಕಾರವನ್ನು ನೆನೆದಿದ್ದೇನೆ. ಕನಸು ಮನಸಿನಲ್ಲಿಯೂ ಅದು ಹೋದರೆ ಹೋಗಲಿ ಎಂದು ಕೊಂಡಿಲ್ಲ. ನನ್ನ ಸೂಚನೆಯ ಪ್ರಕಾರ ಸಂಸ್ಕೃತವನ್ನು ಕಾಲೇಜುಗಳಲ್ಲಿ ಈಗಿಗಿಂತ ಹೆಚ್ಚು ಜನರು ಓದಬೇಕಾಗುತ್ತದೆ, ಇನ್ನೂ ಚೆನ್ನಾಗಿ ಓದಬೇಕಾಗುತ್ತದೆ. ಮೈಸೂರು ಬೆಂಗಳೂರುಗಳಲ್ಲಿ ಕನ್ನಡ ಮಾತೃಭಾಷೆಯಾಗಿ ಉಳ್ಳ ವಿದ್ಯಾರ್ಥಿಗಳೆಲ್ಲಾ ಕನ್ನಡದ ಜೊತೆಗೆ ಅದನ್ನೂ ಓದಿ ಬೆಂಬಲ ಪಡೆಯುವಂತಾಗುತ್ತದೆ. ಸಂಸ್ಕೃತವನ್ನು ಓದುತ್ತಿರುವವರಲ್ಲಿ ಬಹು ಜನ ಕನ್ನಡವನ್ನೂ ಓದುವಂತಾಗುತ್ತದೆ. (ಮಿಕ್ಕ ಭಾಷಾ ಪ್ರಾಂತಗಳವರೂ ಇದರ ತತ್ವವನ್ನು ಒಪ್ಪಿದರೆ, ಈಗಿಗಿಂತಲೂ ಸಾವಿರಾರು ಜನ ಹೆಚ್ಚಾಗಿ ಸಂಸ್ಕೃತವನ್ನು ಓದುವಂತಾದೀತು.) ಇವೆರಡರ ಸಹಾಯದಿಂದ ಇಂಡಿಯ ದೇಶದ ಯಾವ ಔತ್ತರೇಯ ಅಥವಾ ದಾಕ್ಷಿಣಾತ್ಯ ಭಾಷೆಯನ್ನಾದರೂ ಸ್ವಪ್ರಯತ್ನದಿಂದಲೇ ಕಲಿಯಬಹುದು.

ಇನ್ನು ಹಿಂದಿಯ ವಿಚಾರ. ಅದರ ಹೆದರಿಕೆ ನನಗೆ ಇದ್ದೇ ಇದೆ, ಹೆಚ್ಚಾಗುತ್ತಿದೆ; ಆದ್ದರಿಂದ ಅದನ್ನು ಮುಚ್ಚು ಮರೆಯಿಲ್ಲದೆ ವ್ಯಕ್ತಪಡಿಸಿದ್ದೇನೆ. ಹಿಂದಿ ಭಾಷೆಯು ಸಾರ್ವತ್ರಿಕವಾದರೆ ಕನ್ನಡಕ್ಕೆ ಈಗ ಹೈದರಾಬಾದಿನಲ್ಲಿರುವ ಶೋಚನೀಯ ಸ್ಥಿತಿಯು ಮಿಕ್ಕೆಡೆಗಳಲ್ಲೂ ಬರುತ್ತದೆ. ಅಲ್ಲಿ ಅದರ ಗತಿಯೇನಾಗಿದೆ ಎಂಬುದನ್ನು ಈ ಸಾರಿಯ ಸಮ್ಮೇಳನದ ಸ್ವಾಗತಾಧ್ಯಕ್ಷರ ಭಾಷಣದಿಂದಲೂ, ಶ್ರೀಮಾನ್ ಕಪಟರಾಳ ಕೃಷ್ಣರಾಯರ "ನಮ್ಮ ನಾಡ ನುಡಿಯ ಇತಿಹಾಸ" ದಿಂದಲೂ ಶ್ರೀಮಾನ್ ಲಿಂಗಸುಗೂರ್ ವಿಠಲರಾವ್ ಮತ್ತು ಆರ್. ಜಿ. ಜಾಗಿರದಾರರ "ಹೈದರಾಬಾದ್ ಕರ್ನಾಟಕ" ಎಂಬ ಗ್ರಂಥದಿಂದಲೂ ತಿಳಿದುಕೊಳ್ಳಬಹುದು.

—ಪ್ರಬುದ್ಧ ಕರ್ಣಾಟಕ, ಸಂಚಿಕೆ ೮೯.

೧೪—೧—೧೯೪೩

ಇಲ್ಲಿ, ತಾವು ಪ್ರಸ್ತಾಪಿಸಿರುವ ನನ್ನ "ಗೊಡ್ಡಾಚಾರ" ದ ವಿಚಾರವಾಗಿ ಒಂದೆರಡು ಮಾತನ್ನು ಹೇಳಬಯಸುತ್ತೇನೆ :—

ನನ್ನ ಕಾವ್ಯ ಪಾಠಗಳನ್ನು ಕೇಳಿದ ತರುಣ ವಿದ್ಯಾರ್ಥಿಗಳಾರೂ ನನ್ನನ್ನು ಗೊಡ್ಡಾಚಾರದವನೆಂದಿಲ್ಲ; ವಿಲಾಸಿಗಳ ಕಣ್ಣಿಗೆ ನಾನು ಗೊಡ್ಡಾಗಿ ಕಾಣಬಹುದು ವೈದಿಕ ಗೊಡ್ಡಿನಿಂದ ಸಮಾಜಕ್ಕೆ ಬಾಧಕವಿಲ್ಲ; ವಿಲಾಸಿಗಿಂತ ಕ್ಷೇಮ ಹೆಚ್ಚು. ವಿಷಯಾಭಿಲಾಷೆ ವಿಲಾಸಗಳು ತಾವಾಗಿ ಬರುತ್ತವೆ; ಅವನ್ನು ಕಾಲೇಜುಗಳಲ್ಲಿ ಕಲಿಸಿಕೊಡಬೇಕಾಗಿಲ್ಲ. ನಾನು ಆಕ್ಷೇಪಿಸುವುದು ನಮ್ಮ ದೇಶಕ್ಕೆ, ನಮ್ಮ ಜನಕ್ಕೆ, ಹೊಂದದ ನಮ್ಮ ಆರ್ಥಿಕಸ್ಥಿತಿಗೆ ಮೀರಿದ, ಅತಿಯಾದ ಆಟಪಾಟ ವಿನೋದಗಳಿಗೆ. ವಿದ್ಯಾರ್ಥಿಗಳು ಮೊದಲು ವಿದ್ಯಾರ್ಥಿಗಳು; ಅವರು ಓದಬೇಕಾದಷ್ಟು ಓದಲಿ. ಫುಟ್‌ಬಾಲ್, ವಾಲೀಬಾಲ್, ಬ್ಯಾಸ್ಕೆಟ್‌ಬಾಲ್‌ಗಳನ್ನು ಆಡಲಿ, ನೆಗೆಯಲಿ, ಹಾರಲಿ, ಓಡಲಿ—ನನಗೆ ಸಂತೋಷ. ಇದಕ್ಕೆ ಹೆಚ್ಚು ಖರ್ಚಿಲ್ಲ; ಇವುಗಳಿಂದ ಆರೋಗ್ಯವುಂಟು, ಬಲವುಂಟು, ಧೈರ್ಯ ಬರುತ್ತದೆ, ಶಕ್ತಿ ಬರುತ್ತದೆ. ಒಳ್ಳೆಯ ಪದಾರ್ಥವನ್ನು ತಿನ್ನಿ ಎಂದರೆ ಉಪವಾಸವಿರಿ ಎಂದು ಅರ್ಥವಲ್ಲ. ಕಳೆದ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ಸುಮಾರು ಅರ್ಧಕ್ಕರ್ಧ ಜನ ಬುದ್ಧಿವಂತರಾದ ತರುಣರು ದೃಢಕಾಯರಲ್ಲವೆಂದು ತಿರಸ್ಕೃತರಾದದ್ದು ತಮಗೆ ಗೊತ್ತಿರಬಹುದು. ಈ ಕಡೆಗೆ ನಾವೂ ನೀವೂ ಗಮನ ಕೊಡಬೇಡವೇ? ನಾನು ಧರ್ಮಶಾಸ್ತ್ರವನ್ನು ಶ್ರೀಮದ್ಗಂಭೀರವಾಗಿ ಪಾಠ ಹೇಳಿಕೊಡುವ ಉಪಾಧ್ಯಾಯ ಮಾತ್ರನೆಂದು ತಾವು ಭಾವಿಸಿಕೊಂಡಿರಬಹುದು; ಮಹಾರಾಜಾ ಕಾಲೇಜಿನ ವ್ಯಾಯಾಮ ಶಾಲೆಯ ಕಾರ್ಯದರ್ಶಿಯೆಂದೂ ಅಲ್ಲಿ ಯುವಕರ ಜೊತೆಗೂ ಕೈ ಊರಿ ಗರಡಿಯಲ್ಲಿ ಸಾಧನೆ ಮಾಡುತ್ತೇನೆಂದೂ ಅವರನ್ನು ವ್ಯಾಯಾಮದಲ್ಲಿ ತಿದ್ದಿ, ಸ್ಪರ್ಧೆ ನಡೆಸಿ, ಪರೀಕ್ಷಕನಾಗಿ, ಬಹುಮಾನಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದೇನೆಂದೂ ತಮಗೆ ತಿಳಿಯದಿರಬಹುದು. ನಮ್ಮ ನಾಡಿನ ಪ್ರಾಯದ ಹುಡುಗರು ವ್ಯಾಸಂಗವನ್ನು ಅಲಕ್ಷಿಸಿ ರಾತ್ರಿ ಎಂಟು ಗಂಟೆಯವರೆಗೂ ಕಟ್ಟಡದ ಒಳಗೆ ದೀಪಹಚ್ಚಿಕೊಂಡು ಕುಳಿತು ದಚ್ಚಿಬಾರ, ಬೆರಳು ಬಿಲ್ಲೆಗಳನ್ನು ಆಡಿ ಕ್ರೀಡಾ

ಸಮರ್ಥರಾಗಬೇಕೇ, ಬಯಲಿನಲ್ಲಿ ಆಡಿ ಆಖಾಡದಲ್ಲಿ ಕುಸ್ತಿ ಮಾಡಿ ಪೌರುಷ ಗಳಿಸಬೇಕೇ? ನಮ್ಮ ಹುಡುಗರಲ್ಲಿ ಕೆಲವರಿಗೆ ಈಗ ಸೈನಿಕ ಶಿಕ್ಷಣವನ್ನು ಕೊಡುತ್ತಿದ್ದಾರೆ. ಇದಕ್ಕೆ ಮಾಡುವ ಖರ್ಚು, ಕೊಡುವ ಹೊತ್ತು, ಹಿಡಿಯುವ ಶ್ರಮ ಇವು ದಂಡವಲ್ಲ. ಅವರನ್ನು ನೋಡಿದರೆ ಸಂತೋಷವಾಗುತ್ತದೆ.

ಈ ನನ್ನ ಮನೋವೃತ್ತಿಯನ್ನು ತಾವು puritanism ಎನ್ನುವುದಾದರೆ, (ಅದು 'ವ್ಯಂಗ್ಯ' ವಾಗಲಿ, ವಾಚ್ಯವಾಗಲಿ) ನನಗೆ ಸಂತೋಷವೇಯೆ.

—ದೇಶಬಂಧು, ೧೭—೧—೧೯೪೩.

೪

ಹೈದರಾಬಾದಿನ "ಮಹದೋತ್ಸವ"ದಲ್ಲಿ ನಾನು ಮಾಡಿದ ಭಾಷಣವನ್ನು ಕುರಿತು ತಾವು "ತ್ರಿಕರಣ ಪೂರ್ವಕವಾಗಿ" ಅಭಿನಂದಿಸಿಯೂ—ನಾನು ನಿರೀಕ್ಷಿಸಿದಂತೆ ಅಭಿನಿಂದಿಸಿಯೂ—ಬರೆದ ಲೇಖನಗಳನ್ನು ನೋಡಿದೆ. ಅದರಲ್ಲಿ, ತಾವು ಹೇಳುವಂತೆ, "ಮತಭೇದಕ್ಕೆ ಎಷ್ಟೋ ಅವಕಾಶವಿದೆ" ಎಂಬುದನ್ನು ನಾನು ಚೆನ್ನಾಗಿ ಬಲ್ಲೆ. ಇತರರು ಹೇಳುವುದನ್ನೆಲ್ಲಾ ನಾನು ಒಪ್ಪುತ್ತೇನೆಯೇ? ಹಾಗೆಯೇ ನಾನು ಹೇಳುವುದನ್ನೆಲ್ಲಾ ಇತರರೂ ಒಪ್ಪುವುದಿಲ್ಲ. ದೊಡ್ಡ ವಿಚಾರಗಳಲ್ಲಿ ಯಾರೊಬ್ಬರು ಒಂದು ಸಾರಿ ಒಂದು ಒಂದು ಮಾತನಾಡಿ "ಇದೇ ಕೊನೆಯ ಸಿದ್ಧಾಂತ" ಎನ್ನಬಲ್ಲರು? ಆ ಭಾಷಣವನ್ನು ತಾವು ಈ ದೃಷ್ಟಿಯಿಂದ ವಿಮರ್ಶಿಸಿ, ನನ್ನ ವಾದವನ್ನು ನನ್ನದೇ ಆದ "ವೈಶಿಷ್ಟ್ಯತೆ" ಯಿಂದ ಮುಂದಿಟ್ಟಿದ್ದಾರೆಂದು ಹೇಳಿರುವುದು ಸಹಜವಾಗಿದೆ. ಆದರೆ ಅದನ್ನು ಅಲ್ಲಿಗೆ ಬಿಡದೆ ಮರುದಿನ ಮತ್ತೆ ನನ್ನ ಭಾಷಣದಿಂದ ಅಲ್ಲೊಂದು ಇಲ್ಲೊಂದು ವಾಕ್ಯಗಳನ್ನು ಅವುಗಳ ಪ್ರಕರಣದಿಂದ ತೆಗೆದು ಬೇರೆ ಮಾಡಿಟ್ಟು ಖಂಡಿಸಿರುವುದು, ಹಸುವಿನ ಕೊಂಬು ಗೊರಸುಗಳನ್ನು ತೆಗೆದು ಮುಂದಿಟ್ಟು "ಇಗೊ ನೋಡಿ, ಹಸು ಹಾಯುತ್ತದೆ, ತುಳಿಯುತ್ತದೆ; ಇದೇ ಅದರ ಉಪಯೋಗ" ಎಂದು ಹೇಳುವಂತಿದೆ. 'ಹಿಂದಿ ದ್ವೇಷ, ಸಂಸ್ಕೃತ ವೈರ' ಎಂದು ತಮ್ಮಂತಹವರು ಆಕ್ಷೇಪಿಸುವ

ಕೆಂದು ನನಗೆ ಮೊದಲೇ ತಿಳಿದಿತ್ತು. ಆದ್ದರಿಂದ ಅದನ್ನು ನಾನೇ ತಮಗೆ ಸಿದ್ಧಮಾಡಿಕೊಟ್ಟು ತಮ್ಮ ಕೆಲಸವನ್ನು ಸುಲಭಮಾಡಿದೆ. ಅಪ್ರಿಯವಾದ ಸತ್ಯ, ಸತ್ಯವಾದ ಪ್ರಿಯ, ವಕ್ತಾ ಶ್ರೋತಾ—"ಕೋಪ ವೆಂಬುದನರ್ಥ ಸಾಧನ" ಮುಂತಾದ ನೀತಿ ಪರಂಪರೆಗಳು ನನಗೂ ತಮಗೂ ಇತರರಿಗೂ ಅನ್ವಯಿಸುತ್ತವೆ.

ಸಂಸ್ಕೃತಿಯ ವಿಚಾರ ದೊಡ್ಡದು. ಅದರಲ್ಲಿ ಏಕಾಭಿಪ್ರಾಯವಿಲ್ಲ. ದ್ರಾವಿಡ ಸಂಪರ್ಕದಿಂದ ಆರ್ಯರ ಯಾಜ್ಞಿಕ ಸಂಸ್ಕೃತಿ ಬೇರೆ ಮುಖಕ್ಕೆ ತಿರುಗಿತು ಎಂಬ ಒಂದು ವಾದವೂ ಇದೆ ಎಂದು ಮಾತ್ರ ಇಲ್ಲಿ ಸೂಚಿಸಿದರೆ ಸಾಕು. ಬೇಬಿಲೋನಿರ್ಯ ಮುಂತಾದ ಇನ್ನೂ ಪ್ರಾಚೀನ ತರವಾದ ಸಂಸ್ಕೃತಿಗಳಿಗೆಲ್ಲಾ ಸಂಸ್ಕೃತವೇ ಮೂಲವೇ? ಇದಕ್ಕೆ ತಮ್ಮ ಉತ್ತರವೇನು? ಹಿಂದಿ ಮುಂತಾದ ವಿಚಾರಗಳಿಗೆ ಶ್ರೀ ಜವಹರಲಾಲರ ಪ್ರಮಾಣವನ್ನು ಉದ್ಧರಿಸುವವರು "ರೋಮಕಲಿಪಿ ಭ್ರಾಂತಿ" ಯನ್ನೇಕೆ ಅವರ ಪ್ರಮಾಣದಿಂದ ಕಳೆದುಕೊಳ್ಳುವುದಿಲ್ಲ? ಸಂಸ್ಕೃತದ ವಿಚಾರವನ್ನು ನಾನು ಸ್ವಲ್ಪ ಮಟ್ಟಿಗೆ ಸಂಪ್ರದಾಯ ಪದ್ಧತಿಯನ್ನು ಬಿಟ್ಟು ಚರ್ಚಿಸಿದ್ದೇನೆ. ಚಂದ್ರನಿಗೆ ನಾವು ನೋಡುತ್ತಿರುವುದಕ್ಕಿಂತ ಬೇರೊಂದು ಮುಖವಿದೆ—ಎಂದರೇ ಕೋಪಿಸಿ ಕೊಳ್ಳುವುದೇ? ನಾನು ಸಂಸ್ಕೃತವನ್ನು ಅಲಕ್ಷ್ಯಮಾಡಿಲ್ಲವೆಂಬುದು ೧೨ ೧-೪೭ ರ "ತಾಯಿನಾಡು" ವಿನಲ್ಲಿ ನಾನು ಬರೆದ ಲೇಖನದಿಂದ ಗೊತ್ತಾಗುತ್ತದೆ. ಸಂಸ್ಕೃತದಿಂದ ತಕ್ಕಮಟ್ಟಿಗೆ ಉದರ ಪೋಷಣ ಮಾಡಿಕೊಂಡ ಕನ್ನಡಿಗರು ಕನ್ನಡಕ್ಕೆ ವಾದಿಸುವುದಕ್ಕಿಂತ ಕನ್ನಡದಿಂದಲೇ ಉದರ ಪೋಷಣೆ ಮಾಡಿಕೊಳ್ಳುತ್ತಿರುವವರು ಕನ್ನಡಕ್ಕೆ ವಿರುದ್ಧವಾಗಿ ವಾದಿಸುವುದು ಹೆಚ್ಚು ಶೋಚನೀಯವಾಗಿದೆ.

ನಾನು ಹಿಂದೀ ವೈರಿಯೆಂದು "ಜಗತ್ತಿಗೆಲ್ಲಾ ಚೆನ್ನಾಗಿ ಗೊತ್ತಿದೆ" ಎಂದು ತಾವು ಭರವಸೆಕೊಟ್ಟಿದ್ದೀರಿ. ಆದರೂ ಕನ್ನಡಿಗರು ಎರಡು ಸಾರಿ ನನ್ನನ್ನು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನಕ್ಕೆ ಆರಿಸಿದ್ದನ್ನು ನೋಡಿದರೆ, ಕನ್ನಡನಾಡು ಇನ್ನೂ ಪೂರ್ತಿಯಾಗಿ ಹಿಂದೀಮಯವಾಗಿಲ್ಲವೆಂಬ ಒಂದು ಸಮಾಧಾನ ತಲೆದೋರುತ್ತದೆ. ನನ್ನಂಥ

ನೂರು ಮಂದಿ ಪ್ರತಿಭಟಿಸಿದರೂ ಹಿಂದೀ ರಥವು ಮುಂದೆ ಸಾಗುತ್ತದೆ ಎಂದು ತಾವು ಅಪ್ಪಣೆ ಮಾಡಿದ್ದೀರಿ. ಕನ್ನಡ ಜನ ಸ್ವಲ್ಪ; ಇತರ ಭಾಷೆಯ ಅಭಿಮಾನಿಗಳು ಕನ್ನಡ ನಾಡಿನಲ್ಲೂ, ಭರತಖಂಡದ ಆದ್ಯಂತವೂ, ಬೇಕಾದಷ್ಟು ಜನ ಇದ್ದಾರೆಂಬುದು ತಮ್ಮ ಧೈರ್ಯ. ಕನ್ನಡಿಗರಿಗೆ ಇದರಿಂದ ಅಧೈರ್ಯವಾಗುವುದಾದರೆ ಕನ್ನಡ ನಾಡಿನಲ್ಲಿ ವಿಷವು ಪೂರ್ತಿಯಾಗಿ ವ್ಯಾಪಿಸಿ ಕೈಮೀರಿ ಹೋಗುವುದಕ್ಕಿಂತ ಮುಂಚೆ ತಕ್ಕ ಚಿಕಿತ್ಸೆ ಕೈಗೊಳ್ಳಬೇಕೆಂಬುದನ್ನು ಅವರು ಮನದಟ್ಟುಮಾಡಿಕೊಳ್ಳಬೇಕು. ನಾನು "ಗಾಂಭೀರ್ಯಕ್ಕೆ ಸಲಾಮು" ಹಾಕಿದ್ದರೆ, ಎಲ್ಲಿ ಮತ್ತೇನೂ ಪ್ರಯೋಜನಕ್ಕೆ ಬರುವುದಿಲ್ಲವೋ ಅಲ್ಲಿ! ಪ್ರತಿಪಕ್ಷದವರ ಅಭಿಪ್ರಾಯವನ್ನು ಈಗ ಹತ್ತು ಹನ್ನೆರಡು ವರ್ಷಗಳಿಂದ ಕೇಳುತ್ತಿರುವುದೇ ಆಗಿದೆ. ನನಗೆ "ವಿನಯ ಔದಾರ್ಯಗಳು ಸಹಜ"ವೆಂದು ತಾವು ಆಡಿರುವ ಮರ್ಯಾದೆಯ ಮಾತಿಗೆ ನಾನು ತಮ್ಮನ್ನು ವಂದಿಸುತ್ತೇನೆ. ಆದರೆ ನ್ಯಾಯವಲ್ಲದ್ದನ್ನು ಕಂಡರೆ ಅವು ಮಾಯವಾಗಿ ನಾನು "ತಾಮಸಪ್ರಭು"ವಾಗುವುದೂ ಉಂಟು ಎಂಬುದನ್ನು ನನ್ನನ್ನು ಬಲ್ಲವರು ಬಲ್ಲರು. ಸಾತ್ವಿಕಕ್ಕೆ ಸಾತ್ವಿಕ, ತಾಮಸಕ್ಕೆ ತಾಮಸ.

ಇನ್ನು "ಇಂಗ್ಲಿಷ್ ವ್ಯಾಮೋಹದ" ವಿಚಾರವಾಗಿ ಕನ್ನಡಿಗರಲ್ಲಿ ಒಂದು ಅಂಶವನ್ನು ಅರಿಕೆ ಮಾಡಿಕೊಳ್ಳುತ್ತೇನೆ. ಶ್ರೀ ರವೀಂದ್ರನಾಥ ಠಾಕೂರರವರು ಬರೆದದ್ದು ಅವರ ಮಾತೃಭಾಷೆಯಾದ ಬಂಗಾಳಿಯಲ್ಲಿ; ಭಾಷಾಂತರಮಾಡಿದ್ದು ಇಂಗ್ಲಿಷಿಗೆ. ಹಿಂದಿಯಲ್ಲಿ ಬರೆಯಲೂ ಇಲ್ಲ, ಹಿಂದಿಗೆ ಭಾಷಾಂತರ ಮಾಡಲೂ ಇಲ್ಲ; (ಇತರರು ಮಾಡಿರಬಹುದು. ಅದು ಬೇರೆ ಮಾತು) ಅವರು ಹಿಂದಿ ಕಲಿತಿದ್ದರೋ ಇಲ್ಲವೋ ನಾನರಿಯೆ. ಹಿಂದಿಯಲ್ಲಿ ಬರೆದು ಅಲ್ಲಿಗೆ ಬಿಟ್ಟಿದ್ದರೆ, ಅವರಿಗೆ ಈಗ ಬಂದಿರುವ ಕೀರ್ತಿ ಬರುತ್ತಿರಲಿಲ್ಲ. ವಿಶ್ವವಾದ್ಯಂತವೂ ಅವರ ಗ್ರಂಥಗಳು ಹರಡುತ್ತಿರಲಿಲ್ಲ; ಬಂಗಾಳಿ ಜನಕ್ಕೆ ಅಷ್ಟು ಉಪಯೋಗವೂ ಆಗುತ್ತಿರಲಿಲ್ಲ. ಅವರ ಭಾವನೆಯು ಬಂಗಾಳದಿಂದ ಆರಂಭವಾಗಿ ಆಮೇಲೆ ಭರತಖಂಡವನ್ನು ವ್ಯಾಪಿಸಿಕೊಂಡಿತು. ಆದರೆ ಅಲ್ಲಿಗೆ ನಿಲ್ಲಲಿಲ್ಲ.

ವಿಶ್ವಕ್ಕೂ ವ್ಯಾಪಿಸಿತು. ಕರ್ಣಾಟಕ ದೃಷ್ಟಿ, ಬಂಗಾಳಾ ದೃಷ್ಟಿಗಳು ಸಂಕುಚಿತಗಳಾದರೆ, ಭಾರತೀಯ ದೃಷ್ಟಿಯೂ ಸಂಕುಚಿತವೇ. ಆದ್ದರಿಂದ ಅವರು ವಿಶ್ವಭಾರತಿಯನ್ನು ಸ್ಥಾಪಿಸಿದರು. ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಇಟಲಿ ಮುಂತಾದ ನಾನಾ ದೇಶಗಳಿಂದ ವಿಶ್ವವಿದಿತರಾದ ವಿದ್ವಾಂಸರನ್ನು ಕರೆಸಿ, ಆದರಿಸಿ, ಅವರಿಂದ ಆಗುವಷ್ಟು ಉಪಕಾರವನ್ನು ದೇಶಕ್ಕೆ ನೀಡಿದರು. ಜಪಾನ್ ಮುಂತಾದ ಪರದೇಶಗಳಿಗೆ ಹೋಗಿ ತಮ್ಮ ಸಂದೇಶವನ್ನು ಬೀರಿದರು. ಆದರೆ ಅದನ್ನು ಹಿಂದಿಯಲ್ಲಿ ಮಾಡಲಿಲ್ಲ, ಇಂಗ್ಲಿಷಿನಲ್ಲಿ. ಅವರದು ಪ್ರಾಂತೀಯ ಭಾವನೆಯೇ? ಇಂಗ್ಲಿಷ್ ಮೋಹವೇ? ಅಂಥ ಇಂಗ್ಲಿಷ್ ಮೋಹದಿಂದ ನಮ್ಮಲ್ಲಿ ಲಕ್ಷಕ್ಕೆ ಒಬ್ಬರು ಅವರ ಏಕಾಂಶವನ್ನು ಪಡೆಯಬಲ್ಲವರಾದರೂ ಸಾಕು, ದೇಶವು ಯಾವ ಚಳುವಳಿಯೂ ಇಲ್ಲದೆ ತಾನೇ ಮುಂದಕ್ಕೆ ಬಂದೀತು.

ಏಕೋ ತಮ್ಮ ಮನೋಭಾವವನ್ನು ನೋಡಿ, ಜನರು "ವಿಶ್ವಕರ್ಣಾಟಕ"ಕ್ಕೆ "ವಿಶ್ವ" ಭಾವನೆಯೂ ಬೇಡ, "ಕರ್ಣಾಟಕ"ದ ಭಾವನೆಯೂ ಬೇಡ—ಎಂದುಕೊಳ್ಳುವಂತಾಗಿದೆ.

ತಮ್ಮ 'ಪೊಲಿಟಿಕಲ್ ಹರಟೆಮಲ್ಲ'ರಿಗೆ ಒಂದು ಮಾತು. (ಅಮರಸಿಂಹ ಯಾವ ಪೊಲಿಟಿಕಲ್ಲು? ಪೊಲಿಟಿಕಲ್ ಎಂಬುದು ಯಾವ ಭಾಷೆಯ ಮಾತು? ಇದರಮೇಲೆ "ವ್ಯಾಮೋಹ" ವೇಕೆ?) ಕಲಿಸುವವರೂ ಕಲಿಯುವವರೂ ಶ್ರದ್ಧೆ ವಹಿಸದಿದ್ದರೆ ಅಮರದ ಕಲಿವಿನಿಂದಲೇ-ಈ ಸಂಬಂಧವಾಗಿ ತಮ್ಮ ಹರಟೆಮಲ್ಲರು ಉಪಯೋಗಿಸಿರುವ ಮಾತನ್ನು ನಾನು ಉಪಯೋಗಿಸಲು ನಾಚಿಕೆಯಾಗುತ್ತದೆ—ಶುದ್ಧವಾದ ಉಚ್ಚಾರಣೆಯೂ ಬರವಣಿಗೆಯೂ ಬಂದೀತೆಂಬ ಭರವಸೆಯಿಲ್ಲ. ಹಿಂದೆ ಬಾಲಕರ ಪಾಠಶಾಲೆಗಳಲ್ಲಿ ಅಮರ ಹೇಳಿಕೊಡುತ್ತಿದ್ದಾಗ "ಯಸ್ಯಗ್ನಾನ ದಯಾಶಿಂದೋ ರಗಾದಸ್ಯಾ ನಗಾಗುಣಾ" ಎಂದು ಹೇಳುತ್ತಿದ್ದದ್ದನ್ನು ನಾನು ಕೇಳಿದ್ದೇನೆ. ಅದಿರಲಿ; ಓದುವುದನ್ನು—ಕನ್ನಡವಾಗಲಿ, ಇಂಗ್ಲಿಷಾಗಲಿ, ಸಂಸ್ಕೃತವಾಗಲಿ-ಗಮನವಿಟ್ಟು ಓದಬೇಕು, ಕಣ್ಣಿಟ್ಟು ನೋಡಬೇಕು, ಲಕ್ಷ್ಯವಿಟ್ಟು ಬರೆಯಬೇಕು, ಅದನ್ನು

ಮಾಡುತ್ತಿಲ್ಲ, ಎಂದು ನಾನು ಹೇಳಿದರೆ ಅದು ತಮ್ಮ ಗಮನಕ್ಕೆ ಬರಲಿಲ್ಲ. ಶಾಕುಂತಲ, ದುರ್ಯೋಧನ, ರಾಮಾಶ್ವಮೇಧ ಎಂಬ ಹೆಸರುಗಳನ್ನು ಅಮರ ಓದಿ ಕಲಿಯಬೇಕಾಗಿಲ್ಲ; ಅವು ಪ್ರಸಿದ್ಧವಾದ ಹೆಸರುಗಳು; ಪಠ್ಯಪುಸ್ತಕಗಳ ಮೇಲೆ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಬರೆದಿದ್ದರೂ, ಒಳಗೆ ಹತ್ತಾರು ಕಡೆಗಳಲ್ಲಿ ಬಂದಿದ್ದರೂ, ವಿದ್ಯಾರ್ಥಿಗಳು ಇವುಗಳನ್ನು ಸರಿಯಾಗಿ ಉಚ್ಚರಿಸುವುದಿಲ್ಲ, ಬರೆಯುವುದಿಲ್ಲ. ಈ ಅಲಕ್ಷ್ಯವು ವ್ಯಾಸಂಗದ ಆದ್ಯಂತಕ್ಕೂ ಅನ್ವಯಿಸುತ್ತದೆ; ಜೀವನಕ್ಕೇ ಅನ್ವಯಿಸುತ್ತದೆ. ಹಿಂದಿನ ವೈದಿಕ ಜೀವನದಲ್ಲಿ ಇದ್ದ ನಿಯಮಪಾಲನೆಯು ಅವರ ಉಚ್ಚಾರಣೆ ಪಠನ ಲೇಖನಗಳಲ್ಲಿಯೂ ಕಂಡು ಬರುತ್ತಿತ್ತು. ಒಂದು ವರ್ಣದಲ್ಲಾದರೂ ಸ್ವರದಲ್ಲಾದರೂ ತಪ್ಪಾಗಬಾರದೆಂಬ ಕಠಿಣ ನಿಯಮವನ್ನು ಅವರು ಅಂಗೀಕರಿಸಿ ಪಾಲಿಸಿದ್ದರಿಂದ ವೇದವು ಶುದ್ಧವಾಗಿ ಉಳಿದಿದೆ-ಅಮರವನ್ನು ಕಲಿತುಕೊಂಡದ್ದರಿಂದಲ್ಲ. ಘನಪಾಠಿಗಳೆಲ್ಲ ಅಮರವನ್ನು ಒಪ್ಪಿಸಬಲ್ಲವರಲ್ಲ.

ಕೆಲವು ಪತ್ರಿಕೆಗಳಲ್ಲಿ ಬರುವ ವಿಚಿತ್ರ ಶಬ್ದ ರೂಪಗಳೂ ಮೇಲೆ ಕಂಡ ಲೋಪಕ್ಕೆ ಒಂದು ಕಾರಣವೆಂದು ಇಲ್ಲಿ ವಿಷಾದದಿಂದ ಹೇಳಬೇಕಾಗಿದೆ. ೧೬-೧-೧೯೪೨ರ..........ದಲ್ಲಿ ಬಂದಿರುವ 'ವಾಂಜ್ಞಯ' ಶಬ್ದವನ್ನೇ ನೋಡಿ! ಇದರ ಉಚ್ಚಾರಣೆ ಸಾಧುತ್ವಗಳು ಹೇಗೆ?

—ವಿಶ್ವಕರ್ಣಾಟಕ, ೨೨—೧—೧೯೪೨

೫

ಶ್ರೀವರ್ಮ....ಗಳು ಕನ್ನಡದ ಅಭಿಮಾನದ ವಿಷಯವಾಗಿ ಒಂದು ಅನುಮಿತಿಯನ್ನು ಆಕಾರಗೊಳಿಸಿ ಅದರಲ್ಲಿ ಸಂಸ್ಕೃತದವರು ಹೇತ್ವಾಭಾಸವನ್ನು ತೋರಿಸುತ್ತಾರೆ ಎಂದಿದ್ದಾರೆ. ಹೇತ್ವಾಭಾಸವಿರುವುದು ಅವರು ರೂಪುಗೊಟ್ಟಿರುವ ತರ್ಕದಲ್ಲಿ; ನನ್ನ ಹೇಳಿಕೆಯಲ್ಲಲ್ಲ. ಕನ್ನಡದವರು ಕನ್ನಡದ ಅಭಿಮಾನವನ್ನು ಪ್ರತ್ಯಕ್ಷ ಪ್ರಮಾಣದಿಂದಲೇ ತಿಳಿದುಕೊಳ್ಳುತ್ತಾರೆ. ಅದಕ್ಕೆ ಅನುಮಾನವೇಕೆ? ಕುದುರೆಯನ್ನು ಎದುರಿಗೇ ನಿಲ್ಲಿಸಿಕೊಂಡು ಅದಕ್ಕೆ ಹಲ್ಲು ಇದೆಯೇ ಇಲ್ಲವೇ ಎಂದು ಯಾರೋ ತರ್ಕಿಸಿದರೆಂದು ಒಂದು ಕಥೆಯಿದೆ. ಇದು ಹಾಗಾಯಿತು.

ಸಂಸ್ಕೃತ ಸಾಹಿತ್ಯದ ಮಹಿಮೆಯನ್ನು ನಾನು ಗ್ರಹಿಸಿದಮಟ್ಟಿಗೆ ನನ್ನ ಗ್ರಂಥಗಳಲ್ಲಿ ತಿಳಿಸಿದ್ದೇನೆ. (ಅದನ್ನು ನಾನು ವಿಕ್ಟರ್ ಕಸಿನ್, ಷೋಪನ್ಹಾರ್ ಮುಂತಾದವರಿಂದ ಅರಿಯಬೇಕಾಗಿರಲಿಲ್ಲ.) ನನಗಿಂತ ಚೆನ್ನಾಗಿ ಗ್ರಹಿಸಿದವರು ಅವಕ್ಕಿಂತ ಉತ್ತಮವಾದ ಗ್ರಂಥಗಳನ್ನು ಬರೆದು ಸಂಸ್ಕೃತ ಕನ್ನಡಗಳಿಗೆ ಉಪಕಾರ ಮಾಡಲಿ.

ಸಂಸ್ಕೃತವು ಇತರ ದೇಶಗಳಲ್ಲಿ ಬದುಕ ಬಲ್ಲದು, ಎಂದರೆ ನಮ್ಮ ದೇಶದಲ್ಲಿ ಹೋಗಲಿ ಎಂದರ್ಥವೇ? ಇದು ಅಪಾರ್ಥ. ಸಂಸ್ಕೃತದಲ್ಲಿ ಸಾರ್ವಕಾಲಿಕವಾಗಿ ಆಸಕ್ತಿ ಇರುವ ಜನ ಭರತಖಂಡದ ಹೊರಗೂ ಇದ್ದಾರೆ, ಇರುತ್ತಾರೆ ಎಂಬುದಿಷ್ಟೇ ನನ್ನ ವಿವಕ್ಷೆ. ಆ ದೃಷ್ಟಿಯಿಂದ, ಕನ್ನಡಕ್ಕೆ ಈಗ ಇರುವ ದುರ್ಬಲತೆಯನ್ನೂ ಅಲ್ಪವ್ಯಾಪ್ತಿಯನ್ನೂ ಕನ್ನಡಿಗರಿಗೆ ತೋರಿಸಿ ಕೊಡಬೇಕೆಂಬುದಿಷ್ಟೇ ನನ್ನ ಉದ್ದೇಶ. ಹೀಗೆಂದರೆ, ಸಂಸ್ಕೃತವನ್ನು ನಾವು ಓದಬಾರದೆಂದು ಅರ್ಥವೇ? ನಾವು ಇನ್ನೂ ಹೆಚ್ಚು ಸಂಖ್ಯೆಯಲ್ಲಿ, ಹೆಚ್ಚು ಪ್ರಮಾಣದಲ್ಲಿ, ಸಂಸ್ಕೃತವನ್ನು ಓದಬೇಕೆಂಬುದು ನನ್ನ ಸೂಚನೆಯೆಂದು ಮತ್ತೆಮತ್ತೆ ವಿವರಿಸಿ ಹೇಳಿದ್ದೇನೆ.

ರವೀಂದ್ರನಾಥ ಠಾಕೂರರು ಲೋಕ ಪ್ರಸಿದ್ಧರೆಂದು ಅವರ ಉದಾಹರಣೆಯನ್ನು ಕೊಟ್ಟೆ. ಅವರ ಭಾಷಾಪ್ರೇಮವನ್ನು ನೆನೆದವರೂ ಅವರಂತೆ ಪ್ರಸಿದ್ಧರಾಗುವುದಾದರೆ ಪ್ಲೇಟೋ, ಶಂಕರ, ಬುದ್ಧ, ಗಾಂಧಿ, ಪಂಪ, ರನ್ನ, ಲಕ್ಷ್ಮೀಶ ಇವರ ಉದಾಹರಣೆಗಳನ್ನು ಕೊಟ್ಟವರೂ ಅವರೆಲ್ಲರಷ್ಟು ಪ್ರಸಿದ್ಧರಾಗಬೇಕಾಯಿತು. ಪ್ರಸಿದ್ಧಿ ಎಷ್ಟು ಸುಲಭ! ಕ್ಷಿಪ್ರದಲ್ಲಿಯೇ ಉದ್ಯೋಗದಿಂದ ನಿವೃತ್ತನಾಗಲಿರುವವನಿಗೆ ಇಂಥ ಅಗ್ಗವಾದ ಪ್ರಸಿದ್ಧಿಯಿಂದ ಆಗಬೇಕಾದದ್ದೇನೂ ಇಲ್ಲ.

ಪಂಪರನ್ನರು ಕನ್ನಡದಲ್ಲಿ ಕಾವ್ಯ ಬರೆಯಲು ಸಂಸ್ಕೃತ ಸಾಹಿತ್ಯದ ಸ್ಫೂರ್ತಿಯೆಷ್ಟು ಕಾರಣವೋ ಕನ್ನಡಿಗರ ಮೇಲಣ ಪ್ರೇಮವು ಅದಕ್ಕಿಂತ ಹೆಚ್ಚಿನ ಕಾರಣ. ಈ ಪ್ರೇಮದಿಂದ ಶ್ರೀಮಾನ್....ಗಳು "ನಮ್ಮ ಮಾತೃ ಭಾಷೆಯಾದ ಕನ್ನಡಕ್ಕೆ ಉತ್ತೇಜನವು ಆವಶ್ಯಕ. ಕನ್ನಡಕ್ಕೂ ಔನ್ನತ್ಯ ಸಂಪಾದನೆಯಾಗಬೇಕು" ಎಂದು ಹೇಳಿ ನನಗೆ

ಅನುಮೋದನೆ ಕೊಟ್ಟಿರುವುದಕ್ಕಾಗಿ ನಾನು ಕನ್ನಡಿಗರೊಡನೆ ಅವರನ್ನು ವಂದಿಸುತ್ತೇನೆ.

ಇನ್ನು ಮುದ್ರಣದ ತಪ್ಪುಗಳ ವಿಚಾರ. ಮುದ್ರಣಕಾರ್ಯದಲ್ಲಿ ನನಗೂ ಸ್ವಲ್ಪ ಅನುಭವವಿದೆ. ಈಗ ಹಲವು ವರ್ಷಗಳಿಂದ ವರ್ಷಕ್ಕೆ ಮುನ್ನೂರು ದಿನವಾದರೂ ನಾನು ಮುದ್ರಣದ ಕರಡು ಹಾಳೆಗಳನ್ನು ತಿದ್ದುತ್ತೇನೆ. ಈ ವರ್ಷದಲ್ಲಿಯೇ ಸುಮಾರು ಆರು ತಿಂಗಳಲ್ಲಿ ಏಳುನೂರು ಪುಟಗಳನ್ನು ಅಚ್ಚುಮಾಡಿಸಿದ್ದೇನೆ. ಆದ್ದರಿಂದ ಯಾವುದು ಮುದ್ರಣದ ತಪ್ಪು, ಯಾವುದು ಅಲ್ಲ, ಎಂಬ ವಿಚಾರದಲ್ಲಿ ಶ್ರೀಮಾನ್....ಗಳ ಮಾತಿಗಿಂತ ನನ್ನ ಮಾತನ್ನು ಜನ ಹೆಚ್ಚಾಗಿ ನಂಬಿಯಾರೆಂದು ನಾನು ನಿರೀಕ್ಷಿಸುತ್ತೇನೆ. 'ಪಶು, ಪಶ್ಯಾಂತಿ' 'ಭಾರತೇಶ ವೈಭವ' ಇವು ಮುದ್ರಣದ ತಪ್ಪುಗಳು. (ಪ್ರಾಯಶಃ ಕರಡು ತಿದ್ದುವವರಿಗೆ ಅರ್ಥವಾಗದಿರುವುದೂ ಕಾರಣ.) 'ವೈಶಿಷ್ಟ್ಯತೆ' ನನ್ನದಲ್ಲ. ಅದನ್ನು ಅನುವಾದ ಚಿಹ್ನೆಯಲ್ಲಿ ಹಾಕಿದ್ದು ಶ್ರೀ....ಗಳ ಕಣ್ಣಿಗೆ ಬೀಳಲಿಲ್ಲವೋ ಅರ್ಥವಾಗಲಿಲ್ಲವೋ? 'ವೈಶಿಷ್ಟ್ಯತೆ'ಯೂ ನನ್ನದಲ್ಲ, 'ಮಹದೋತ್ಸವ'ವೂ ನನ್ನದಲ್ಲ. ಇವೂ ಮುದ್ರಣದ ತಪ್ಪುಗಳೋ? ಇವುಗಳ ಸಾಧುತ್ವ ಹೇಗೆ? ಇವೆರಡೂ....ದ ಒಂದು ಅಗ್ರಲೇಖನದಲ್ಲಿಯೇ ಬಂದವು. 'ವಾಂಙ್ಮಯ' ವು ಈಚೆಗೆ ಎರಡು ದಿನದ ಪತ್ರಿಕೆಗಳಲ್ಲಿ 'ವಾಙ್ಮಯ' 'ವಾಗ್ಮಯ' 'ವಾಂಗ್ಮಯ' ಎಂಬ ರೂಪಗಳನ್ನು ತಾಳಿದೆ. ಸರಿಯಾದ ರೂಪ ಎಲ್ಲಿಯೂ ಬಂದಿಲ್ಲ. ಹೀಗಿರುವುದರಿಂದ ಕೆಲವು ಕನ್ನಡ ಪತ್ರಿಕೆಗಳಲ್ಲಿ ಬರುವ ರೂಪಗಳೂ ಬರೆವಣಿಗೆಯ ತಪ್ಪಿಗೆ ಕಾರಣವೆಂದು ನಾನು ಹೇಳಿದ್ದು ಸುಳ್ಳೇ?

ನಾನು ಅಶಕ್ತನೆಂದು ಒಪ್ಪಿಕೊಳ್ಳುತ್ತೇನೆ. ವಾದಕ್ಕೆ ಇಳಿಯುವುದೇ ಒಂದು ಅಶಕ್ತಿಯ ಲಕ್ಷಣ. ಏನು ಮಾಡುವುದು? ಊಟ ಮಾಡಿದಮೇಲೆ ಕೈತೊಳೆದುಕೊಳ್ಳಬೇಕಲ್ಲ!

ನನಗೆ "ಯಾರೂ ಪ್ರತಿಕಕ್ಷಿಗಳಾಗುವ ಧೈರ್ಯವಿಲ್ಲ" ಎಂಬ ಮಾತು ಸುಳ್ಳೆಂದು ಶ್ರೀಮಾನ್....ಗಳ ಲೇಖನವೇ ಸಾರುತ್ತದೆ. ಈ ಮಾತನ್ನು ನಾನು ಒಪ್ಪುವುದೂ ಇಲ್ಲ; ಮೆಚ್ಚುವುದೂ ಇಲ್ಲ. ಅಸತ್ಯ

ಅನ್ಯಾಯಗಳನ್ನು ಪ್ರತಿಭಟಿಸಲು, ಧೈರ್ಯ ಬೇಕೇಬೇಕು. ಈಚಿಗೆ ಕೆಲವು ವರ್ಷಗಳಿಂದ ದೇಶದಲ್ಲಿ ಬೇಕಾದಷ್ಟು ಧೈರ್ಯ ಬಂದಿದೆ; ದೊಡ್ಡವರಿಗಿಂತ ಚಿಕ್ಕವರಿಗೆ ಬಂದಿದೆ. ಯಾರಿಗಾದರೂ ಅಧೈರ್ಯ ಬಂದಿದ್ದರೆ ಅದು ಕನ್ನಡದ ಪರವಾಗಿ ಎರಡು ಮಾತನ್ನಾಡಬೇಕಾದ ಕನ್ನಡಿಗರಿಗೆ!

ಈಗ ಇಪ್ಪತ್ತೇಳು ವರ್ಷಗಳಿಂದ ನಾನು "ಒಳ್ಳೆಯ ದಾರಿ" ಯಲ್ಲಿಯೇ ಹೋಗುತ್ತಿದ್ದೇನೆಂದು ತಿಳಿದುಕೊಂಡಿದ್ದೇನೆ. ಅಡ್ಡದಾರಿಗೆ ಹೋದರೆ ನನ್ನನ್ನು ಎಳೆದು ಬುದ್ಧಿ ಹೇಳುವ ಹಿರಿಯರಿದ್ದಾರೆ. ಹಾಗೂ, ಅವಿವೇಕವಾದರೆ ಇದುವರೆಗೆ ನಾನು ಮಾಡಿರುವ ಅಲ್ಪಸ್ವಲ್ಪ ಸೇವೆಯನ್ನು ಮನಸ್ಸಿಗೆ ತಂದುಕೊಂಡು ಕನ್ನಡಿಗರು ನನ್ನ ಲೋಪಗಳನ್ನು ಕಡೆಗಣಿಸುತ್ತಾರಾಗಿ ಭಾವಿಸುತ್ತೇನೆ.

ಕನ್ನಡ ಪತ್ರಿಕೆಗಳಲ್ಲಿಯೂ ಅವು ಮಾಡುತ್ತಿರುವ ಕಾರ್ಯದಲ್ಲಿಯೂ ನನಗೆ ಗೌರವವಿದೆ. ಅವುಗಳ ಬರವಣಿಗೆಯನ್ನು ವಿದ್ಯಾರ್ಥಿಗಳ ಅಭ್ಯಾಸಲೇಖನದಂತೆ ಕಾಣುವುದು ನನಗೆ ಸುತರಾಂ ಅಪ್ರಿಯವಾದದ್ದು. ಆದ್ದರಿಂದ ಇದನ್ನು ನಾನು ಮುಂದುವರಿಸುವುದಿಲ್ಲ.

—ವಿಶ್ವಕರ್ಣಾಟಕ ೧೧-೩-೧೯೪೭

೬

ಶ್ರೀಮರ್ಾ....ರೂ, ಅವರ ಮಿತ್ರರೂ ಕನ್ನಡದಲ್ಲಿ ಬರೆದದ್ದರಿಂದ, ಅವರನ್ನು ಕನ್ನಡ ಮಹಾಜನದ ಪ್ರತಿನಿಧಿಗಳೆಂದು ನಾನು ಸಮಾಧಾನವನ್ನೂ ವಿವರಣೆಯನ್ನೂ ಬರೆಯುತ್ತಿದ್ದೇನೆ. ನನ್ನನ್ನು ಸಮ್ಮೇಳನಾಧ್ಯಕ್ಷನನ್ನಾಗಿ ಆರಿಸಿ ಗೌರವಿಸಿದ ಕನ್ನಡ ಮಹಾಜನಕ್ಕೆ ಬರುವ ಸಂದೇಹವನ್ನೂ ತಪ್ಪು ತಿಳಿವಳಿಕೆಯನ್ನೂ ಹೋಗಲಾಡಿಸುವುದು ನನ್ನ ಕರ್ತವ್ಯ.

ಈಗ ಚರ್ಚೆಯು ಮುಖ್ಯ ವಿಷಯವನ್ನು ಬಿಟ್ಟು ಅಮುಖ್ಯವಾದ ವಿವರಗಳಿಗೂ ಮರ್ಯಾದೆ ಮೀರಿದ ವೈಯಕ್ತಿಕ ದೂಷಣೆಗೂ ತಿರುಗಿದೆ. ಇದರಿಂದ ಕನ್ನಡ ಜನಕ್ಕೇನೂ ಉಪಯೋಗವಿಲ್ಲ. ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನು ಅಪಾದಿತನಂತೆ ಕಂಡು ಸಂಧಿ ಸಮಾಸಗಳ

ಮೇಲೆ ಪ್ರಶ್ನೆಗಳನ್ನು ಕೇಳುವುದು ಮತ್ತು ಅದಕ್ಕೆ ಅವರು ಉತ್ತರ ಕೊಡುವುದು ಮರ್ಯಾದೆಯೆಂದೂ ಆವಶ್ಯಕವೆಂದೂ...........ಭಾವಿಸಿರಬಹುದು. ನಾನು ಹಾಗೆ ತಿಳಿದುಕೊಂಡಿಲ್ಲ. ನನಗೆ ಆ ಗೌರವಸ್ಥಾನವನ್ನು ಕೊಟ್ಟ ಕನ್ನಡಿಗ ಮಹಾಜನದ ಉದ್ದೇಶವಂತೂ ಅದಲ್ಲ. ಸಂಧಿ ಸಮಾಸಗಳನ್ನು ಕೇಳುವುದಕ್ಕೆ ಹೇಳುವುದಕ್ಕೆ ಬೇರೆ ಸ್ಥಳಗಳಿವೆ. ದಿನಪತ್ರಿಕೆ ಅದಕ್ಕೆ ಸ್ಥಳವಲ್ಲ. ಅಲ್ಲದೆ ....ಯವರು ಈಗ "ಭೂತ" ಪ್ರೇತಗಳನ್ನು ಬೇರೆ ಎಬ್ಬಿಸಿದ್ದಾರೆ. ಅವನ್ನು ದಯವಿಟ್ಟು ಅವರೇ ಇಟ್ಟುಕೊಳ್ಳಲಿ. ಅವು ನನಗೆ ಬೇಡ, ಕನ್ನಡ ಜನಕ್ಕೂ ಬೇಡ!

ಭಾಷಾಂತರ ಮೂಲಗಳ ವಿಚಾರವು ಚರ್ವಿತಚರ್ವಣ. ಅದರ ಓದಿನ ಪ್ರಯೋಜನವು ಅಧಿಕಾರ ಆವಶ್ಯಕತೆ ಮುಂತಾದವುಗಳ ಮೇಲೆ ಹೋಗುತ್ತದೆ. ಹೈಸ್ಕೂಲಿನ ಹುಡುಗರೂ, ರಘುವಂಶದ ವಿದ್ಯಾರ್ಥಿಗಳೂ ಇಲ್ಲಿ ಪ್ರಸಕ್ತರಲ್ಲ. ಕನ್ನಡಕ್ಕೆ ಭಾಷಾಂತರಗಳು ಸಂಸ್ಕೃತದಿಂದ ಮಾತ್ರವಲ್ಲ, ಮಿಕ್ಕ ಭಾಷೆಗಳಿಂದಲೂ ಬೇಕು. ಅಕ್ಷರಸ್ಥರೇ ಅಲ್ಪ ಸಂಖ್ಯೆಯಲ್ಲಿರುವಾಗ, ಎಲ್ಲರೂ ಎಲ್ಲ ಭಾಷೆಗಳಲ್ಲಿಯೂ ಮೂಲವನ್ನೇ ಓದುವುದಕ್ಕಾಗುತ್ತದೆಯೇ? ಮೋಲಿಯರ್, ಇಬ್ಸೆ, ಗಯಟೆ ಮುಂತಾದವರ ಗ್ರಂಥಗಳನ್ನು ಪಾಶ್ಚಾತ್ಯರು ಕೂಡ ಎಲ್ಲರೂ ಮೂಲದಲ್ಲಿ ಓದುತ್ತಾರೆಯೆ? ಅದು ಸಾಧ್ಯವೇ? ಭಾಷಾಂತರಗಳೆಂದರೆ ಆ ಹೆಸರಿಗೆ ಯೋಗ್ಯತೆ ಇರುವ ಗ್ರಂಥಗಳು.

ನಾನು ವಿಲ್ಸನ್ ಪಂಡಿತನ ಭಾಷಾಂತರವನ್ನು ಉದಾಹರಿಸಿದ್ದು, ಆತನು ಬಹುಮಟ್ಟಿಗೆ ಸಾಯಣ ಭಾಷ್ಯವನ್ನು ಅನುಸರಿಸಿರುವುದರಿಂದ. ರಾಥ್, ಗ್ರಾಸ್ಮನ್ ಮುಂತಾದವರ ಸಹಾಯದಿಂದ ವಿಮರ್ಶಾತ್ಮಕವಾದ ಅಭಿಪ್ರಾಯ ಪಡೆಯುವುದು ಸಾಯಣ ಭಾಷ್ಯವನ್ನು ಮಾತ್ರ ಓದಬಲ್ಲ ಸಂಸ್ಕೃತ ಪಂಡಿತರಿಗೆ ಎಷ್ಟೇ ಕಾಲ ಕೊಡಲಿ, ಸಾಧ್ಯವಲ್ಲ. ಅಷ್ಟರ ಮಟ್ಟಿಗೆ ಅವರ ತಿಳಿವಳಿಕೆ ಅಸಮಗ್ರವೇ ಆಗುತ್ತದೆ.

ಭಾಷಾಂತರಕ್ಕೆ ನಿಲುಕದ ಉದ್ಗ್ರಂಥಗಳನ್ನು ಭಾಷಾಂತರದಲ್ಲಿ ಓದುವುದು ಹೇಗೆ? ಅವು ಬೇಕಾದವರು ಅವನ್ನು ಮೂಲದಲ್ಲಿ ಓದಬೇಕೆಂಬುದು ಸ್ಪಷ್ಟವಾಗಿದೆ. ಇಂಥವರಿಗಾಗಲಿ, ಇತರರಿಗಾಗಲಿ,

ಸಂಸ್ಕೃತವು ಬೇಡವೆಂದು ನಾನು ಹೇಳಿದ್ದೇನೆಯೋ? ಭಾಷಾಂತರಗಳ ಪ್ರಯೋಜನಗಳನ್ನು ಹೇಳುತ್ತಿದ್ದೇನೆಯೋ? ಸಾಮಾನ್ಯ ವಿದ್ಯಾವಂತರು ಒಂದು ತಿಂಗಳಲ್ಲಿ ಓದಿ ಮುಗಿಸಬಹುದಾದಷ್ಟು ವೇದ ಶಾಸ್ತ್ರಗಳ ಭಾಷಾಂತರಗಳನ್ನು ಕನ್ನಡಿಗರು ಓದಿ ತಿಳಿದುಕೊಂಡರೆ ಸಾಕು. ಒಂದೊಂದು ದೊಡ್ಡ ಭಾಷೆಗೂ ಇಷ್ಟಾದರೆ ಅವರ ತಿಳಿವಳಿಕೆ ಬೇಕಾದಷ್ಟು ವಿಸ್ತಾರವಾಯಿತು.

ಭಾಷಾಂತರರೂಪವಾದ ಪರಕಾಯ ಪ್ರವೇಶದಿಂದ ಜೀವವು ಭೂತವಾಗಬೇಕಿಲ್ಲ. ಅದು ಪ್ರವೇಶಮಾಡುವ ಕಾಯದಮೇಲೆ ಹೋಗುತ್ತದೆ. ರವೀಂದ್ರನಾಥರ ಕೆಲವು ಗ್ರಂಥಗಳು ಬಂಗಾಳಿಗಿಂತ ಇಂಗ್ಲಿಷಿನ ಭಾಷಾಂತರದಲ್ಲಿಯೇ ಚೆನ್ನಾಗಿವೆ. ಶಂಕರಾಚಾರ್ಯರು ಪರಕಾಯ ಪ್ರವೇಶ ಮಾಡಿದಾಗ ಭೂತವಾದರೆಂದು ಎಲ್ಲಾದರೂ ಹೇಳಿದೆಯೇ?

ದರ್ಶನದಲ್ಲಿ ವಿಶ್ವವಿದ್ಯಾನಿಲಯದ ಪ್ರಶಸ್ತಿ ಪಡೆದವರು ಪ್ಲೇಟೋ, ಡೇಕಾರ್ಟೆ, ನೀಚೆ, ಕ್ರೋಚೆ ಮುಂತಾದವರ ಗ್ರಂಥಗಳನ್ನೆಲ್ಲಾ ಮೂಲದಲ್ಲಿಯೇ ಓದುತ್ತಾರೆಯೇ? ಭಾರತೀಯ ದರ್ಶನಗಳನ್ನು ತಾನೇ ಅವರಲ್ಲಿ ಎಷ್ಟು ಜನ ಮೂಲದಲ್ಲಿ ಓದಿರುತ್ತಾರೆ? ಅವರ ಓದಿಗೆ ಬೆಲೆಯಿಲ್ಲವೇ? ಇದೆ ಎಂದು ನಾನು ತಿಳಿದಿದ್ದೇನೆ.

ಶ್ರೀಮಾನ್....ರವರು ಭಾಷಾಂತರದ ಉಪಯೋಗವನ್ನು ಕುರಿತು ಷೆಲ್ಲಿ ಬ್ರಾಡ್ಲೆಯವರ ಪ್ರಮಾಣವನ್ನು ಉದ್ಧರಿಸಿದ್ದಾರೆ. (ಅದು ಭಾವಗೀತೆಗೆ ಮಾತ್ರ ಅನ್ವಯಿಸುತ್ತದೆ) ಅವಕ್ಕೆ ಪ್ರತಿಯಾಗಿ ನಾನು ಮ್ಯಾಥ್ಯೂ ಆರ್ನಾಲ್ಡ್, ಕೀಟ್ಸ್ ಮುಂತಾದವರ ಅಭಿಪ್ರಾಯವನ್ನು ಹೇಳಬಲ್ಲೆ. ಇತರರು ಯಾರು ಏನು ಬೇಕಾದರೂ ಹೇಳಲಿ, ನಮ್ಮ ಅನುಭವವೇನು? ಅದು ನಮ್ಮ ಜೀವನಕ್ಕೆ ಎಷ್ಟರಮಟ್ಟಿಗೆ ಅನ್ವಯಿಸುತ್ತದೆ? ನಮ್ಮ ಎರಡು ಕೈಯಲ್ಲಿ ಹತ್ತು ಬೆರಳುಗಳಿವೆ ಎಂದರೆ ಅದಕ್ಕೆ ಇಂಗ್ಲೆಂಡಿನಲ್ಲಿ ನೂರಿನ್ನೂರು ವರ್ಷಗಳ ಕೆಳಗೆ ಜೀವಿಸಿದ್ದ ಪ್ರಾಣಿಶಾಸ್ತ್ರಜ್ಞರ ಪ್ರಮಾಣವೇನು ಬೇಕಿಲ್ಲ.

ವಕ್ತೃತಾತ್ಪರ್ಯವನ್ನು ಸರಿಯಾಗಿ ಗ್ರಹಿಸದೆ, ಅಡಿಲ್ಲದ

ಮಾತನ್ನು ಆರೋಪಿಸುತ್ತ ಹೋದರೆ, ಫಲಿತವಾಗುವುದು, "ವ್ಯಾಹತಿ ಸಮೂಹ" ಒಂದೇಯೇ? ಯಾವ ದೋಷಸಮೂಹ ಬೇಕಾದರೂ ಆಗಬಹುದು. ಶ್ರೀಮಾನ್....ರವರ ಬರವಣಿಗೆಯು ನಿರ್ದುಷ್ಟವಾದ ಬರವಣಿಗೆಗೆ ಮೇಲ್ಪಂಕ್ತಿಯಾಗಲಿ ಎಂದು ನಾನು ಹಾರೈಸುತ್ತೇನೆ.

ತಾನಾಗಿ ಬರುವುದು ತಮ್ಮ ಭಾಷೆ, ಪ್ರಯತ್ನಪೂರ್ವಕವಾಗಿ ಕಲಿತು ಬರುವುದು ಅನ್ಯಭಾಷೆ. ಇಂಗ್ಲಿಷು ಸಂಸ್ಕೃತ ಎರಡೂ ಹೀಗೆ ಕಲಿತು ಬರುವವುಗಳೇಯೆ—ಕನ್ನಡಿಗರಿಗೆ, ತೆಲುಗರಿಗೆ, ತಮಿಳರಿಗೆ. ಸಂಸ್ಕೃತವು ರಾಷ್ಟ್ರಭಾಷೆಯಾಕಾಗಬಾರದೆಂಬ ವಿಚಾರದಲ್ಲಿ ಅವರು ನನ್ನ ಹಿಂದೀಭಾಷಾ 'ಮಾತ್ಸರ್ಯ'ವನ್ನು ಪ್ರಸ್ತಾಪಿಸಿರುವುದು ಅಪ್ರಕೃತ. ಆ ಮಾತಿಗೆ ನಾನು ಪ್ರತಿಯಾಗಿ "ನಿಮ್ಮಂಥವರಿಗೆ ಸಂಸ್ಕೃತವೂ ಬೇಕಿಲ್ಲ, ಹಿಂದಿ ಒಂದಿದ್ದರೆ ಸಾಕಾಗಿದೆ! ನಾನು ಹಿಂದಿಯಿಂದ ಬಾಧಕವೆಂದು ಹೇಳಿರುವುದರಿಂದ ನಿಮಗೆಲ್ಲರಿಗೂ ಕೋಪ! ಅಲ್ಲವೆ?" ಎನ್ನಬೇಕಾಗುತ್ತದೆ.

ಸಂಸ್ಕೃತ ಇಂಗ್ಲಿಷ್‌ಗಳ ಸಂಬಂಧದಲ್ಲಿ "ಕರ್ನಾಟಕ-ಮೂಲಾದರ್ಶ" ಕಾರರನ್ನೂ ಡಾ|| ವೆಂಕಟಸುಬ್ಬಯ್ಯನವರನ್ನೂ ಮನಸ್ಸಿನಲ್ಲಿಟ್ಟುಕೊಂಡಿದ್ದರಿಂದಲೇ ನಾನು "ಬಹುಮತ" ವೆಂದು ಬರೆದದ್ದು. "ಬಹುಮತ" ವೆಂದರೆ "ಸರ್ವಸಮ್ಮತ" ವೆಂದರ್ಥವಲ್ಲ. ಬಹುವಿದ್ವಾಂಸರ ಮತವೂ ಪ್ರಮಾಣವಲ್ಲದಿದ್ದರೆ ಮತ್ತೆ ಯಾವುದು ಪ್ರಮಾಣ? ಯಾವ ವಿಷಯ ತಾನೇ ವಾದಗ್ರಸ್ತವಲ್ಲ? ವೇದಾಂತ ವಿಚಾರದಲ್ಲಿ ಇಂದಿಗೂ ಒಂದು ಸಿದ್ಧಾಂತವಾಗಿದೆಯೇ? ಹೀಗೆಂದು ಅದನ್ನು ಯಾರಾದರೂ ಬಿಟ್ಟಿದ್ದಾರೆಯೆ?

ನನಗೆ ಸಂಸ್ಕೃತ ಪಾಠ ಹೇಳಿದ ವಿದ್ವಾಂಸರು ಸಂಸ್ಕೃತದಲ್ಲಿ ಪಾಠ ಹೇಳಲು ಅಸಮರ್ಥರಾಗಿದ್ದರೆಂದು ನಾನು ಹೇಳಿಲ್ಲ.–"ಶಾಂತಂ ಪಾಪಂ!" ನಾನು ಮಂದಾಧಿಕಾರಿಯಾಗಿದ್ದಿರಬಹುದು. ನನ್ನ ಹಾಗೆಯೇ ಪಾಠಶಾಲೆಯ ತರಗತಿಗಳಲ್ಲಿ ಇತರರೂ ಇರುತ್ತಿದ್ದರು. ಅವರೆಲ್ಲರೂ "ಗ್ರಹಿಸುವ ಸಾಮರ್ಥ್ಯವಿರಲಿಲ್ಲ" ದವರೇ? ಸಾಹಿತ್ಯ, ವ್ಯಾಕರಣ, ತರ್ಕ, ಅಲಂಕಾರ ಈ ತರಗತಿಗಳಲ್ಲೆಲ್ಲಾ ಹೀಗೇ. ಎಲ್ಲರಿಗೂ ಕನ್ನಡದಲ್ಲಿಯೇ ಪಾಠ ನಡೆಯಿತು.

ಚರ್ಚೆ ಕನ್ನಡದಲ್ಲಿಯೇ ನಡೆದಿರಬಹುದೆಂಬುದು ಕುಚೋದ್ಯವಲ್ಲ—ಊಹೆ. ಅದರ ವರದಿ ಕನ್ನಡದಲ್ಲಿ ಬಂದದ್ದರಿಂದ ನಾನು ಹಾಗೆಂದು ಊಹಿಸಿದೆ. ಈಗ ಕನ್ನಡದಲ್ಲಿಯೇ ನಡೆಯಿತೆಂದೂ, ಅದಕ್ಕೆ ಇಂಗ್ಲಿಷು ಸಹಾಯವಾಯಿತೆಂದೂ ಖಚಿತವಾಗಿ ತಿಳಿಯಿತು. ಸಂತೋಷ.

ಕನ್ನಡವು ಪ್ರಪಂಚದಲ್ಲಿ ಹೆಸರುಗೊಂಡಿರುವ ಸಂಸ್ಕೃತಿಗಳಿಗೆಲ್ಲಾ ಮೂಲವೆಂದು ನಾನೇನು ಹೇಳಿಲ್ಲ. ಅದು ತನ್ನ ಸಂಸ್ಕೃತಿಯನ್ನು ತಾನು ಗಳಿಸಿ ಉಳಿಸಿಕೊಂಡರೆ ಸಾಕಾಗಿದೆ. ಆರ್ಯ ದ್ರಾವಿಡ ನಾಗರಿಕತೆಗಳ ವಿಚಾರವಾಗಿ ಭಿನ್ನಾಭಿಪ್ರಾಯವಿದೆ. ಹೀಗೆಂದರೆ ಸಂಸ್ಕೃತ ಪಕ್ಷವೇ ಏನು ಸಿದ್ಧವಾಯಿತು ?

"ಆರ್ಯರು ದ್ರಾವಿಡರನ್ನು ನಿಶ್ಶೇಷವಾಗಿ ನಾಶ ಮಾಡಿದ್ದರೆ ಹೇಗಿರುತ್ತಿದ್ದರೊ !" ಎಂಬುದು ಬರಿಯ ಕೋಪಪೂರಿತವಾದ ಮಾತು. ಆ ಮಾತನ್ನು ನಾನು ತಿರುಗಿಸಿ ಆರ್ಯರ ವಿಚಾರದಲ್ಲಿ ಅಮಂಗಳವನ್ನಾಡುವುದಿಲ್ಲ. ಆರ್ಯರು ಹಿಂದೆ ದ್ರಾವಿಡರನ್ನು ದಯವಿಟ್ಟು ಉಳಿಸಿಕೊಟ್ಟರು. ದ್ರಾವಿಡರೂ ಅಲ್ಪಸ್ವಲ್ಪ ತ್ರಾಣವಿದ್ದದ್ದರಿಂದ ಉಳಿದುಕೊಂಡರು. ಈಗಲೂ ದಯಾಶೀಲರಾದ ಆರ್ಯ ಸಂತತಿಯವರು ದ್ರಾವಿಡ ಸಂತತಿಯವರನ್ನು ಉಳಿಸಿಕೊಡಬೇಕೆಂಬುದು ನಮ್ಮ ಪ್ರಾರ್ಥನೆ.

ವಸಿಷ್ಠರಿಗೆ ಬ್ರಹ್ಮದಂಡವಿದ್ದದ್ದು ಪ್ರತಿಪಕ್ಷದ ಶಸ್ತ್ರಾಸ್ತ್ರಗಳನ್ನು ನುಂಗುವುದಕ್ಕೆ; ಯಾವ ಚಕ್ರವನ್ನೂ ತಿರುಗಿಸುವುದಕ್ಕಲ್ಲ. ಕಾಲಚಕ್ರವು ಯಾರ ಮಾತನ್ನೂ ಕೇಳುವುದಿಲ್ಲ.

ಕನ್ನಡಿಗರ ವ್ಯಾಸಂಗದಲ್ಲಿ ಸಂಸ್ಕೃತಕ್ಕೆ ಕಡ್ಡಾಯವಾದ ದ್ವಿತೀಯ ಸ್ಥಾನವನ್ನು ಕೊಡಬೇಕೆಂದು ನಾನು ಸೂಚಿಸಿದ್ದೇನೆಯಷ್ಟೆ. ಅದಕ್ಕೆ ಈ ಸ್ಥಾನವೂ ಬೇಡ, ಪ್ರಥಮ ಸ್ಥಾನವೂ ಬೇಡ ಎನ್ನುವ ವೀರ ಸಂಸ್ಕೃತಾಭಿಮಾನಿಗಳ ಸೂಚನೆ ಏನು ಹಾಗಾದರೆ ?

ತಾಯಿನಾಡು, ೧೭-೨-೧೯೪೨.

# ಸಾಹಿತ್ಯೋತ್ಸವದ ಆರಂಭ ಭಾಷಣ

ಮಹನೀಯರೇ,

ಇಂದಿನ ವಿಶೇಷ ಸಾಹಿತ್ಯೋತ್ಸವದಲ್ಲಿ ಆರಂಭ ಭಾಷಣ ಮಾಡಲು ನನ್ನನ್ನು ಕರೆದು ತಾವು ನನಗೆ ತುಂಬ ಗೌರವ ಮಾಡಿದ್ದೀರಿ. ಈ ಗೌರವ, ನ್ಯಾಯವಾಗಿ, ಈ ಸಾರಿಯ ಸಮ್ಮೇಳನಾಧ್ಯಕ್ಷರಾದ ನನ್ನ ಪ್ರಿಯಮಿತ್ರ ಶ್ರೀ. ಸಿ. ಕೆ. ವೆಂಕಟರಾಮಯ್ಯನವರಿಗೆ ಸಲ್ಲಬೇಕಾಗಿತ್ತು. ಅದು ಹೇಗೋ ನನ್ನ ಕಡೆಗೆ ಓಲಿತು. ಅವರಿಗೆ ಅನ್ಯಾಯವಾದರೂ, ಇಂದು ಅವರು ನನ್ನೊಡನೆ ಇದ್ದು ಭಾಷಣ ಮಾಡುವವರಾಗಿದ್ದಾರಲ್ಲಾ ಎಂದು ನನಗೆ ಸಂತೋಷವಾಗಿದೆ. ಇದೇ ವಿಧವಾದ ಸಂತೋಷ ಅವರಿಗೂ ಇದೆಯೆಂದು ನಾನು ಬಲ್ಲೆ.

ಈಗ್ಗೆ ೩೨ ವರ್ಷಗಳ ಹಿಂದೆ, ಈಗ ಕೋಟೆಯ ಹೈಸ್ಕೂಲಾಗಿರುವ ಕಟ್ಟಡದಲ್ಲಿ, ದಿವಂಗತ ರಾಜಮಂತ್ರ ಪ್ರವೀಣ ಎಚ್. ವಿ. ನಂಜುಂಡಯ್ಯನವರ ಅಧ್ಯಕ್ಷತೆಯಲ್ಲಿ ಈ ಸಾಹಿತ್ಯ ಪರಿಷತ್ತು ಆರಂಭವಾಯಿತು. ಅಂದು ಅಲ್ಲಿ ಸೇರಿದ್ದವರಲ್ಲಿ ನಮಗೆ ತಿಳಿದವರಿಗಿಂತಲೂ ತಿಳಿಯದೆ ಇದ್ದವರೇ ಹೆಚ್ಚಾಗಿದ್ದರು—ಏಕೆಂದರೆ, ಕರ್ಣಾಟಕದ ಎಲ್ಲ ಪ್ರಾಂತಗಳಿಂದಲೂ ಪ್ರತಿನಿಧಿಗಳು ಬಂದಿದ್ದರು. ಅವರಲ್ಲಿ ಬಹುಜನರ ಪರಸ್ಪರ ಪರಿಚಯ ಅದೇ ಮೊದಲು. ಆ ಸಮಾರಂಭವನ್ನು ಕಣ್ಣಾರ ಕಂಡವರು ಇಲ್ಲಿ ಅನೇಕರು ಇರಲಾರರು. ಅದು ನನ್ನ ಪಾಲಿಗೆ ಬಂದಿತ್ತು. ನಾನೂ ದಿವಂಗತ ವೆಂಕಣ್ಣಯ್ಯನವರೂ ಅದರಲ್ಲಿ ಭಾಗಿಗಳಾಗಿ, ಅನೇಕ ಹೊಸಬರ ಪರಿಚಯಮಾಡಿಕೊಂಡೆವು. ಪರಿಷತ್ತಿನ ಮುಖ್ಯ ಸ್ಥಾಪಕ ಸದಸ್ಯರಲ್ಲೊಬ್ಬರಾದ ಮ॥ಬೆಳ್ಳಾವೆ ವೆಂಕಟನಾರಣಪ್ಪನವರ ಪರಿಚಯವಾದದ್ದೂ ಆವಾಗಲೇ.

ಆಗಿನಿಂದ ದಿವಂಗತ ರಾಜಸೇವಾಸಕ್ತ ಬೆಳ್ಳಾವೆ ವೆಂಕಟನಾರಣಪ್ಪನವರು ಪರಿಷತ್ತಿನ ಏಳ್ಗೆಯಲ್ಲಿ ಆಸಕ್ತರಾಗಿ ಬಹುವರ್ಷ ಇಲ್ಲ ಕಾರ್ಯದರ್ಶಿಗಳು, ಇಲ್ಲ ಕೋಶಾಧ್ಯಕ್ಷರು—ಹೇಗೆಂದರೂ ಒಂದೇ ಏಕೆಂದರೆ, ಕಚೇರಿಯ ಬಹುಭಾಗದ ಕಾರ್ಯ ನಿರ್ವಹಿಸುತ್ತಿದ್ದವರ

ಅವರೇಯೆ—ಆಗಿ, ಅದನ್ನು ಬೆಳಸಿಕೊಂಡು ಬಂದರು. ಮೊದಲು ಇದೇ ಚಾಮರಾಜಪೇಟೆಯ ನಾಲ್ಕನೆಯ ರಸ್ತೆಯಲ್ಲಿಯೂ, ಆಮೇಲೆ ಶಂಕರಪುರದಲ್ಲಿಯೂ ಪರಿಷತ್ತು ಹೆಚ್ಚಾಗಿ ಬೀದಿಗೆ ಬರದೆ, ಕನ್ನಡ ನಾಡಿಗೆ ವಿದ್ವತ್ ಸಂಸ್ಥೆ ಏನು ಮಾಡಬಹುದು ಅದನ್ನು ನಿರ್ವಂಚನೆಯಾಗಿ ಮಾಡಿತು; ಆ ಮೊದಲು ಹದಿನೆಂಟು ಇಪ್ಪತ್ತು ವರ್ಷಗಳು ಅದು ಮಾಡಿದ ಮಹೋಪಕಾರವೆಂದರೆ, ಕನ್ನಡ ನಾಡಿನ ಪರಿಜ್ಞಾನವನ್ನು ಕನ್ನಡಿಗರಿಗೆ ಮಾಡಿಕೊಟ್ಟದ್ದು; ಆದರ ಜನರಲ್ಲಿ ಪರಸ್ಪರ ಸ್ನೇಹವುಂಟುಮಾಡಿ ಅವರನ್ನು ಒಟ್ಟುಗೂಡಿಸಿದ್ದು. ಆಗಿನ ಸಮ್ಮೇಳನಗಳು ನಿಜವಾಗಿ ಸಂತೋಷ ಕೂಟಗಳಾಗಿದ್ದುವು; ಅಡಕವಾಗಿರುತ್ತಿದ್ದುವು; ಈಗಿನಷ್ಟು ಅಗಾಧವಾಗಿರುತ್ತಿರಲಿಲ್ಲ. ಆ ಸನ್ನಿವೇಶದಲ್ಲಿ ಆದ ಪರಿಚಯ, ಉಂಟಾದ ಸ್ನೇಹ—ವಿದ್ಯುತ್ತಿನ ಬೆಸುಗೆಯಲ್ಲ—ವಿದ್ವತ್ತಿನ ಬೆಸುಗೆಯಾಗಿ, ಕನ್ನಡನಾಡು ನುಡಿ ಜನಗಳು ಒಂದಾಗಲು ಅವಕಾಶವಾಯಿತು.

ಮ|| ವೆಂಕಟನಾರಣಪ್ಪನವರ ಉತ್ಸಾಹಾಸಕ್ತಿಗಳ ಫಲವೇ ಇಂದು ನಾವೆಲ್ಲರೂ ಕುಳಿತಿರುವ ಕೃಷ್ಣರಾಜ ಪರಿಷನ್ಮಂದಿರ. ಇಲ್ಲಿ ಕಟ್ಟಡ ಕಟ್ಟಿಸಲು ಅಸ್ತಿಭಾರ ಹಾಕಿಸಿದಾಗ ಅವರ ಸಂಭ್ರಮವನ್ನು ನೋಡಬೇಕಾಗಿತ್ತು; ಅವರ ಮಗನ ಮದುವೆಯಲ್ಲಿಯೂ ಅವರು ಅಷ್ಟು ಸಂಭ್ರಮಪಟ್ಟರೋ ಇಲ್ಲವೋ ಕಾಣೆ! ಅವರ ಸಂಭ್ರಮಕ್ಕಿಂತಲೂ ದಿವಂಗತ ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾಯರ ಸಂಭ್ರಮ ಇನ್ನೂ ಹೆಚ್ಚಿನದಾಗಿತ್ತು. ಪಾರ್ಶ್ವವಾಯು ಬಂದು ದೇಹ ಸ್ವಾಧೀನವಿಲ್ಲದಿದ್ದರೂ ಮೋಟಾರ್ ಕಾರಿನಲ್ಲಿ ಬಂದು ಕುಳಿತು ಅವರು ಅಂದಿನ ಕಾರ್ಯವನ್ನು ನೆರವೇರಿಸಿದರು. ಅಂದಿನ ಉತ್ಸವದಲ್ಲಿಯೂ ನಾನು ಭಾಗಿಯಾಗಿದ್ದು ಕೊಬ್ಬರಿ ಸಕ್ಕರೆಯ ಚರುಪನ್ನು ತಿಂದು ಬಾಯಿ ಸಿಹಿ ಮಾಡಿಕೊಂಡದ್ದು ಇಂದಿಗೂ ಜ್ಞಾಪಕ ವಿದೆ. ಅದು ವೆಂಕಟನಾರಣಪ್ಪನವರು ಸ್ವಂತವಾಗಿ ಮಾಡಿಸಿದ್ದರಿಂದ—ಬಹುಶಃ ಮಾಡಿದ್ದರಿಂದ—ಅವರ ಇತರ ಎಲ್ಲ ಕೆಲಸಗಳಂತೆ ಬಹು ಹಿತಕಾರವಾಗಿತ್ತು.

ಕಟ್ಟಡವೆದ್ದಿತು; ಗೃಹಪ್ರವೇಶವಾಯಿತು; ಒಳ್ಳೆಯ ದಿವಸದಲ್ಲಿ ವೆಂಕಟನಾರಣಪ್ಪನವರೇ ಶ್ರೋತ್ರಿಯರಾದ ಪುರೋಹಿತರನ್ನು ಕರೆತಂದು ಶಾಸ್ತ್ರೋಕ್ತವಾದ ಪೂಜೆ ಪುರಸ್ಕಾರಗಳನ್ನು ನೆರವೇರಿಸಿ ಇಲ್ಲಿ ಕೆಲಸವನ್ನು ಆರಂಭಿಸಿದರು. ಗೃಹಪ್ರವೇಶವಾದಮೇಲೆ ಸಂಸಾರ ಆರಂಭವಾಗಿ ಬೆಳೆದು ದೊಡ್ಡದಾಯಿತು. ಶಂಕರಪುರದ ಒಂದು ಅಭುಕ್ತ ಮೂಲೆಯಲ್ಲಿ ಬಡಮುತ್ತೈದೆಯಂತೆ ಇದ್ದದ್ದು ಈಗ ಹಾರ್ಡಿಂಗ್ ರಸ್ತೆಗೆ – ರಾಜಬೀದಿಗೆ— ಬಂತು. ಯೌವನವೂ ಬಂತು. ನಮಗೆಲ್ಲರಿಗೂ ಹಿರಿಯರೂ ಪೂಜ್ಯ ಮಿತ್ರರೂ ಆದ ಶ್ರೀಮಾನ್ ಡಿ. ವಿ ಗುಂಡಪ್ಪನವರು ಉಪಾಧ್ಯಕ್ಷರಾಗಿ ಆ ಯೌವನಕ್ಕೆ ಹೊಸ ತೇಜಸ್ಸು ತುಂಬಿದರು. ಮಿಕ್ಕೆಲ್ಲ ಕೆಲಸಗಳನ್ನೂ ಬಿಟ್ಟು, ಅಕ್ಷರಶಃ ತನುಮನಧನಗಳನ್ನಿತ್ತು ಅವರ ಕಾಲು ಕಾರು ಎರಡನ್ನೂ ಸಮೆಸಿ ಅಹೋರಾತ್ರಿ ಆದಕ್ಕೆ ದುಡಿದರು. ಅವರು ಆ ತಮ್ಮ ಅಧಿಕಾರಾವಧಿಯಲ್ಲಿ ನೆಟ್ಟು ಬೆಳಸಿದ ಕಲ್ಪವೃಕ್ಷದ ಫಲಗಳಲ್ಲಿ ಒಂದು, ಪ್ರತಿವರ್ಷವೂ ಬೆಂಗಳೂರಿನಲ್ಲಿ ನಡೆಯುವ ವಿಶೇಷ ಸಾಹಿತ್ಯೋತ್ಸವ; ಮತ್ತೊಂದು ಗಮಕ ಕಲಾವ್ಯಾಸಂಗ.

ಅಂದಿನಿಂದ ನಾವು ಇಲ್ಲಿಯವರೆಗೆ (೧೯೩೪-೧೯೪೭) ಸುಮಾರು ಹದಿಮೂರು ವರ್ಷ, ಬಹುದೂರ ಬಂದಿದ್ದೇವೆ. ಆದ್ದರಿಂದ ಒಂದೊಂದು ಸಲ ಹಿಂದೆ ನೋಡಿ ಅಂದಿನ ಕಾರ್ಯಕರ್ತರ ಮೂಲೋದ್ದೇಶಗಳೇನಿದ್ದುವು, ಕಾರ್ಯನೀತಿ ಏನಿತ್ತು, ಅವು ಎಷ್ಟುಮಟ್ಟಿಗೆ ಈಡೇರಿದುವು, ಅವುಗಳಲ್ಲಿ ಯಾವ ಯಾವ ಬದಲಾವಣೆ ಇಂದಿನ ಕಾಲಸ್ಥಿತಿ ಸ್ವರೂಪಗಳಿಗೆ ಆವಶ್ಯಕ ಎಂದು ಯೋಚಿಸುವುದು ಅಗತ್ಯ—ಪ್ರಯೋಜನಕರ—ಎಂದು ನಾನು ತಿಳಿಯುತ್ತೇನೆ.

ಪರಿಷತ್ತು ಪ್ರಕಟಿಸಿದ ೧೯೩೪ರ ಹಸ್ತಪತ್ರಿಕೆಯಲ್ಲಿ, ಇವು ಆಗ ಉದ್ದೇಶಪಟ್ಟಿದ್ದ ಉಪನ್ಯಾಸ ವಿಷಯಗಳೆಂದು ಸೂಚಿಸಿತ್ತು :—೧. ಕಾವ್ಯಸ್ವರೂಪ (ಕರ್ಣಾಟಕ ಮತ್ತು ಆಂಗ್ಲೇಯ). ೨ ಕನ್ನಡದಲ್ಲಿ ಹೊಸ ಸಾಹಿತ್ಯದ ರೀತಿ. ೩. ಜೀವ ಶಾಸ್ತ್ರ. ೪. ಭೌತ ಮತ್ತು ಆಧ್ಯಾತ್ಮ ವಿಚಾರಗಳು. ೫. ಪರಿಣಾಮವಾದ. ೬. ಅಂತರರಾಷ್ಟ್ರೀಯ ಸೌಹಾರ್ದ.

೭. ಇಂಡಿಯ ದೇಶದ ಸಂಯುಕ್ತ ರಾಜ್ಯರಚನೆ. ೮. ಪ್ರಪಂಚದ ಈಗಿನ ಬಡತನ. ೯. ಭಾಷಾಶಾಸ್ತ್ರ. ೧೦. ಮನಃಶಾಸ್ತ್ರ ೧೧. ಹಿಂದೂದರ್ಶನಗಳು. ೧೨. ಹೊಯ್ಸಳ ವಾಸ್ತುಶಿಲ್ಪ. ೧೩. ಕಾಳಿದಾಸನ ಕವಿತ್ವ. ೧೪. ಹೊಸ ಪ್ರಪಂಚದಲ್ಲಿ ಸ್ತ್ರೀಯರ ಕರ್ತವ್ಯ.

ಈ ಉಪನ್ಯಾಸಗಳು ಆಧುನಿಕ ವಿಚಾರಗಳನ್ನು ಕುರಿತವುಗಳಾಗಿದ್ದು ಮುಖ್ಯವಾಗಿ ಕನ್ನಡ ನಾಡಿನ ಮಾಧ್ಯಮಿಕ ಮತ್ತು ನಾರ್ಮಲ್ ಪಾಠಶಾಲೆಗಳ ಉಪಾಧ್ಯಾಯರನ್ನು ದೃಷ್ಟಿಯಲ್ಲಿ ಇಟ್ಟುಕೊಂಡಿದ್ದುವು. ವಿದ್ಯಾಭ್ಯಾಸದ ಇಲಾಖೆಯ ಅಧಿಕಾರಿಗಳು ತಮ್ಮ ಉಪಾಧ್ಯಾಯರಿಗೆ ಇವು ಒಂದು ವಿಧವಾದ ನವೀಕರಣೋಪನ್ಯಾಸಗಳಾಗುವುವೆಂದು ಕಂಡುಕೊಂಡು ಪರಿಷತ್ತಿನೊಡನೆ ಸಹಕರಿಸಿದರು. ನೂರಾರು ಉಪಾಧ್ಯಾಯರು ಬಂದಿದ್ದು ಉಂಡು ತಿಂದು ನೋಡಿ ಕೇಳಿ ಸಂತೋಷಗೊಂಡು ಹೋದರು. ಇಂದಿಗೂ ವಿದ್ಯಾಭ್ಯಾಸದ ಇಲಾಖೆಯ ಮೂಲಕ ಪರಿಷತ್ತಿಗೆ ಬರುತ್ತಿರುವ ಪ್ರೋತ್ಸಾಹ—ಮುಖ್ಯವಾಗಿ ಧನಸಹಾಯ—ದೊಡ್ಡದು. ಅದರಿಂದಲೇ ಪರಿಷತ್ತು ಇಷ್ಟು ಅಭಿವೃದ್ಧಿಗೆ ಬಂದು ಕಾರ್ಯಕಲಾಪಗಳನ್ನು ಸಂತತವಾಗಿ ನಡಸಿಕೊಂಡು ಹೋಗಲು ಸಾಧ್ಯವಾಗಿರುವುದು. ಇದಕ್ಕಾಗಿ ಈ ಸಂದರ್ಭದಲ್ಲಿ ತಮ್ಮೆಲ್ಲರ ಪರವಾಗಿ ಮೈಸೂರು ಶ್ರೀಮನ್ಮಹಾರಾಜರವರ ಸರ್ಕಾರಕ್ಕೆ ನಮ್ಮ ಕೃತಜ್ಞತೆಯನ್ನು ಸೂಚಿಸುತ್ತೇನೆ.

ಮೇಲೆ ಕಾಣಿಸಿದ ಉಪನ್ಯಾಸಗಳನ್ನು 'ಆಧುನಿಕ ವಿಚಾರೋಪನ್ಯಾಸ' ಗಳೆಂದು ಕರೆದಿತ್ತು. ಆಯಾ ವಿಷಯಗಳಲ್ಲಿ ನಿಷ್ಣಾತರಾದವರು ಬಂದು ಮಾತನಾಡಿದರು. ಇವುಗಳ ಜೊತೆಗೆ ಕಾವ್ಯವಾಚನವಿತ್ತು. ಸಂಗೀತವೂ ಸ್ವಲ್ಪ ಇದ್ದ ಹಾಗೆ ಜ್ಞಾಪಕ. ನಾಟಕವಿತ್ತೋ ಇಲ್ಲವೋ ಜ್ಞಾಪಕವಿಲ್ಲ. ನರ್ತನವಂತೂ ಇರಲಿಲ್ಲ. ಕಾವ್ಯವಾಚನ ಸಂಗೀತಗಳು ಸಾಹಿತ್ಯಕ್ಕೆ ಅಂಗವಾಗಿ ನಾಟಕದ ನಾಂದಿ ಭರತವಾಕ್ಯಗಳಂತಿದ್ದುವು. ಅವೇ ಕಾವ್ಯ ನಾಟಕಗಳಂತೆ ಪ್ರಧಾನವಾಗಿರಲಿಲ್ಲ. ಈಚೆಗೆ ಇವು, ಜೊತೆಗೆ ನರ್ತನ, ಎಲ್ಲೆಲ್ಲಿಯೂ ಹೆಚ್ಚಾಗುತ್ತಿವೆ. ಸಂಗೀತ ಶಾಲೆಯಲ್ಲಿ, ನಾಟಕ ಮಂದಿರದಲ್ಲಿ, ಸಿನಿಮಾಗಳಲ್ಲಿ ಇವು ಬೇಡವೆನ್ನುವು

ದಿಲ್ಲ; ಇವುಗಳ ಸ್ಥಾನವೇ ಅವು. ಸಾಹಿತ್ಯ ಮಂದಿರದಲ್ಲಿ, ಸಾಹಿತ್ಯವೇ ಹಸು, ಸಂಗೀತಾದಿಗಳು ಅದರ ಬಾಲ. ಹಸು ಬಾಲವನ್ನು ಅಲ್ಲಾಡಿಸ ಬೇಕೇ ಹೊರತು, ಬಾಲ ಹಸುವನ್ನು ಅಲ್ಲಾಡಿಸಬಾರದು. ಈಚಿಗೆ ಕಾಲೇಜಿನ ಕೆಲವು ವಿದ್ಯಾರ್ಥಿಸಂಘಗಳಲ್ಲಿ ವರ್ಷಾರಂಭ ಭಾಷಣ, ಉಪನ್ಯಾಸ ಮುಂತಾದ ಕಾರ್ಯ ನಡೆಯುವಾಗಲೂ ಅರ್ಥವಾಗದ ಸಿನಿಮಾ ಹಾಡುಗಳು, ಹುಡುಗಿಯರ ನರ್ತನ ಇವುಗಳನ್ನು ನಡಸುವುದು ರೂಢಿಯಾಗುತ್ತಿದೆ. ಇವಿಲ್ಲದಿದ್ದರೆ ಜನ ಬರುವುದಿಲ್ಲ, ಇದ್ದರೆ ಹೆಚ್ಚು ಜನ ಬರುತ್ತಾರೆ ಎಂದು ಕಾರಣ ಕೊಡಬಹುದು, ಸಮರ್ಥನೆ ಮಾಡಬಹುದು. ಆದರೆ, ಸ್ಕೂಲಿಗೆ ಹೋಗದಿರುವ ಹುಡುಗರಿಗೆ ಎಷ್ಟು ದಿನ ಪೆಪ್ಪರು ಮೆಂಟು ಆಸೆ ತೋರಿಸಿ ಸ್ಕೂಲಿಗೆ ಕಳುಹಿಸಬಹುದು? ಪೆಪ್ಪರ್‌ಮೆಂಟ್ ಮುಗಿದ ಗಳಿಗೆಗೇ ಮನೆಗೆ ಹಿಂತಿರುಗಿ ಬಂದು ಬಿಟ್ಟರೆ ನಮ್ಮ ಉಪಾಯ ಉದ್ದೇಶಗಳೇನಾದುವು? ಹಾಲು ಬೇಕೆನ್ನುವವರು ಹಸುವನ್ನು ಹಿಡಿಯಬೇಕು, ಬಾಲವನ್ನಲ್ಲ. ನಮ್ಮಲ್ಲಿ ಮುತ್ತೈದೆಯರ ಹಾಡು ಹಸೆಗಳಿಲ್ಲದೆ ಯಾವ ಮಂಗಳ ಕಾರ್ಯವೂ ಪೂರ್ಣವಾಗುವುದಿಲ್ಲ. ಗಂಟೆಗಟ್ಟಲೆ ಪುರೋಹಿತರು ವೇದ ಮಂತ್ರಗಳನ್ನು ಘೋಷಿಸಿದರೂ 'ಯಾರಾದರೂ ಹೆಂಗಸರು ಎರಡು ಹಾಡುಹೇಳಿ' ಎನ್ನುತ್ತಾರೆ. ಆರತಿ ಎತ್ತುವಾಗಂತೂ ಮುತ್ತೈದೆಯರ ಹಾಡೂ ಆಶೀರ್ವಾದವೂ ಬೇಕೇ ಬೇಕು. ಹೆಂಗಸೇ ಮುಂದು; 'ಮಾತಾಪಿತೃ'ಗಳೆಂದು ತಾಯಿಯ ಹೆಸರನ್ನು ಮೊದಲು ಹೇಳುವುದೇ ಸಾಧು. ಇದೆಲ್ಲವನ್ನೂ ನಾನು ಬಲ್ಲೆ. ಆದ್ದರಿಂದ ಮೇಲೆ ನಾನು ಆಡಿದ ಮಾತಿನಿಂದ ಯಾರೂ ತಪ್ಪು ತಿಳಿದುಕೊಳ್ಳಬಾರದು. ರಸವು ಒಂದು ಮೆಟ್ಟಲು ಇಳಿದರೆ ಅದರ ಘನತೆ ಕುಗ್ಗಿ ರಸಾಭಾಸವಾಗುತ್ತದೆಂದು ಹಿರಿಯರು ಹೇಳಿರುವುದನ್ನು ಪರಿಶೀಲಿಸಬೇಕೆಂದು ಬೇಡುತ್ತೇನೆ.

ನರ್ತನವೂ ಅಷ್ಟೆ; ಅದಕ್ಕೆ ಭರತಖಂಡದಲ್ಲಿ ಹಿರಿಯ ಸ್ಥಾನವಿದೆ. ಕಾವ್ಯಕ್ಕಿಂತಲೂ ಹಳೆಯದು ನಾಟ್ಯ; ಅದರ ಪ್ರವರ್ತಕ ಸಾಕ್ಷಾತ್ ಪರಮೇಶ್ವರ; ಆಚಾರ್ಯ ಭರತ ಮುನಿ. ಆದ ಮಾತ್ರದಿಂದ ಅದನ್ನು ಎಲ್ಲೆಲ್ಲಿಯೂ ತರುವುದಕ್ಕಾಗುತ್ತದೆಯೇ? ಅದಕ್ಕೂ ಮಿತಿ ಬೇಡವೇ?

ಸಕ್ಕರೆ ಸಿಹಿಯಾಗಿರುತ್ತದೆಯೆಂದು ಅದನ್ನು ಅಡಿಗೆಗೆಲ್ಲಾ ಸೆರಿಸೆರೆ ಯಲ್ಲಿ ತೆಗೆದು ಹುಯ್ಯಬಹುದೇ ? ವಿಲಾಸವೂ ವಿದ್ವತ್ತೂ ಸ್ವಲ್ಪ ದೂರ ದೂರದಲ್ಲಿರುವುದು ಒಳ್ಳೆಯದೆಂದು ತೋರುತ್ತದೆ.

ನಾನು ಕೆಲವು ಕರ್ಣಾಟಕ ಸಂಘಗಳ ವಾರ್ಷಿಕೋತ್ಸವಗಳಿಗೆ ಅಧ್ಯಕ್ಷನಾಗಿ ಹೋಗಿದ್ದಾಗ ಇನ್ನೊಂದು ಅನುಭವವುಂಟಾಗಿದೆ. ಸಾಮಾನ್ಯವಾಗಿ ಅಂಥ ಕಾರ್ಯಕ್ರಮದಲ್ಲಿ ಅಧ್ಯಕ್ಷ ಭಾಷಣಕ್ಕೆ ಮೊದಲು ಸಂಗೀತ, ಭಾಷಣದ ಅನಂತರ ನಾಟಕ ಇರುತ್ತದೆ. ನಾಟಕ, ಬಿಟ್ಟಿ ನೋಡಬಹುದಾದ ನಾಟಕ-ಅದು ಎಂಥ ನಾಟಕವಾದರೂ ಆಗಿರಲಿ- ಇದೆ ಎಂದುಬಿಟ್ಟರೆ ಆ ಸಮಾರಂಭಕ್ಕೆ ನಾಟಕ ನೋಡಲು ಬರುವ ಜನರೇ ಹೆಚ್ಚು; ಹೆಂಗಸರು ಹುಡುಗರೇ ಹೆಚ್ಚು. ಹೆಂಗಸರೂ ಹೆಣ್ಣು ಹುಡುಗರೂ ಗಂಭೀರವಾಗಿರುತ್ತಾರೆ. ಗಂಡು ಹುಡುಗರು ಗಲಾಟೆಗೆ ಆರಂಭಿಸುತ್ತಾರೆ. ಮೊದಲು ಸಂಗೀತವನ್ನೂ ಆಗಗೊಡಿಸುವುದಿಲ್ಲ, ಆಮೇಲೆ ಅಧ್ಯಕ್ಷ ಭಾಷಣವನ್ನೂ ಆಗಗೊಡಿಸುವುದಿಲ್ಲ. ಇಂಥ ಸಂದರ್ಭ ಗಳಲ್ಲಿ ನಾಟಕ ಬೇಡವೆಂದು ನಾನು ಹೇಳುವುದಿಲ್ಲ. ಹಾಕಲೇಬೇಕೆಂ ದರೆ ಅದನ್ನು ಎರಡನೆಯ ದಿನ ಹಾಕಬಹುದು. ಮೊದಲನೆಯ ದಿನದ ಕಾರ್ಯಕಲಾಪಕ್ಕೆ ಹೆಚ್ಚು ಜನ ಬರುವುದಿಲ್ಲವೆಂದರೆ-ಬಂದಷ್ಟೇ ಸಾಕು, ಅವರಿಂದಲೇ ಉಪನ್ಯಾಸಕ್ಕೆ ಸಾಫಲ್ಯ ಎನ್ನಬೇಕಾಗುತ್ತದೆ. ಸಂಸ್ಕೃತಿ ಗೌರವ, ಸಭಾಮರ್ಯಾದೆ ಇವೆರಡನ್ನೂ ಪಾಲಿಸಿಕೊಂಡು ಬರುವುದು ನಮ್ಮ ಅವಶ್ಯಕರ್ತವ್ಯ.

ನಾವು ಇನ್ನು ಮುಂದೆ, ಪರಿಷತ್ತು ವಿಶ್ವವಿದ್ಯಾಲಯ ಮುಂತಾದ ವಿದ್ವತ್ ಸಂಸ್ಥೆಗಳಲ್ಲಿ ವಿನೋದಾವಳಿಗಿಂತಲೂ ವಸ್ತುಸ್ಥಿತಿ ಪರಿಜ್ಞಾನಕ್ಕೆ ಹೆಚ್ಚು ಗಮನ ಕೊಡಬೇಕು. ಕನ್ನಡ ಕನ್ನಡ ಎಂದು ಕೂಗುವುದನ್ನೂ ಸ್ವಲ್ಪ ಕಡಮೆ ಮಾಡಬಹುದು: ಈಗ ಜನ ತಕ್ಕಮಟ್ಟಿಗೆ ಎಚ್ಚತ್ತಿ ದ್ದಾರೆ. ಮುಂದೆ ದೇಶಭಾಷೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಬಂದೇ ಬರು ತ್ತದೆ. ನಾವು ಸುಮ್ಮನಿದ್ದರೂ ನಮ್ಮ ಸುತ್ತಲೂ ಇರುವ ತೆಲುಗರು ತಮಿಳರು ಮಹಾರಾಷ್ಟ್ರರು ಸುಮ್ಮನಿರುವುದಿಲ್ಲ. "ಅಳುವವಳ ಗಂಡ ಮನೆಗೆ ಬಂದರೆ ಸುಮ್ಮನಿರುವವಳ ಗಂಡನೂ ಬರುತ್ತಾನೆ." ಹೀಗೆಂದರೆ

ಕನ್ನಡಿಗರೂ ಕನ್ನಡ ಸಾಹಿತ್ಯ ಪರಿಷತ್ತೂ ಸುಮ್ಮನೆ ಕೈಕಟ್ಟಿಕೊಂಡು ಕುಳಿತುಕೊಂಡುಬಿಡಬೇಕೆಂಬುದು ನನ್ನ ಅಭಿಪ್ರಾಯವಲ್ಲ. ಮಾತಿಗಿಂತ ಕಾರ್ಯ ಹೆಚ್ಚಾಗಬೇಕು, ಜಳ್ಳಿನ ಕಡೆಗೆ ಗಮನ ಕೊಡದೆ ಕಾಳಿನ ಕಡೆಗೆ ಗಮನ ಕೊಡಬೇಕು.

ಈ ದೃಷ್ಟಿಯಿಂದ ಈ ಸಾರಿಯ ಸಾಹಿತ್ಯೋತ್ಸವದ ಕಾರ್ಯಕ್ರಮವು ತುಂಬ ತೃಪ್ತಿಕರವಾಗಿದೆ. ಅದನ್ನು ತಾವೆಲ್ಲರೂ ನಿನ್ನೆಯ ದಿನದ "ಕನ್ನಡ ನುಡಿ' ಯಲ್ಲಿ ನೋಡಿರುವಿರೆಂದು ನಂಬಿದ್ದೇನೆ. ಇಷ್ಟು ಚೆನ್ನಾದ ಕಾರ್ಯಕ್ರಮವನ್ನು ರಚಿಸಿರುವುದಕ್ಕಾಗಿ ಸಾಹಿತ್ಯೋತ್ಸವ ಸಮಿತಿಯ ಸದಸ್ಯರನ್ನು ನಾನು ಅಭಿನಂದಿಸುತ್ತೇನೆ.

ಇಂದು ವಾಷಿಂಗ್‌ಟನ್, ಮಾಸ್ಕೋ, ಲಂಡನ್, ಪ್ಯಾರಿಸ್ ಮುಂತಾದ ಮಹಾನಗರಗಳಲ್ಲಿ, ದೇಶ ವಿದೇಶಗಳ ಪ್ರತಿನಿಧಿಗಳು ಸೇರಿ ಯೂರೋಪಿಗೆ ಏಷಿಯಕ್ಕೆ ಅಥವಾ ಅಖಂಡ ವಿಶ್ವಕ್ಕೇ ಅನ್ವಯಿಸುವಂಥ ರಾಜಕೀಯ ಆರ್ಥಿಕ ಸಾಮಾಜಿಕ ಆಹಾರಾದಿ ಯೋಜನೆಗಳನ್ನು ಹೂಡಿ, ಮುರಿದುಬಿದ್ದ ಜಗಜ್ಜೀವನವನ್ನು ಸಂಘಟಿಸಲು ಪ್ರಯತ್ನ ಮಾಡುತ್ತಿದ್ದಾರೆ. ಇಂಡಿಯ, ಇಂಡೋನೀಷಿಯ, ಸಿಲೋನ್, ಬರ್ಮ, ಚೀಣಾ, ಪ್ಯಾಲೆಸ್ಟೈನ್ ಮುಂತಾದ ಪ್ರಾಚ್ಯದೇಶಗಳು ದಾಸ್ಯದಿಂದ ಕೊಡವಿಕೊಂಡೆದ್ದು ಸ್ವಾತಂತ್ರ್ಯ ಪಡೆಯುವ ಪ್ರಯತ್ನದಲ್ಲಿ ಕುದಿಯುತ್ತಿವೆ. ಹೀಗಿರುವಾಗ ಬೆಂಗಳೂರಿನ ಒಂದು ಸಣ್ಣ ಕಟ್ಟಡದಲ್ಲಿ ನಾಲ್ಕು ಜನ ಸೇರಿ ಒಂದು ಉತ್ಸವ ನಡಸುವುದು ಕೆಲವರಿಗೆ ಅಲ್ಪವಾಗಿ ಕಾಣಬಹುದು. ಆದರೆ ಹನಿಗೂಡಿದರೆ ಹಳ್ಳವೆಂಬುದನ್ನು ನಾವು ಮರೆಯಬಾರದು. ಇಂಥ ಹತ್ತಾರು ಬೆಂಗಳೂರು ಸೇರಿದರೆ ಒಂದು ಇಂಡಿಯ. ಅಂಥ ಹತ್ತಾರು ದೇಶಗಳಿದ್ದರೆ ಒಂದು ಪ್ರಪಂಚ. ವಿಶಾಲ ಜಗತ್ತಿನ ದೃಷ್ಟಿಯಿಂದ ನ್ಯೂಯಾರ್ಕ್‌ನಂಥ ಪಟ್ಟಣವೂ ಒಂದು ಕೂಪವೇ. ಅಲ್ಲಿಯ ಜನಗಳೂ ಕೂರ್ಮಗಳೇ! ಆದ್ದರಿಂದ ದೊಡ್ಡ ಕೂಪಗಳನ್ನು ಕಂಡ ದಪ್ಪ ಕೂರ್ಮಗಳು, ಸಣ್ಣ ಕೂರ್ಮಗಳನ್ನು ತಿರಸ್ಕರಿಸದಿರಲಿ. ಸಣ್ಣ ಕೂರ್ಮಗಳೂ ತಮ್ಮ ದಪ್ಪ ದಪ್ಪ ಸೋದರರನ್ನು ನೋಡಿ ತಾವು ಹೀನಾಯಗೊಳ್ಳದಿರಲಿ. ಇದರ ಮೇಲೆ,

ಕನ್ನಡ ಜನರು ತಮ್ಮ ನಾಡು ನುಡಿ ಸಂಪತ್ತು ಸಂಸ್ಕೃತಿಗಳ ಬಗ್ಗೆ ಸಂಕೋಚಪಟ್ಟುಕೊಳ್ಳಬೇಕಾದಂಥಾದ್ದು ಕಾನೇ ಏನು? ಅವುಗಳ ಮೇಲ್ಮೆಯನ್ನು ಕನ್ನಡ ಪ್ರೇಮಿಗಳು ಅವಿಶ್ರಾಂತವಾಗಿ ಕೀರ್ತಿಸುತ್ತಲೇ ಇರುತ್ತಾರೆ.

ಈಗ ಕೆಲವು ವರ್ಷಗಳ ಕೆಳಗೆ ಮೈಸೂರು ಸರ್ಕಾರದ ಮಂತ್ರಿಗಳಲ್ಲೊಬ್ಬರಾಗಿದ್ದ ಶ್ರೀ ಎಂ.ಎ. ಶ್ರೀನಿವಾಸನ್ ಅವರು ಮೇಲುಕೋಟೆಯ ವಿದ್ವತ್ ಸಮ್ಮೇಳನದಲ್ಲಿ ಮಾತನಾಡುತ್ತ, ನಮ್ಮ ಸಂಸ್ಕೃತ ವಿದ್ವಾಂಸರು, ' ಪೆನಿಸಿಲಿನ್ ' ಮುಂತಾದ ಮಹೌಷಧಗಳನ್ನು ಕಂಡುಹಿಡಿಯುವುದು ಹೇಗೆ, ಆಹಾರ ಪದಾರ್ಥಗಳನ್ನು ಹೆಚ್ಚಿಗೆ ಬೆಳೆಯುವುದು ಹೇಗೆ, ಮುಂತಾದ ಆಧುನಿಕ ವ್ಯಾವಹಾರಿಕ ಪ್ರಪಂಚಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು ಬಗೆಹರಿಸಲು ಸಾಧಕವಾದ ವಿಷಯಗಳನ್ನು ಕಂಡು ಹಿಡಿದು ಬೋಧಿಸುವಂತಾದರೆ, ಮೇಲುಕೋಟೆ ಮೈಸೂರು ಪಾಠಶಾಲೆಗಳು ಆಕ್ಸ್‌ಫರ್ಡ್ ಕೇಂಬ್ರಿಡ್ಜ್‌ಗಳು ಆಗುವುವೆಂದೂ ಆಗ ಇಂಗ್ಲೆಂಡ್ ಅಮೆರಿಕಾಗಳಿಂದ ವಿದ್ಯಾರ್ಥಿಗಳು ಬಂದು ನಮ್ಮ ಪಂಡಿತರ ಪದತಲದಲ್ಲಿ ಕುಳಿತು ವ್ಯಾಸಂಗ ಮಾಡುವರೆಂದೂ ಹೇಳಿದರು. ಅದಿರಲಿ; ಕನ್ನಡದ ಮಟ್ಟಿಗಾದರೂ ಮೈಸೂರು ಬೆಂಗಳೂರುಗಳು ಆ ಕೀರ್ತಿಯನ್ನು ಪಡೆದಿವೆ ಎಂದು, ಈಗ ಶ್ರೀಮತಿ ಇವ್ಯಾನ್ಸ್ ಅವರು ಬೆಂಗಳೂರಿನಲ್ಲಿ ನಿಂತು ಕನ್ನಡದ ಪರಿಶ್ರಮ ಮಾಡುತ್ತಿರುವುದರಿಂದ, ಯಾರಾದರೂ ಹೇಳಿಕೊಳ್ಳಬಹುದು. ಶ್ರೀಮತಿಯವರ ವ್ಯಾಸಂಗವು ಪೂರ್ಣವಾಗಲೆಂದೂ, ಹಿಂದೆ ರೈಸ್, ಕಿಟ್ಟೆಲ್, ಬಾರ್ನೆಟ್, ಮುಂತಾದ ಯೂರೋಪೀಯ ವಿದ್ವಾಂಸರಿಂದ ಆದಹಾಗೆ ಅವರಿಂದಲೂ ಕನ್ನಡಕ್ಕೆ ಸಹಾಯವಾಗಲೆಂದೂ ನಾನು ಹಾರೈಸುತ್ತೇನೆ.

ಈಗ ಅನೇಕರ ದೃಷ್ಟಿ ಇಂಡಿಯದ ಕಡೆ ತಿರುಗಿದೆ. ಅವರು ನಮ್ಮ ದೇಶ ಅಹಿಂಸೆಯಿಂದ ಸ್ವಾತಂತ್ರ್ಯಗಳಿಸಿದ ಪಾಠವನ್ನು ಕಲಿಯುತ್ತಿರುವುದಿರಲಿ, ಪ್ರಪಂಚದಲ್ಲಿ ಸುಖ ಶಾಂತಿಗಳು ನೆಲಸಬೇಕಾದರೆ ಪಾಶ್ಚಾತ್ಯರ ಸಮರ ನೀತಿಯಿಂದಲ್ಲ, ಭಾರತೀಯ ಧರ್ಮನೀತಿಯಿಂದ, ಎಂದು ಹೇಳುತ್ತ ಅವರು ಅದರ ಸಂಸ್ಕೃತಿ ಸಂದೇಶವನ್ನು ನಿರೀಕ್ಷಿಸುತ್ತಿದ್ದಾರೆ.

ಈ ಸಮಯದಲ್ಲಿ ನಾವು ಚಂದ್ರದ್ರೋಣ ಪರ್ವತದ ಮಹಾರಣ್ಯದಂತೆ ಬೆಳೆದುಹೋಗಿರುವ ನಮ್ಮ ಪ್ರಾಚೀನ ಶಾಸ್ತ್ರಸಾಹಿತ್ಯ ಗ್ರಂಥಗಳನ್ನು ಶೋಧಿಸಿ ಸಂಜೀವಿನೀ ಮೂಲಿಕೆಯನ್ನು ಹುಡುಕಬೇಕಾಗಿದೆ. ಪರ್ವತ ವನ್ನೇ ಹೊತ್ತುಕೊಂಡು ಹೋದರೆ, ಅಥವಾ ಪರ್ವತ ನಮ್ಮದು ತಾನೇ ಎಂದು ಹೆಮ್ಮೆಪಟ್ಟುಕೊಂಡು ಕುಳಿತರೆ ಅದರಿಂದ ಯಾರಿಗೂ ಏನೂ ಪ್ರಯೋಜನವಿಲ್ಲ. ಒಂದು ಗಾಡಿ ಮೂಲಿಕೆಯಿಂದ ಒಂದು ಶೀಸೆ ಕಷಾಯವನ್ನೋ ಒಂದು ಡಬ್ಬಿ ಮಾತ್ರೆಗಳನ್ನೋ ಮಾಡಿಡುವ ಕಾಲ ಇದು. ಹಾಗೆಯೇ ನಾವೂ ನಮ್ಮ ಸಂಸ್ಕೃತಿಯಲ್ಲಿ ಬೆಲೆಯುಳ್ಳ ಅಂಶ ಗಳಾವುವೆಂದು ನೋಡಿ ಅವುಗಳನ್ನು ಸಂಗ್ರಹಿಸಿಕೊಳ್ಳಬೇಕು. ಮೇಲೆ ಕಂಡ ವಿಚಾರೋಪನ್ಯಾಸಗಳಉದ್ದೇಶವೂ ಇದೇಯೆ. ಇದೇರೀತಿ ಪ್ರಚಾ ರೋಪನ್ಯಾಸಗಳನ್ನೂ ಗ್ರಂಥಮಾಲೆಯನ್ನೂ ಮೈಸೂರು ವಿಶ್ವವಿದ್ಯಾ ನಿಲಯವು ಕೈಗೊಂಡಿತು. ದಿವಂಗತ ರಾಜಕಾರ್ಯಪ್ರವೀಣ ಎನ್. ಎಸ್. ಸುಬ್ಬರಾಯರೂ, ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರೂ ಅವುಗಳಲ್ಲಿ ತುಂಬ ಆಸಕ್ತಿವಹಿಸಿದರು. ಏಷ್ಟೋ ಗ್ರಂಥಗಳು ಬಂದುವು. ಆದರೆ ಯುದ್ಧ ಆರಂಭವಾದ ಮೇಲೆ ಕಾಲಸ್ಥಿತಿ ಬದಲಾಗಿ, ಬರೆದ ಗ್ರಂಥಗಳಿದ್ದರೂ, ಅವು ಅಚ್ಚಾಗದೆ ಕೊಳೆಯುತ್ತ ಬಿದ್ದಿವೆ. ಸರ್ಕಾರದ ಸಹಾಯ ಸಂಪತ್ತಿಗಳಿಲ್ಲದ ಖಾಸಗೀ ಜನರು ಇದೇ ಕಾಲದಲ್ಲಿ ಬಗೆ ಬಗೆ ಯಾದ ಪುಸ್ತಕಗಳನ್ನು ಬರೆದು ಪ್ರಕಟಿಸಿದ್ದಾರೆ. ಇದು ಅಭಿನಂದ ನೀಯವೇ ಸರಿ. ಆದರೂ ಆಧುನಿಕ ಸಾಹಿತ್ಯದಿಂದ ಅಪೇಕ್ಷಿಸುವು ದೆಲ್ಲವೂ ಇವುಗಳಿಂದ ದೊರೆಯುತ್ತಿದೆ ಎಂದು ಹೇಳುವುದಕ್ಕಾಗುವುದಿಲ್ಲ.

ಗ್ರಂಥರಾಶಿ ದೊಡ್ಡದಾದಂತೆಲ್ಲ ಅದರ ಶೋಧನೆ ಸಂಗ್ರಹಗಳು ನಡೆಯಬೇಕು. ಹಿಂದೆ ನಡೆದಿದೆ.* ಹೀಗೆ ವೇದದ ಸಾರ ಉಪನಿಷತ್ತು.

*ಅದ್ವೈತ ವೇದಾಂತ ಪರಿಭಾಷಾ, ಮೀಮಾಂಸಾಪರಿಭಾಷಾ, ತರ್ಕಸಂಗ್ರಹ, ಅರ್ಥಸಂಗ್ರಹ, ಲಘುಕೌಮುದೀ, ಲಘುಯೋಗವಾಸಿಷ್ಠ ಮುಂತಾದ ಪರಿಭಾಷೆ ಗಳೂ ಸಂಗ್ರಹಗಳೂ ಲಘುಗ್ರಂಥಗಳೂ ಹೀಗೆ ಹಿಡಿತದಲ್ಲಿರಲೆಂದು ಸಂಗ್ರಹಿಸಿವು ಗಳು. ಸೂತ್ರಸಾಹಿತ್ಯವೆಲ್ಲಾ ಒಂದು ವಿಧದಲ್ಲಿ ಸಂಗ್ರಹಗಳೇಯೆ.

ಉಪನಿಷತ್ತಿನ ಸಾರ ಭಗವದ್ಗೀತೆ. ಭಗವದ್ಗೀತೆಯ ಸಾರ ಅದರ ಮಹಾ ವಾಕ್ಯಗಳು–ಯೋಗಃ ಕರ್ಮಸು ಕೌಶಲಂ, ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ, ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವ ಸಾದಯೇತ್—ಇತ್ಯಾದಿ. "ಅಹಿಂಸಾ ಪರಮೋ ಧರ್ಮಃ", "ಕಳ ಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ. ಮುನಿಯ ಬೇಡ. ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ. ಇದಿರ ಹಳಿ ಯಲು ಬೇಡ. ಇದೇ ಅಂತರಂಗ ಶುದ್ಧಿ. ಇದೇ ಬಹಿರಂಗಶುದ್ಧಿ." ಇವೂ ಹೀಗೇ ಧರ್ಮದ ಸಾರವನ್ನು ಬಟ್ಟಿ ಇಳಿಸಿ ತೆಗೆದ ಮಹಾವಾಕ್ಯ ಗಳು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಇಂಥ ಒಂದು ಮಹಾವಾಕ್ಯ ಗಳ ರತ್ನಾವಳಿ "ಮಂಕುತಿಮ್ಮನ ಕಗ್ಗ." ಅದು ನಿಜವಾಗಿ ಕಗ್ಗವೂ ಅಲ್ಲ, ಹಗ್ಗವೂ ಅಲ್ಲ—ಸಗ್ಗ; ವೇದಾಂತ ಸಾರಸಂಗ್ರಹ; ವಿದ್ವತ್ ಸಾಧಕರೊಬ್ಬರ ಅನುಭವಾಮೃತ.

ಉಪನಿಷತ್ತಿನ ಕಾಲದಲ್ಲಿ ತತ್ವದರ್ಶಿಗಳಾದ ಜ್ಞಾನಿಗಳು ವಾಕ್ಯ ವನ್ನೂ ಸಂಗ್ರಹಿಸಿ, ಒಂದೊಂದು ಮಾತಿನಿಂದ, ಒಂದೊಂದು ಅಕ್ಷರ ದಿಂದ, ಕೊನೆಗೆ ಮೌನದಿಂದ, ಜ್ಞಾನವನ್ನು ಉಪದೇಶಮಾಡಿದಂತೆ ತಿಳಿದುಬರುತ್ತದೆ. ಆಗಿನ ಕಾಲದ ಗುರುಗಳೂ ಹಾಗೇ ಇದ್ದರು, ಶಿಷ್ಯರೂ ಹಾಗೇ ಇದ್ದರು—"ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ, ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ" ಇಬ್ಬರೂ ಆಶ್ಚರ್ಯವ್ಯಕ್ತಿ ಗಳೇ! ಇಂದಿನ ಕಾಲಕ್ಕೆ ಉಪಯುಕ್ತವಾದ, ಇಂಥ ಒಂದು ಏಕಾಕ್ಷರ ಸಂದೇಶವನ್ನೊಳಗೊಂಡ, ಒಂದು ಸಣ್ಣ ಕಥೆಯನ್ನು ಹೇಳುತ್ತೇನೆ. ಇದು ಸುಮಾರು ಎರಡು ಮೂರು ಸಾವಿರ ವರ್ಷಗಳ ಹಿಂದಿನದು. ಅದೇನೆಂದರೆ:—

ದೇವತೆಗಳು, ಮನುಷ್ಯರು, ಅಸುರರು ಈ ಮೂವರೂ ತಮ್ಮ ತಂದೆಯಾದ ಪ್ರಜಾಪತಿಯ ಹತ್ತಿರ ಬ್ರಹ್ಮಚರ್ಯವ್ರತದಿಂದ ಶುಶ್ರೂಷೆ ಮಾಡಿಕೊಂಡಿದ್ದರು. ಅದರ ಅವಧಿ ಮುಗಿದ ಅನಂತರ ಮೊದಲು ದೇವತೆ ಗಳು ಬಂದು 'ನಮಗೆ ದಯೆಯಿಟ್ಟು ಉಪದೇಶಮಾಡಬೇಕು' ಎಂದು ಕೇಳಿದರು. ತಂದೆ ಅವರಿಗೆ 'ದ' ಎಂಬ ಒಂದು ಅಕ್ಷರವನ್ನು ನುಡಿದು,

'ತಿಳಿಯಿತೇ?' ಎಂದು ಕೇಳಿದನು. ಅವರು 'ತಿಳಿಯಿತು. ದಮನ ಮಾಡಿಕೊಳ್ಳಿ ಎಂದು ಅಪ್ಪಣೆಕೊಟ್ಟಿರಿ' ಎಂದರು. ತಂದೆ 'ಸರಿ! ತಿಳಿದುಕೊಂಡಿದ್ದೀರಿ' ಎಂದನು. ಅನಂತರ ಮನುಷ್ಯರು ಬಂದರು. ಅವರಿಗೂ 'ದ' ಎಂದೇ ಉಪದೇಶಮಾಡಿ, ತಂದೆ 'ತಿಳಿಯಿತೇ?' ಎಂದು ಕೇಳಿದನು. 'ತಿಳಿಯಿತು; ದಾನ ಮಾಡಿ ಎಂದು ಹೇಳಿದಿರಿ' ಎಂದರು. ತಂದೆ 'ಸರಿ! ತಿಳಿದುಕೊಂಡಿದ್ದೀರಿ' ಎಂದನು. ಹೀಗೆಯೇ ಅಸುರರು ಬಂದರು. ಅವರಿಗೂ 'ದ' ಎಂದೇ ಉಪದೇಶಮಾಡಿ, ತಂದೆ 'ತಿಳಿಯಿತೇ?' ಎಂದು ಕೇಳಿದನು. 'ತಿಳಿಯಿತು; ದಯೆ ತೋರಿಸಿ ಎಂದಿರಿ' ಎಂದರು. ತಂದೆ 'ಸರಿ! ತಿಳಿದುಕೊಂಡಿದ್ದೀರಿ' ಎಂದನು. ಇದು ಸಿದ್ಧಾಂತ: "ತದೇತತ್ತ್ರಯಂ ಶಿಕ್ಷೇತ್–ದಮಂ ದಾನಂ ದಯಾಮಿತಿ."*

ಮಹಾತ್ಮರ ಸನ್ನಿಧಿಯಲ್ಲಿ ನಡಸಿದ ತಪಶ್ಚರ್ಯೆಯ ಫಲವಾಗಿ ಒಂದಕ್ಷರವನ್ನು ಕೇಳಿದರೂ ಅದೇ ಸಾಕಷ್ಟು ಉಪದೇಶವಾಯಿತು. ತಮ್ಮ ತಮ್ಮ ಲೋಪದೋಷಗಳೂ ಅವುಗಳನ್ನು ತಿದ್ದಿಕೊಳ್ಳಲು ತಾವು ಕೈಕೊಳ್ಳಬೇಕಾದ ಕಾರ್ಯವೂ ಅವರಿಗೇ ಹೊಳೆಯಿತು. ದೇವತೆಗಳು ಕಲ್ಪವೃಕ್ಷ ಕಾಮಧೇನು ಚಿಂತಾಮಣಿಗಳುಳ್ಳವರು; ಅವರಿಗೆ ಮೀರಿದ್ದು ಯಾವುದೂ ಇಲ್ಲ. ಹೀಗೆಂದು ಅವರು ಸ್ವಾಚ್ಛಂದ್ಯದಿಂದ ಕಟ್ಟು ಹರಿದ ಪಂಜಾಗಬಾರದು. ಮನುಷ್ಯರು ಅಷ್ಟು ಪುಣ್ಯವಂತರಲ್ಲ; ಅವರಿಗೆ ಎಷ್ಟು ಬಂದರೂ ಸಾಲದು. ಹೀಗೆಂದು ಅವರು ಕಾರ್ಪಣ್ಯದಲ್ಲಿ ತೊಳಲಬಾರದು; ಪರಸ್ಪರ ಸಹಕಾರದಿಂದ ಕೊಟ್ಟು, ಬಿಟ್ಟು, ವರ್ತಿಸ ಬೇಕು. ಅಸುರರು ಕಂಡ ಕಂಡವರ ಮೇಲೆ ಬಿದ್ದು ಅವರನ್ನು ಬಾಯಿಗೆ ಹಾಕಿಕೊಳ್ಳದಿದ್ದರೆ ಸಾಕಾಗಿದೆ. ದಯೆ ತೋರಿ ಬಿಟ್ಟು ಬಿಟ್ಟರೆ ಅದೇ ಒಂದು ಕೋಟಿ. ಹಿಂದೆ ಯಾವ ಕಾಲದಲ್ಲಿ, ಯಾವ ಲೋಕದಲ್ಲಿ, ಶುದ್ಧದೇವತೆಗಳೂ ಶುದ್ಧ ಮಾನವರೂ ಶುದ್ಧ ಅಸುರರೂ ಇದ್ದರೋ, ಈಗಂತೂ ಎಲ್ಲ ಬೆರಕೆಯಾಗಿ ಹೋಗಿದೆ. ಎಂದರೆ, ನಾವೆಲ್ಲರೂ ದೇವತೆಗಳೂ ಹೌದು, ಮನುಷ್ಯರೂ ಹೌದು, ಅಸುರರೂ

* ಬೃಹದಾರಣ್ಯಕೋಪನಿಷತ್ತು. (ಅಧ್ಯಾಯ ೫, ಬ್ರಾಹ್ಮಣ ೨)

ಹೌದು. ನಮ್ಮಲ್ಲಿ ಈ ಮೂರು ಅಂಶಗಳೂ ಸೇರಿರುತ್ತವೆ. ಸಿಟ್ಟು ಬಂದಾಗ ನಾವೆಲ್ಲ ಅಸುರರೇ. ಅಯ್ಯೋ.ಪಾಪ ಎನ್ನಿಸಿದಾಗ ಮನುಷ್ಯರು. ಮದದಿಂದ ಸೊಕ್ಕಿದಾಗ ದೇವತೆಗಳು. ಆದ್ದರಿಂದ ' ತದೇತತ್ ತ್ರಯಂ ಶಿಕ್ಷೇತ್-ದಮಂ ದಾನಂ ದಯಾಮಿತಿ ' ದಮ ದಾನ ದಯೆ ಈ ಮೂರನ್ನೂ ಕಲಿಯಬೇಕು ಎಂದು ಒಟ್ಟುಕೂಡಿಸಿ ಹೇಳಿದ್ದು ನಮ್ಮೆಲ್ಲರಿಗೂ. ಒಬ್ಬೊಬ್ಬರೂ ಇದನ್ನು ಮನನ ಮಾಡಿ ಆಚರಣೆಗೆ ತರುವುದಾದರೆ, ಕುಟುಂಬದಲ್ಲಾಗಲಿ, ದೇಶದಲ್ಲಾಗಲಿ, ಜಗತ್ತಿನಲ್ಲಾಗಲಿ ಶಾಂತಿ ಸಮಾಧಾನಗಳು ನೆಲಸಿಯಾವು. ಹಾಗಲ್ಲದೆ, ತಮ್ಮ ಕೈಯಲ್ಲಿ ನಿಗ್ರಹಾನುಗ್ರಹ ಸಾಮರ್ಥ್ಯವಿದೆ ಎಂದು ದೇವತೆಗಳು ಉಚ್ಛೃಂಖಲವಾಗಿ ನಡೆದರೆ, ಎಷ್ಟು ಬಂದರೂ ಸಾಲದು ಎಂದು ಮನುಷ್ಯರು ಸ್ವಾರ್ಥಪರರಾಗಿ ದೀನಾನಾಥರಲ್ಲಿ ಕಾರ್ಪಣ್ಯವನ್ನು ತೋರಿಸಿದರೆ, ತಮ್ಮ ತೋಳಲ್ಲಿ ಬಲವಿದೆ, ಕೈಯಲ್ಲಿ ಆಯುಧವಿದೆ, ಇರಿ, ತಿವಿ, ಕೊಲ್ಲು, ಸುಡು ಎಂದು ಅಸುರರು ದಾಳಿ ಮಾಡಿದರೆ ದೇಶದಲ್ಲಿ ಶಾಂತಿ ಸೌಮನಸ್ಯಗಳು ಹೇಗೆ ಬರಬೇಕು ?

ಈಗಾಗಲೇ ನನ್ನ ಭಾಷಣ ದೊಡ್ಡದಾಯಿತು. ಇದನ್ನು ಇನ್ನೂ ಬೆಳಸಿ ಇಂದಿನ ಪ್ರಧಾನೋಪನ್ಯಾಸವಾಗಿಸಲು ನನಗೆ ಇಷ್ಟವಿಲ್ಲ. ಹಾಗೆ ಮಾಡಿದರೆ ನನ್ನ ಮಿತ್ರರ ಬಾಯಿಂದ ಅವರ ತುತ್ತನ್ನು ಕಿತ್ತುಕೊಂಡು ಅವರಿಗೆ ಎರಡನೆಯ ಸಾರಿ ಅನ್ಯಾಯ ಮಾಡಿದಂತಾಗುತ್ತದೆ. ಆದ್ದರಿಂದ ಇಂದು ತೆರೆಯಲಿರುವ ಬೆಳ್ಳಾವೆ ವೆಂಕಟನಾರಣಪ್ಪನವರ ಪುಸ್ತಕ ಭಂಡಾರದ ವಿಚಾರವಾಗಿ ಎರಡು ಮಾತನ್ನು ಹೇಳಿ ನನ್ನ ಈ ಭಾಷಣವನ್ನು ಮುಗಿಸುತ್ತೇನೆ.

ನಮ್ಮ ಮಿತ್ರರಾದ ಮ|| ಬೆಳ್ಳಾವೆ ಶಂಕರಯ್ಯನವರೂ ವೆಂಕಟರಾಮಯ್ಯನವರೂ ಅಭಿನಂದ್ಯರು. ಅವರ ತೀರ್ಥರೂಪರವರು ಗಳಿಸಿಟ್ಟಿದ್ದ ಈ ಸಾರಸ್ವತ ಭಂಡಾರವನ್ನು, ಅವರು ದೇಹ ತೆಯ್ದು ಈ ಪರಿಷತ್ತಿಗೆ ದಾನಮಾಡಬೇಕೆಂದು ಸಂಕಲ್ಪಿಸಿದ್ದು ಶ್ರೀ. ಶಂಕರಯ್ಯನವರಿಗೂ ವೆಂಕಟರಾಮಯ್ಯನವರಿಗೂ ಪರಿಷತ್ತಿನಲ್ಲೂ ಕನ್ನಡದಲ್ಲೂ ತಮ್ಮ ತಂದೆಯವರಿಗೆ ಇದ್ದ ಅಭಿಮಾನವೇ ಇರುವುದೆಂದು ವ್ಯಕ್ತಪಡಿಸುತ್ತದೆ.

ಪರಿಷತ್ತು ಇರುವವರೆಗೂ, ಅದನ್ನು ಸ್ಥಾಪಿಸಿದವರು, ಕಟ್ಟಿದವರು, ಅದರ ಕಾರ್ಯದರ್ಶಿಗಳು, ಕೋಶಾಧ್ಯಕ್ಷರು, ಪತ್ರಿಕೆಯ ಸಂಪಾದಕರು, ಪ್ರಕಟನೆಗಳ ಕರ್ತರು, ಬಹುಕಾಲ ಅದರ ಪ್ರಾಣ ಸ್ವರೂಪರಾಗಿದ್ದವರು ಎಂದು ವೆಂಕಟನಾರಣಪ್ಪನವರ ನೆನಪು ಇದ್ದೇ ಇರುತ್ತದೆ. ಇದು ಇನ್ನೂ ದೃಢಪಡುವಂತೆ ಈ ಭಂಡಾರವನ್ನು ದಾನಮಾಡಿದ್ದಕ್ಕಾಗಿ ಶ್ರೀ. ಶಂಕರಯ್ಯನವರಿಗೂ ಅವರ ಸೋದರರಿಗೂ ತಮ್ಮೆಲ್ಲರ ಪರವಾಗಿ ಕೃತಜ್ಞತೆಯನ್ನೂ, ಅಭಿನಂದನೆಯನ್ನೂ ಅರ್ಪಿಸುತ್ತೇನೆ.

ಈ ಸಂಬಂಧದಲ್ಲಿ ನನ್ನದೊಂದು ಸೂಚನೆಯಿದೆ. ಪರಿಷತ್ತಿನಲ್ಲಿ ಧರ್ಮಾರ್ಥವಾದ ವಾಚನಾಲಯ ಒಂದು ಇದೆಯಷ್ಟೆ. ಇಲ್ಲಿ ಈಗ ವೃತ್ತಪತ್ರಿಕೆಗಳನ್ನು ಮಾತ್ರ ಓದಬಹುದು. ಇದರಲ್ಲಿ ಪುಸ್ತಕ ಶಾಖೆಯೂ ಒಂದು ಏರ್ಪಟ್ಟು ಅಲ್ಲಿ ಯಾರು ಬೇಕಾದರೂ ಹೊಸದಾಗಿ ಪ್ರಕಟವಾದ ಕನ್ನಡ ಗ್ರಂಥಗಳು, ಅರಮನೆಯಿಂದ ಪ್ರಕಟವಾಗಿ ಬಂದಿರುವ ರಾಮಾಯಣ ಭಾರತ ಪುರಾಣಾದಿಗಳು ಮತ್ತು ಸಾಮಾನ್ಯ ಜನರು ಅಗತ್ಯವಾಗಿ ಓದಲೇ ಬೇಕೆಂದು ಪರಿಷತ್ತು ಭಾವಿಸುವ ಇತರ ಕೆಲವು ಗ್ರಂಥಗಳು–ಇವುಗಳನ್ನು ತೆಗೆದುಕೊಂಡು ಅಲ್ಲಿಯೇ ಕುಳಿತು ಓದಿ ಇಟ್ಟು ಹೋಗುವಂತಿರಬೇಕು. ಇದರಿಂದ ಜನರಲ್ಲಿ ಓದುವ ಅಭ್ಯಾಸ ಹೆಚ್ಚಾಗುತ್ತದೆ; ನನ್ನಂಥ ವಿಶ್ರಾಂತಿ ಪಡೆದ ಜನರು ಪುರಾಣ ಪುಣ್ಯಕಥೆಗಳನ್ನು ಓದಿಕೊಂಡು ಕಾಲಕ್ಷೇಪಮಾಡುವುದಕ್ಕೆ ಅನುಕೂಲ ಒದಗುತ್ತದೆ. ಜನದ ಅಭಿರುಚಿಯೂ ಸ್ವಲ್ಪಮಟ್ಟಿಗೆ ತಿದ್ದಿ ರೂಪುಗೊಳ್ಳುತ್ತದೆ. ಮಹತ್ವದ ಗ್ರಂಥಗಳೆನ್ನಿಸಿಕೊಂಡಿರುವವನ್ನು ಭಾಷಾಂತರದಲ್ಲಾದರೂ ಓದಿ ಅವುಗಳ ನಿಜವಾದ ಬೆಲೆಯನ್ನು ತಿಳಿಯುವಂತಾಗುತ್ತದೆ. ಇದಕ್ಕೆ ಮುಖ್ಯವಾಗಿ ಬರುವ ಅಡ್ಡಿ ಸ್ಥಳವಿಲ್ಲ, ಸಿಬ್ಬಂದಿ ಸಾಲದು, ಹಣ ಬೇಕು ಎಂಬುದು. ಇದು ಯಾವಾಗಲೂ ಎಲ್ಲಾ ಸಂಸ್ಥೆಗಳಲ್ಲೂ ಇರುವ ಕಷ್ಟವೇ. ಮಹಾಜನರು ಮನಸ್ಸುಮಾಡಿ ಸಹಕರಿಸಿದರೆ ಇದು ನಿವಾರಣೆಯಾಗಲಾರದ್ದೇನೂ ಅಲ್ಲ. ಎರಡನೆಯ ಅಡ್ಡಿ ಅಥವಾ ಆಕ್ಷೇಪಣೆ, ಪುಸ್ತಕಗಳು ಬಲು ಬೇಗ ಮಾಸಿ, ಹರಿದು ಹೋಗಿಬಿಡುತ್ತವೆ, ಕಳೆದು ಹೋಗಿಬಿಡುತ್ತವೆ ಎಂಬುದು. ಓದಿ ಓದಿ ಹರಿದರೆ, ಕಳೆದು

ಹೋದರೂ ಸರಿ, ಅದು ಪುಸ್ತಕಕ್ಕೆ ಒಂದು ಭೂಷಣ. ಅವುಗಳನ್ನು ರಟ್ಟುಕಟ್ಟಿಸಲು ಅಥವಾ ಹೊಸದಾಗಿ ಕೊಂಡು ಇಡಲು ಖರ್ಚು ಮಾಡಿದ ಹಣ ವ್ಯರ್ಥವಲ್ಲ.

ಈ ಸಂಬಂಧವಾಗಿ ನನಗೆ ಎರಡು ಸಂಗತಿಗಳು ಜ್ಞಾಪಕಕ್ಕೆ ಬರುತ್ತವೆ. ಮೊದಲನೆಯದು ನಿತ್ಯ ನಮ್ಮ ಮನೆಯಲ್ಲಿ ನೋಡುತ್ತಿರುವುದು—ಈಚೆಗೆ ಬರೆದು ಪ್ರಕಟವಾದ ಒಂದು ಪುಸ್ತಕದ ಅವಸ್ಥೆ. ಅದರ ಬೆಲೆ ಆರು ರೂಪಾಯಿಯೋ ಎಂಟು ರೂಪಾಯಿಯೋ ತಿಳಿಯದು. ಏಕೆಂದರೆ ಅದು ನನಗೆ ಬಿಟ್ಟಿ ಬಂದದ್ದು : ನನ್ನ ಮಿತ್ರರಾದ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು ವಿಶ್ವಾಸದಿಂದ ಕೊಟ್ಟದ್ದು—ಆಳಿದ ಮಹಾಸ್ವಾಮಿಯವರಾದ ಶ್ರೀಮನ್ ನಾಲ್ವಡಿ ಕೃಷ್ಣರಾಜ ಒಡೆಯರವರ ಚರಿತ್ರೆ. (ಈ ಮನೋಹರವಾದ ದೊಡ್ಡ ಗ್ರಂಥ ಇನ್ನೂ ನಾಲ್ಕು ದಿನ ಮುಂಚೆ ಬಂದಿದ್ದು ಅದನ್ನು ಶ್ರೀ ಕೃಷ್ಣರಾಜ ಒಡೆಯರವರು ಪರಾಂಬರಿಸಿ ಸಂತೋಷಪಟ್ಟು ಅದರ ಯೋಗ್ಯತೆಗೆ ತಕ್ಕಂತೆ ಗ್ರಂಥ ಕರ್ತರಿಗೆ ಸನ್ಮಾನಮಾಡಲಿಲ್ಲವಲ್ಲಾ ಎಂಬುದೊಂದು ದೊಡ್ಡ ಕೊರತೆ. ಅದಿರಲಿ.)ಆ ಪುಸ್ತಕ ನನ್ನ ಬೀರುವಿನಲ್ಲಿ ಜೂಲುಜೂಲಾಗಿ ಬಿದ್ದಿದೆ. ಏಕೆಂದರೆ, ಮುದುಕರಿಂದ ಮಕ್ಕಳವರೆಗೆ ಎಲ್ಲರೂ ಆ ಪುಸ್ತಕವನ್ನು ಕೇಳುವವರೇ. ಅದರ ತುಂಬ ಚಿತ್ರಪಟಗಳನ್ನು ಬೇರೆ ತುಂಬಿಸಿರುವುದರಿಂದ ನನ್ನ ಮೊಮ್ಮಕ್ಕಳು ಬಂದು ' ಮಹಾರಾಜರ ಪುಸ್ತಕ ಕೊಡು ' ಎಂದು ಪೀಡಿಸುತ್ತಾರೆ; ನನ್ನ ಒಪ್ಪಿಗೆಯ ನಿರೀಕ್ಷಣೆಯ ಮೇಲೆ ತಾವೇ ತೆಗೆದುಕೊಂಡೂ ಬಿಡುತ್ತಾರೆ. ಎಲ್ಲರೂ ಗುಂಪಾಗಿ ಕುಳಿತು, ಸ್ವಲ್ಪ ಓದು ಬರುವ ಹುಡುಗರು ಚಿತ್ರಗಳ ಹೆಸರನ್ನು ಓದುತ್ತಾರೆ. ಮಿಕ್ಕವರು ಅದನ್ನು ಪಿಳಪಿಳನೆ ಕಣ್ಣುಬಿಟ್ಟುಕೊಂಡು ನೋಡುತ್ತಾರೆ. ಗೊತ್ತಾಗದ ಕಡೆ, ವಿವರಣೆಯಿಲ್ಲದೆ ಮೂಕಚಿತ್ರವಾಗಿರುವ ಕಡೆ, ಅದನ್ನು ನನ್ನ ಹತ್ತಿರ ಹೊತ್ತು ತಂದು ಅದೇನು ಇದೇನು ಎಂದು ಕೇಳುತ್ತಾರೆ. ಈ ಮಧ್ಯೆ ಆ ಪುಸ್ತಕ ನಿರ್ದಯವಾದ ಎಳೆದಾಟಕ್ಕೆ ಸಿಕ್ಕಿ ಅದರ ಅಂಗಾಂಗಗಳೆಲ್ಲ ಶಿಥಿಲವಾಗಿ ಕಿತ್ತುಬರುತ್ತವೆ. ಹೀಗೆಂದು ಅದನ್ನು ಬೀಗ ಹಾಕಿಟ್ಟರೆ ಯಾರಿಗೆ ಏನು ಬಂದಹಾಗಾಯಿತು?

ಆದರ ಹೆರಳು ಮುರುಳು ಅವಸ್ಥೆಯು ಅದಕ್ಕೆ ಒಂದು ಭೂಷಣವೆಂದು ನಾನು ತಿಳಿದುಕೊಂಡಿದ್ದೇನೆ. ದಾರಿಯುದ್ದಕ್ಕೂ ಕಾಲುವೆಗಳಿಂದ ಹೊಲಗದ್ದೆಗಳಿಗೆ ಜೀವನವನ್ನೆರೆದು ಸಮುದ್ರ ಸೇರುವ ಹೊತ್ತಿಗೆ ಬಡ ವಾಗುವ ಸೀಳು ಸೀಳು ಕಾವೇರಿಯಂತೆ ಆಗಿದೆ ಅದರ ಸ್ಥಿತಿ.

ಎರಡನೆಯ ಸಂಗತಿ ಒಂದು ಪಬ್ಲಿಕ್ ಲೈಬ್ರರಿಯಲ್ಲಿ ನಡೆದದ್ದು. ಅಲ್ಲಿ ನಾನು ಪ್ರಸಿದ್ಧವಾದ ಒಂದು ಕನ್ನಡ ಪತ್ರಿಕೆಯನ್ನು ನೋಡ ಬೇಕೆಂದು ಹೋದೆ. ಅದನ್ನು ಅಲ್ಲಿಗೆ ತರಿಸುತ್ತಾರೆಂಬುದು ನನಗೆ ಗೊತ್ತು. ಹೋಗಿ ನೋಡಿದರೆ ಅದು ಮೇಜುಗಳ ಮೇಲೆ ಎಲ್ಲೂ ಇಲ್ಲ. ಭಂಡಾರಿಗಳನ್ನೇ ಕೇಳಿದೆ. ಅವರು 'ಅದನ್ನು ಮೇಜಿನ ಮೇಲೆ ಹಾಕುವುದಿಲ್ಲ; ಬಹುಜನ ಕೈಯಲ್ಲಿ ಹಿಡಿದು ಹಿಡಿದು ಓದಿ ಹರಿದು ಹಾಕಿಬಿಡುತ್ತಾರೆ' ಎಂದರು. ನನಗೆ ನಗು ಬಂತು. 'ಹರಿದುಹಾಕಲಿ! ಏನು ನಷ್ಟ?' ಎಂದೆ. 'ಅದನ್ನು ಆಮೇಲೆಯೂ ಎಲ್ಲರೂ ಕೇಳು ತ್ತಾರೆ. ಆದ್ದರಿಂದ ಸಂಪುಟವಾಗಿ ರಟ್ಟು ಕಟ್ಟಿಸಬೇಕು' ಎಂದು ಅಧ್ಯಕ್ಷರು ಆಜ್ಞೆ ಮಾಡಿದ್ದಾರೆ. ಮೇಜಿನ ಮೇಲೆ ಹಾಕಿದರೆ, ರಟ್ಟು ಕಟ್ಟಿಸುವುದಕ್ಕೆ ಆಮೇಲೆ ಅಲ್ಲಿ ಏನೂ ಇರುವುದೇ ಇಲ್ಲ' ಎಂದರು. ನಾನು 'ಹೀಗೆ ಮಾಡಬೇಡಿ; ಎರಡು ಸಂಚಿಕೆಗಳಿಗೆ ಚಂದಾ ಕೊಟ್ಟು ತರಿಸಿ. ಒಂದನ್ನು ಮೇಜಿನ ಮೇಲೆ ಹರಿಯುವುದಕ್ಕೆಂದೇ ಹಾಕಿ; ಇನ್ನೊಂದನ್ನು ಹೊಸದಾಗಿಟ್ಟು ರಟ್ಟುಕಟ್ಟಿಸಿ; ಕನ್ನಡ ಪತ್ರಿಕೆಗಳಿಗೆ ಚಂದಾ ನಾಲ್ಕಾರು ಪೌಂಡುಗಳೇನೂ ಆಗುವುದಿಲ್ಲ' ಎಂದು ಹೇಳಿದೆ. ಅವರು ಹಾಗೆಯೇ ಮಾಡುತ್ತೇನೆಂದರು.

ಈಗ ಬೆಂಗಳೂರಿನಲ್ಲಿ ಪಬ್ಲಿಕ್ ಲೈಬ್ರರಿ ಈ ಕೆಲಸವನ್ನು ಮಾಡು ತ್ತಿಲ್ಲವೇ ಎಂದು ನೀವು ಕೇಳಬಹುದು. ನಿಜ, ಮಾಡುತ್ತಿದೆ. ಆದರೆ, ಅದು ಇರುವುದು ಸುಂದರವಾದ ಉದ್ಯಾನದ ಮಧ್ಯದಲ್ಲಾದರೂ, ಪ್ರಸಿದ್ಧ ವಾದ ಫಲಾಹಾರಮಂದಿರದ ಹತ್ತಿರದಲ್ಲಾದರೂ, ಎಲ್ಲೋ ಒಂದು ಅಭುಕ್ತ ಮೂಲೆಯಲ್ಲಿ. ಸ್ವಲ್ಪ ಅಲಸ ಸ್ವಭಾವದವರು, ಅಥವಾ ಅಶ ಕ್ತರು 'ಅಷ್ಟು ದೂರ ಯಾರಪ್ಪಾ ಹೋಗುತಾರೆ' ಎಂದು ಹಿಂತೆಗೆಯು ವುದು ಸ್ವಾಭಾವಿಕ. ಅಲ್ಲದೆ ಇಷ್ಟು ದೊಡ್ಡ ಊರಿಗೆ ಕನ್ನಡ ವಿಭಾಗ

ಕ್ಕಾದರೂ ಎರಡು ಸಾರ್ವಜನಿಕ ಪುಸ್ತಕಭಂಡಾರಗಳು ಬೇಡವೇ ?

ಪರಿಷತ್ತು ಹುಟ್ಟಿದಂದಿನಿಂದ ಅದರ ಪುಸ್ತಕ ಭಂಡಾರ ಬೆಳೆಯುತ್ತ ಬಂದಿದೆ. ಈಗ ಅದರಲ್ಲಿ ಸುಮಾರು ಹತ್ತುಸಾವಿರ ಪುಸ್ತಕಗಳ ತನಕ ಶೇಖರವಾಗಿದೆ ಎಂದು ನನಗೆ ತೋರುತ್ತದೆ. ಇದರಲ್ಲಿ ಒಂದು ದೊಡ್ಡ ಭಾಗ ವಿದ್ಯಾಭ್ಯಾಸದ ಇಲಾಖೆಯಿಂದ ಬಂದದ್ದು. ಇವುಗಳನ್ನು ಪರಿಷತ್ತು ಇನ್ನೂ ಹೆಚ್ಚು ವಿತರಣೆಯಿಂದ ಮಹಾಜನರಿಗೆ ಒದಗಿಸುತ್ತದೆಂದೂ, ಅವರೂ ಅದನ್ನು ಹೆಚ್ಚು ಆಸಕ್ತಿಯಿಂದ ಉಪಯೋಗಿಸಿಕೊಂಡು ಫಲ ಪಡೆಯುವರೆಂದೂ ಆಶಿಸಬಹುದಾಗಿದೆ.

ಮಹಾಶಯರೆ, ಇಷ್ಟು ತಾಳ್ಮೆಯಿಂದ ನನ್ನ ಭಾಷಣವನ್ನು ಕೇಳಿದ್ದಕ್ಕಾಗಿ ನಾನು ತಮ್ಮೆಲ್ಲರನ್ನೂ ವಂದಿಸಿ, ಇಂದಿನಿಂದ ಮೂರುದಿನ ನಡೆಯುವ ಈ ಉತ್ಸವದಲ್ಲಿ ತಾವೂ ತಮ್ಮ ಇಷ್ಟಮಿತ್ರರೂ ಭಾಗಿಗಳಾಗಿ ಅದನ್ನು ಯಶಸ್ವಿಯಾಗುವಂತೆ ನಡಸಿ ಕೊಡಬೇಕೆಂದು ಪ್ರಾರ್ಥಿಸುತ್ತೇನೆ.

೧೯–೭–೧೯೪೭.

# ರನ್ನನ ರಸಪ್ರತಿಪಾದನೆ

ಪ್ರಾಚೀನ ಕನ್ನಡ ಸಾಹಿತ್ಯವು ಸಂಸ್ಕೃತ ಸಾಹಿತ್ಯದ ಪಡಿಯಚ್ಚೆಂದು ಹೇಳುವುದುಂಟು. ಈ ಮಾತು ಬಹುಮಟ್ಟಿಗೆ ನಿಜವೆಂಬುದರಲ್ಲಿ ಸಂದೇಹವಿಲ್ಲ. ಏಕೆಂದರೆ ಬಿಂಬವು ಹೇಗಿದ್ದರೆ ಪ್ರತಿಬಿಂಬವೂ ಹಾಗೆಯೇ ಇರುವುದು ಸ್ವಾಭಾವಿಕ; ಆದರೂ ಬಿಂಬ ಪ್ರತಿಬಿಂಬಗಳಿಗೆ ವ್ಯತ್ಯಾಸವಿದ್ದೇ ಇರುತ್ತದೆ. ಅದರಲ್ಲಿಯೂ ನೂತನ ಪ್ರಪಂಚವನ್ನು ಸೃಷ್ಟಿಸುವ ಕವಿಪ್ರತಿಭೆಯಲ್ಲಿ ಪ್ರತಿಫಲಿತವಾಗಿ ಪ್ರಕಾಶಿಸುವ ಜೀವಂತವಾದ ಪ್ರತಿಬಿಂಬದಲ್ಲಿ ಅತಿಶಯ ಇರುವುದರಲ್ಲಿ ಆಶ್ಚರ್ಯವೇನು? ಆದ್ದರಿಂದ ಉದ್ದಾಮ ಕನ್ನಡ ಕವಿಗಳ ಗ್ರಂಥಗಳನ್ನು ತೆಗೆದುಕೊಂಡು ನೋಡಿದರೆ ಅವು ಸಂಸ್ಕೃತ ಸಾಹಿತ್ಯದ ಅನುಕರಣ ಮಾತ್ರವಲ್ಲವೆಂದೂ, ಪೂರ್ವಾಚಾರ್ಯರ ಸಂಪ್ರದಾಯವು ಪೂರ್ವಜನ್ಮಸಂಸ್ಕಾರದಂತೆ ಮೆಟ್ಟಿಕೊಂಡಿದ್ದರೂ, ಅವು ಜೀವರಸದಿಂದ ತುಂಬಿ ತಲೆಯೆತ್ತಿಕೊಂಡು ನಿಲ್ಲಬಲ್ಲವೆಂದೂ ಗೊತ್ತಾಗುತ್ತದೆ.

ರನ್ನನು ಕನ್ನಡ ಸಾಹಿತ್ಯದ ಪ್ರಾಚೀನ ಕವಿಗಳಲ್ಲಿ ಒಬ್ಬನು; ಆದರೂ 'ಆದಿ ಕವಿ' ಯಲ್ಲ. ಕನ್ನಡದಲ್ಲಿ ಆ ಹೆಸರು ಯಾರಿಗಾದರೂ ಸಲ್ಲಬಹುದಾಗಿದ್ದರೆ ಅದು ಆದಿಪಂಪನಿಗೆ ಸಲ್ಲಬೇಕು. ಕಾಳಿದಾಸನಿಗೆ ವಾಲ್ಮೀಕಿ ಹೇಗೋ, ಕಾಳಿದಾಸಾದಿಗಳು ಪಂಪನಿಗೆ ಹೇಗೋ, ರನ್ನ ಮುಂತಾದವರಿಗೆ ಪಂಪನು ಹಾಗೆ. ಆದ್ದರಿಂದ ರನ್ನನಲ್ಲಿ ಪಂಪನ ಅನುಕರಣದ ಮೂಲಕ ಸಂಸ್ಕೃತದ ಪ್ರಭಾವವನ್ನು ಕಾಣಬಹುದು; ಸಾಲದ್ದಕ್ಕೆ ರನ್ನನಿಗೆ ಬಾಣಕಾಳಿದಾಸಾದಿಗಳ ಸಾಕ್ಷಾತ್ಪರಿಚಯ ಬೇರೆ. ಆದ್ದರಿಂದ ಸಂಸ್ಕೃತ ಸಾಹಿತ್ಯದ ಸಾಕ್ಷಾತ್ ಪರಂಪರಾ ಸಂಸ್ಕಾರವೆಲ್ಲವೂ ಅವನ ಗ್ರಂಥಗಳಲ್ಲಿ ಸ್ಪಷ್ಟವಾಗಿದೆ.

ಸಂಸ್ಕೃತ ವಾಙ್ಮಯ ಪ್ರಪಂಚವು ಮೊದಲು ಹಸುರಾಗಿ ಹುಲುಸಾಗಿ ನಗುತ್ತ ನಲಿಯುತ್ತಿದ್ದ ಸಸಿಗಳಿಂದ ಕೂಡಿ ಉದ್ಯಾನ ವನದಂತೆ ಶೋಭಿಸುತ್ತಿತ್ತು. ಆದರೆ ಅದೇ ಬೆಳೆಯುತ್ತ ಹೋಗಿ, ಕಾಲಕ್ರಮದಲ್ಲಿ

ಅಗಾಧವಾದ ಮರಗಳಿಂದೊಡಗೂಡಿ ದಿಕ್ಕು ತೋರದಂತಹ ಕಾಡಾಗಿ ಹೋಯಿತು. ಈ ಮಾತನ್ನು ಶಾಸ್ತ್ರ ಸಾಹಿತ್ಯಗಳೆರಡಕ್ಕೂ ಅನ್ವಯಿಸ ಬಹುದು. ಈಗ ಶಾಸ್ತ್ರಗಳಲ್ಲಿ ವ್ಯಾಖ್ಯಾನ ವಾರ್ತಿಕ ಭಾಷ್ಯ ತರ್ಕಪರಿಷ್ಕಾರ ಕ್ರೋಡಪತ್ರಾದಿಗಳು ತುಂಬಿ ಹೋಗಿ ಅವು ದುರವಗಾಹವಾಗಿವೆ. ಸಾಹಿತ್ಯದಲ್ಲಿಯೂ ಅದೇ ರೀತಿಯಲ್ಲಿ ಚಮತ್ಕಾರ ಅಲಂಕಾರ ಕವಿ ಸಮಯ ಇವು ತುಂಬಿಹೋಗಿ ಕಾವ್ಯ ಓದುವುದೇ ಕಷ್ಟವಾಗಿದೆ. ಪರ ಭಾಷೆಯನ್ನಾದರೂ ಕಲಿತು ಓದೇವು, ಸಂಸ್ಕೃತ ಬೇಡ, ಕನ್ನಡ ಬೇಡ ಎನ್ನುವ ಹಾಗಾಗಿದೆ. ಆದ್ದರಿಂದ ಅನೇಕವೇಳೆ ಕವಿಯಲ್ಲಿ ಪಾಂಡಿತ್ಯ ಕಡಮೆಯಾದಷ್ಟೂ ಕಾವ್ಯವು ಮೇಲಾಗುವುದೆನ್ನಿಸುತ್ತದೆ. (ಇದು ಕ್ಲಿಷ್ಟ ಕಾವ್ಯವನ್ನು ಓದಿ ಅರ್ಥ ಮಾಡಿಕೊಳ್ಳಲಾರದೆ, ಆ ವಿದ್ವಜ್ಜಾಲದಿಂದ ಬಿಡಿಸಿಕೊಂಡು ಬರಲಾರದೆ ಆ ಪಾಂಡಿತ್ಯ ಸೈಕತದಲ್ಲಿ ತೈಲವನ್ನು ತೆಗೆಯಲಾರದೆ ಹೇಳುವ ಮಾತಲ್ಲ.) ಕವಿಯಾಗಲಿ ಕಾವ್ಯ ಪಾಠಕ ನಾಗಲಿ ಪಾಂಡಿತ್ಯಕ್ಕೆ ಮರುಳಾದನೋ ಹುಚ್ಚು ಹೊಳೆಗೆ ಸಿಕ್ಕಿದ ಹುಲ್ಲು ಕಡ್ಡಿಯ ಹಾಗೂ, ಪಲ್ಲವಿಯ ಸಂಕೀರ್ಣ ತಾಳಸ್ವರಗಳಿಗೆ ಸಿಕ್ಕಿದ ಸಂಗೀತಗಾರನ ಹಾಗೂ ಅದರ ಕೈಯಿಂದ ಬಿಡಿಸಿಕೊಂಡು ಬರುವುದೇ ಕಷ್ಟ. ಅದಕ್ಕೆ, ಆ ಪಾಂಡಿತ್ಯ ಪ್ರವಾಹವನ್ನು ತಡೆದಿಡ ಬಲ್ಲ, ಅದಕ್ಕಿಂತಲೂ ಹೆಚ್ಚು ಆನಂದವನ್ನು ಕೊಡಬಲ್ಲ ರಸಿಕತೆ ಬೇಕು. ಅಂಥ ರಸಿಕತೆಯೊಂದಿದ್ದರೆ ಭೂಮಿಯನ್ನು ಭೇದಿಸಿಕೊಂಡು ಉಕ್ಕಿ ಹಾರುವ ಅದಮ್ಯವಾದ ಬುಗ್ಗೆಯಂತೆ ಅದು ಸಕಲ ಬಂಧನಗಳನ್ನೂ ಕಿತ್ತು ಒಗೆದು ತಾನೇ ತಾನಾಗಿ ಶೋಭಿಸುತ್ತ ನಿಂತು ಸುಖಗೊಳಿಸುವುದು.

ರನ್ನನು ಇದಕ್ಕೆ ಒಳ್ಳೆಯ ಉದಾಹರಣೆ. ಅವನು ಸಂಸ್ಕೃತ ವಿದ್ವಾಂಸ. ಆದರೂ ರಸಿಕನಾದ್ದರಿಂದ ಅವನ ಗ್ರಂಥಗಳಲ್ಲಿ ಜಗನ್ನಾಥ ವಿಜಯ ರಾಜಶೇಖರವಿಲಾಸ ಮುಂತಾದ ಕಾವ್ಯಗಳಲ್ಲಿ ಬರುವ ಅಲಂಕಾರಭಾರವೂ ಕವಿಸಮಯ ಚರ್ವಣವೂ ಚಮತ್ಕಾರ ಪ್ರದರ್ಶನವೂ ಇಲ್ಲ. ಅವನ ಭಾಷೆಯಲ್ಲಿ 'ಕಿಂ ಕೇನ ಸಂಗತಂ,' '[illegible] ರತ್ನಾ ವಸುಂಧರಾ,' 'ತನ್ನಷ್ಟಂ ಯನ್ನದೀಯತೇ,' '[illegible]

ವಾಸವಃ,' 'ಇಷ್ಟಂ ಧರ್ಮೇಣ ಯೋಜಯೇತ್,' ಎಂದು ಮುಂತಾದ ಸಂಸ್ಕೃತ ವಾಕ್ಯಗಳೇ ಮಧ್ಯೇ ಮಧ್ಯೇ ಬರುತ್ತವೆ. ಅವನು ಪಂಪನನ್ನನುಸರಿಸಿ "ನಾನಾಚ್ಛಂದೋಬಂಧ" ದಲ್ಲಿರುವ ಸಂಸ್ಕೃತ ಶ್ಲೋಕಗಳಲ್ಲಿಯೇ ದೇವತಾಸ್ತುತಿ ಮಾಡಿದ್ದಾನೆ. ಕನ್ನಡವೆಂದು ಬರೆಯುವುದಕ್ಕೆ ಹೊರಟಾಗಲೂ "ಸಂಸ್ಕೃತಾರಣ್ಯ ಸಂಚಾರಿ ವಿದ್ವನ್ಮತ್ತೇಭ" ದಂತೆ "ಕುರುರಾಜ ರತ್ನ ಮಕುಟೋತ್ಕೂಟಾಂಘ್ರಿ ಸಂಘಟ್ಟ ಸಂಗರಂ," "ಕುರುರಾಜಾನುಜಭೀಕರ ಕರ ವಿಲುಳಿತ ನೀಲ ಕಬರಿ ಭರಮುಂ," "ಪ್ರತಿದಿನ ಪ್ರವರ್ತಿತಾಷ್ಟಾದಶಕೋಟಿ ಸುವರ್ಣದಾನ ಸಂತರ್ಪಿತ ಸಕಲ ಭೂಸುರ ಲೋಕನುಂ" ಎಂದು ಬರೆಯುವನು. ಆದರೆ ಘನಗಂಭೀರವಾದ ಆ ಸಂಸ್ಕೃತ ವಾಗ್ಧೋರಣೆಯು ರಸೋಚಿತವಾಗಿ ಗುಣವೆನ್ನಿಸುತ್ತದೆ. ವಾಗಾಡಂಬರವಿದ್ದರೂ ಆ ಶೈಲಿಯಲ್ಲಿ ಅರ್ವಾಚೀನ ಪಂಡಿತಕವಿ ಪ್ರಿಯಗಳಾದ, ಔಚಿತ್ಯವಿಲ್ಲದ ಸಾದೃಶ್ಯಾದಿಗಳಿಂದ ಗರ್ಭಿತವಾದ, ಶ್ಲೇಷ ವಿರೋಧಾಭಾಸ ಯಮಕ ಪರಿಸಂಖ್ಯೆ ಮೊದಲಾದ ಅಲಂಕಾರದ ಗಂಟುಕೊಂಟುಗಳು ಬರುವುದಿಲ್ಲ. ಪಂಡಿತ ಕವಿಗಳು ಇಂದ್ರನೊಡನೆ ಅರ್ಧಾಸನವನ್ನಾದರೂ ಬಿಟ್ಟಾರು, ಈ ಶ್ಲೇಷವನ್ನೂ ಅದರ ಜ್ಞಾತಿಗಳಾದ ವಿರೋಧಾಭಾಸ ಪರಿಸಂಖ್ಯೆಗಳನ್ನೂ ಬಿಡಲಾರರು. ಬಹುಶಃ ಶಬ್ದಾಲಂಕಾರಕ್ಕೆ ಮರುಳಾಗದ ಲೇಖಕನೇ ಇರಲಾರನು. ಆದರೆ ಆ ಮರುಳತನದಲ್ಲಿ ಅಲಂಕಾರಕ್ಕೋಸ್ಕರ ಜೀವವನ್ನು ಕಳೆದುಕೊಳ್ಳುತ್ತಾರೆಯೆ? ಪಾಠಕರು ಕಾವ್ಯಗಳನ್ನು ಓದುವುದು ರಸಕ್ಕೋಸ್ಕರ—ಶಬ್ದಾಲಂಕಾರದ ಸದ್ದಿಗಲ್ಲ. ಹೆಣ್ಣು ನೋಡುವುದಕ್ಕೆ ಹೋಗುವವರು ಹುಡುಗಿಯ ರೂಪು ಗುಣ ಕುಲ ಮುಂತಾದವುಗಳನ್ನು ನೋಡಿ ಮೆಚ್ಚುತ್ತಾರೆಯೇ, ಅದರ ಕಾಲಿನ ಗೆಜ್ಜೆ ಕಡಗ ಕಾಲುಂಗರ ಇವುಗಳ ಸದ್ದನ್ನು ಕೇಳಿ ಮೆಚ್ಚುತ್ತಾರೆಯೇ? ಅದರಂತೆಯೇ ಹಸುವಿನ ಬೆಲೆ ಅದು ಕೊಡುವ ಹಾಲಿನ ಮೇಲೆ ಹೋಗುತ್ತದೆಯೇ ಹೊರತು, ಅದರ ಕತ್ತಿಗೆ ಗಂಟೆ ಕಟ್ಟಿದೆಯೇ ಇಲ್ಲವೇ, ಅದರ ಸದ್ದು ಚೆನ್ನಾಗಿದೆಯೇ ಇಲ್ಲವೇ, ಅದರಲ್ಲಿ ಓಂಕಾರವನ್ನು ಕೇಳಬಹುದೇ ಇಲ್ಲವೇ ಎಂಬ ಅಂಶಗಳ ಮೇಲೆ ಹೋಗುವುದಿಲ್ಲ.

ರನ್ನನು ಈ ದೂರಿಗೆ ಈಡಾಗಿಲ್ಲ. ಅಹನು—"ಅಲ್ಲಿ ಕಂಟಕ ವೃತ್ತಿಯುಂ ವಯಃಪರಿಣತಿಯುಂ ಫಲತರುಗಳೊಳ್........ಗೋಸಾಸ ಮಲ್ಲದೆ ಕನ್ನೆ ಗೋಸಾಸಮಿಲ್ಲ"—

"ಅಜಿತಂ ವಿಷಯ ವಿಷಂಗ
ಳ್ಗಜಿತನನಂಗಂಗೆ ಖಳಕಷಾಯಭಟರ್ಗ ॥
ಳ್ಗಜಿತನೆನಿಪ ಜಿತ ಜಿನನಪ
ವೃಜಿನನಪಾಕೃತಕೃತಾಂತ ಕೋಪಾಟೋಪಂ ॥"

"ಅಧಿಕಾರಿಂಗಳೆನೆ ಸ್ವೈರಿಸೆವಧಿಕಾರಿಂಗಳಾಗಿ ಬಾಟ್ಗೆ ಬಡವುಗಳ್" ಎಂದು ಬರೆದರೆ ಅದು ಅಪರೂಪ, ಅಪವಾದ, ಸುಲಭಗ್ರಾಹ್ಯ. ಹೀಗೆ ಬರೆಯುವುದು ಪದ್ಧತಿಯಾಗಿ ಬಂದಿದೆಯಲ್ಲಾ, ತಾನೂ ಎಲ್ಲಿಯಾದರೂ ಹೀಗೇ ಬರೆದೇ ಬರೆಯಬೇಕಲ್ಲಾ, ಬರೆಯದೇ ಹೋದರೆ ತನ್ನ ಗ್ರಂಥವು ಮಾನ್ಯವಾಗದೇ ಹೋದೀತಲ್ಲಾ ಎಂದು ಅವುಗಳನ್ನು ಬರೆದಂತೆ ತೋರುತ್ತದೆ.

"ಪಾತಾಳತಳಮನೆಯ್ದಿದ
ಖಾತಂ ಸುರಪುರಮನೆಯ್ದಿದಟ್ಟಳೆ ಪೆಂಪು ।
ದ್ಯೋತಿಸೆ ಪುರವಿಟ್ಟಾವುದು ಭೋ
ಗಾತಿಶಯದ ಭೋಗವತಿಯನಮರಾವತಿಯಂ ॥

ಮುಂತಾದ ಅತಿಶಯೋಕ್ತಿಗಳಿಗೂ ಈ ಸಂಪ್ರದಾಯ ರಕ್ಷಣೆಯೇ ಕಾರಣ ವಾಗಿರಬೇಕು; ಅಜಿತ ಪುರಾಣವು ಧಾರ್ಮಿಕ ಗ್ರಂಥ; ಧರ್ಮದಲ್ಲಿ ಆಚಾರಪಾಲನೆ ಮುಖ್ಯ; ಅದಕ್ಕೆ ಅರ್ಥವಿಲ್ಲವೆಂದಾಗಲಿ ಅದನ್ನು ನಡೆಸುವುದಕ್ಕೆ ಮನಸ್ಸಿಲ್ಲವೆಂದಾಗಲಿ ನುಡಿದರೆ ಬಹಿಷ್ಕಾರ! ಆದರೆ ಇಂಥ ಅಂಶಗಳು ಅಜಿತ ಪುರಾಣದಲ್ಲಿಯೂ ಅಲ್ಪ; ಗದಾಯುದ್ಧದ ಲ್ಲಂತೂ ರನ್ನನು ಈ ವಿಧವಾದ ರಚನೆಗೆ ಮನಸ್ಸನ್ನೇ ಕೊಡನು. ಆದರೂ ಅವನಿಗೆ ಒಂದು ವಿಧವಾದ ಯಮಕದ ಮೇಲೆ ತುಂಬ ಆಶೆ ಇರುವಂತೆ ತೋರುತ್ತದೆ.—

೧. ಶ್ರೀಕಾಂತಂ ಸಮರಜಯ ಶ್ರೀಕಾಂತಂ,
೨. ಕೃತಿಯಂ ವಿರಚಿಸಿದನಲಂಕೃತಿಯಂ,

೩. ನಾಯಕಮಿಲ್ಲದ ತೊಡವಿನನಾಯಕನಿಲ್ಲದ ದಿನಾವಸಾನಂ,
೪. ಕಾಂತೆಯರೊಳ್ ರಾಜ್ಯಶ್ರೀಕಾಂತೆಯೊಳ್

ಎಂದು ಮುಂತಾದ ಪ್ರಯೋಗಗಳು ಅಲ್ಲಲ್ಲಿ ಕಂಡು ಬರುವುವು. ಆದರೆ ಇವು ಯಾವುವುಗಳಿಂದಲೂ ರಸಸ್ಫೂರ್ತಿಗೂ ಪ್ರವಾಹಕ್ಕೂ ಅಡಚಣೆ ಇಲ್ಲ; ಬುದ್ಧಿಗೆ ಕ್ಲೇಶವಿಲ್ಲ; ಅದು ಕೃತಕ ಚಮತ್ಕಾರ ಪ್ರದರ್ಶನ ವೆಂಬ ಭಾವನೆ ಇಲ್ಲ; ಅಲಂಕಾರವು ತೊಡರಲ್ಲ ತೊಡವು ಎನ್ನಿಸುತ್ತದೆ. ಆದರೆ, ಇಂಥವನೂ—" ಪಡೆಯಿಡೆಯ ಕಡೆಯ ಬಡವರ್ ಕುಡೆ ಪಡೆ ದನೋ! " ಎಂದು ಮಾತಿನಲ್ಲಿ ಅರಳು ಹುರಿಯುವುದನ್ನು ಮತ್ತು

" ನವಭೂತ ಭಾಷೆಯಿಂ ಕುಱು
ವುವೇೞ್ದು ತಾಮುದ್ದಗವಿತೆಯಂ ಮಾಡಿ ಮಹಾ।
ವ್ಯವಸಾಯಂ ಗೆಯ್ವು ಮರು
ಳ್ಗವಿಗಳ್ ತಾವೇಂ ಗುಣಾಢ್ಯರಂ ಮಸುಳಿಸರೇ ॥ "
" ಗುರುವಂ ಲಘುಸಂಧಾನದೆ
ನೆರೆನಿಸೆ ಗುರು ಲಘು ವಿಮಿಶ್ರಿತಂ ದೊರೆಕೊಳೆ ತ।
ದ್ಗುರು ತಚ್ಛಂದೋವೃತ್ತಿಗೆ
ದೊರೆಯೆನಿಸಿರ್ದುದು ಮನಕ್ಕೆ ದುರ್ಯೋಧನನಾ ॥ "

ಎಂಬ ಪದ್ಯಗಳಲ್ಲಿ, ರಣರಂಗವನ್ನು ವರ್ಣನೆ ಮಾಡುತ್ತಿರುವಾಗ, ಪೈಶಾಚೀಭಾಷೆಯಲ್ಲಿ ಬೃಹತ್ಕಥೆಯನ್ನು ಬರೆದ ಗುಣಾಢ್ಯನನ್ನೂ ಗುರು ಲಘುಗಳ ರಚನೆಯುಳ್ಳ ಛಂದಶ್ಶಾಸ್ತ್ರವನ್ನೂ ಶ್ಲೇಷೆಯಿಂದ ಎಳೆದು ತಂದು ಹಾಕಿರುವುದನ್ನು ನೋಡಿದರೆ ಈ ಅಲಂಕಾರಾಪ್ಸರೆಯರು ಎಂಥಾ ವಿವೇಕಿಯನ್ನೂ ಅನೌಚಿತ್ಯಕ್ಕೆ ಮನಸ್ಸು ಕೊಡುವಂತೆ ಮಾಡು ತ್ತವೆಂದು ಹೇಳಬೇಕಾಗುತ್ತದೆ.

ಇವೆಲ್ಲ ಕಾವ್ಯಶರೀರಕ್ಕೆ, ಬಾಹ್ಯಶರೀರಕ್ಕೆ, ಸಂಬಂಧಪಟ್ಟ ಅಂಶ ಗಳು. ಆದರೂ ಈ ವಿಚಾರಗಳನ್ನು ಮೊದಲು ತೆಗೆದುಕೊಂಡು, ರನ್ನನು ಸಂಪ್ರದಾಯಸಿದ್ಧವಾಗಿ ಬೇರೂರಿ ನಿಂತ ಬಾಹ್ಯಾಡಂಬರಕ್ಕೆ ಮರುಳಾಗದೆ ಅದನ್ನು ತನ್ನ ರಸಿಕತೆಗೆ ವಶಮಾಡಿಕೊಂಡಿದ್ದಾನೆಂದು ತೋರಿಸಿದ್ದಾಯಿತು. ಏಕೆಂದರೆ, ಈ ವಿಧವಾದ ರೀತಿ ಗುಣಾಲಂಕಾರ

ಚಮತ್ಕಾರಾದಿ ಬಾಹ್ಯಾಂಶಗಳಿಗೇ ಅನೇಕ ಕವಿಗಳೂ ಲಕ್ಷಣಕಾರರೂ ಪ್ರಾಶಸ್ತ್ಯ ಕೊಟ್ಟಿದ್ದಾರೆ. ಕೆಲವು ಗ್ರಂಥಗಳು ಘನ ಕಾವ್ಯಗಳಾಗಿರುವುದೂ ಈ ಬಣ್ಣದ ಬೆಂಡಿನ ಅಲಂಕಾರ ಚಮತ್ಕಾರಗಳಿಂದಲೇ; ಪಂಡಿತರಲ್ಲದ ಪಾಠಕರು ಇವುಗಳನ್ನು ಓದಲು ಬೇಸರಪಟ್ಟುಕೊಳ್ಳುತ್ತಿರುವುದೂ ಗಟ್ಟಿಯಾದ ಈ ಹೊರಗಿನ ಹೆಪ್ಪನ್ನು ನೋಡಿ ಹೆದರಿಕೊಂಡೇಯೆ.

ರನ್ನನು ಈ ಬಾಹ್ಯಾಂಶಗಳನ್ನು ಪ್ರಧಾನವಾಗಿ ಎಣಿಸದೆ ಕಾವ್ಯಕ್ಕೆ ಜೀವವಾದ ರಸಕ್ಕೆ ಪ್ರಾಧಾನ್ಯವನ್ನು ಕೊಟ್ಟು ಆ ರಸಕ್ಕೆ ಗುಣಾಲಂಕಾರ ಶೈಲಿಗಳು ಎಷ್ಟೆಷ್ಟು ಪೋಷಕವಾದರೆ ಅವಕ್ಕೆ ಅಷ್ಟಷ್ಟು ಪ್ರಾಶಸ್ತ್ಯವನ್ನು ಕೊಟ್ಟಿದ್ದಾನೆ. ಇದನ್ನು ಅವನ ಮಾತಿನಿಂದಲೂ ಕೃತಿಯಿಂದಲೂ ನಿದರ್ಶಿಸಬಹುದು. ಅವನ ಅಭಿಪ್ರಾಯದಲ್ಲಿ—"ರಸಮಿಲ್ಲದ ಕೃತಿ .........ಘೃತಮಿಲ್ಲದ ಊಟ"ಕ್ಕೆ ಸಮಾನ. "ನೆಗಟ್ದ ರಸಂ ಮನಂಗೊಳಿಸೆ ಮಾರ್ಗಮೊಡಂಬಡೆ ದೇಸೆ ಕಬ್ಬಮಂ ಬಗೆಗೊಳಲಿಂತು ಪೇಟ್ದುದು ಮಹೀಭುಜ ಸಾರ್ಥಕಂ"—ರಸವು ಎಲ್ಲಕ್ಕೂ ಮೊದಲು ಬರತಕ್ಕದ್ದು; ಆ ಮೇಲೆ ಮಿಕ್ಕವುಗಳು—ಇಲ್ಲಿ ಅಲಂಕಾರ ಚಮತ್ಕಾರ ಇವುಗಳ ಪ್ರಸ್ತಾಪವೇ ಇಲ್ಲ. ರಸವನ್ನೂ ಭಾವವನ್ನೂ ಚಿತ್ರಿಸುವ ವಿಚಾರ ಬಂದರೆ ರನ್ನನಿಗೆ "ಚತುರ್ಮುಖ" ವಾಗುತ್ತದೆ. "ಕವಿಮಾರ್ಗದೊಳೊಳಪೊಕ್ಕುಂ ನವರಸಮಂ ತೆಱೆಯೆ ನುಡಿದನೆನಿಸಿದ ಕವಿ ಸತ್ಕವಿ" ಅವನು "ರಸಾಂತರಂಗಳಂ ಮುಟ್ಟೆ ನುಡಿದು" ರಂಜಿಸಬೇಕು. "ಕಾರಕ ಪೂರಕಾದಿ" ಗಳನ್ನು ಹಾಕಿ "ನಾಲ್ವರಿರ್ದು ವಿಚಾರಂಬೇಟ್ಪಂತೆ" ಆಗಲಿ, "ಸರಸತಿಯುನಬಲೆಯಂ ಗೋಣ್ಮುರಿ

* ರನ್ನನು ಅಲಂಕಾರಿಕರು ಹೇಳಿರುವ "ಸ್ಥಾಯಿ ಭಾವ" ಗಳನ್ನೂ "ರಸ" ಗಳನ್ನೂ ಒಂದು ಮಾಡಿರುವಂತಿದೆ—"ಶೋಕರಸಮಂ ಕ್ರೋಧರಸದ ಮೇಲಿಕ್ಕಿ" (ಗದಾ. ಪು. ೬೨), "ಶೋಕರಸದಿಂ ಪಟ್ಟಯಿಸಿದಳ್ ಕೊಂತಿ" (ಗದಾ. ಪು. ೧೨೨), "ವನಮೂಷಕ ಮಾರ್ಜಾಲಂ........,ಮುನಿಸಂ ಪರಿಹರಿಸಿರ್ದುವು ಮುನಿಸಾಥಾಂತಿಕದೊಳುದಿತ ಶಾಂತರಸಂಗಳ್" (ಅಜಿತ. ಪು. ೧೧೬) ಮುಂತಾದ ಪ್ರಯೋಗಗಳನ್ನು ನೋಡಿ.

ಗೊಂಡು ಅರ್ಥಕ್ಕೆ ಕುದಿದು'' ನೋಯಿಸಿ ಸರಸ್ವತೀ ದ್ರೋಹನಾಗಿಯಾಗಲಿ ಆ ರಂಜನೆಯನ್ನು ಮಾಡಲೆಳಸಬಾರದು. ವಿಮರ್ಶಕನು ಕಾವ್ಯದಲ್ಲಿ— " ಪೊಸದೇಸೆಯಂ ಬೆಡಂಗಂ ರಸಘಟ್ಟೆಯಂ ಅರ್ಥ ದೃಷ್ಟಿಯಂ'' ನೋಡಬೇಕು.

ಈಗ ಸಿಕ್ಕಿರುವ ರನ್ನನ ಎರಡು ಕಾವ್ಯಗಳಲ್ಲಿ "ಅಜಿತ ಪುರಾಣ"ವು ವೈದಿಕ ಭಟ್ಟನ ಹಾಗೆ. ಅಲ್ಲಿ ರಸಪುಷ್ಟಿ ಇದೆಯೇ ಇಲ್ಲವೇ ಎಂದು ವಿಚಾರವಾಡುವುದು ಅಯುಕ್ತವಾದೀತು. ಆದರೂ ರನ್ನನು—" ಜಿತ ಮನೋಜಾತಾಜಿತಸ್ವಾಮಿಯ ಪುಣ್ಯಪುರಾಣಮಂ ಮಹಾಕಾವ್ಯಂಗ ಳೊಳ್ ಮೆಚ್ಚಿ ಬಣ್ಣಿಸುವೆಂ'' ಎಂದು ಹೊರಟಿದ್ದಾನೆ. ಅವನ ಗುರುವಾದ ಪಂಪನು ಆದಿಪುರಾಣದಿಂದ ಹೆಚ್ಚು ಪೂಜ್ಯತೆಯನ್ನು ನಿರೀಕ್ಷಿಸಿದ್ದಂತೆ ತಾನೂ ತನ್ನ ವಿಜಯಕ್ಕಿಂತ ಪುರಾಣದಿಂದ ನಿರೀಕ್ಷಿಸಿದ್ದಿರಬಹುದು. ಆ ಪೂಜ್ಯತೆಯು ಜೈನರಿಂದಲಾದರೂ ಬಂದಿದ್ದರೆ ಅದು ಅದರ ಕಾವ್ಯಗುಣದಿಂದಲೂ ರಸಪುಷ್ಟಿಯಿಂದಲೂ ಇರಲಾರದು; ಪುರಾಣ ಗುಣದಿಂದಲೂ ಮತತುಷ್ಟಿಯಿಂದಲೂ ಇರಬೇಕು. ಕಾವ್ಯರಸವೊಂದನ್ನೇ ಅಪೇಕ್ಷಿಸುವ ಆ ಮತಪ್ರವಿಷ್ಟರಲ್ಲದವರಿಗಂತೂ ಇವುಗಳಲ್ಲಿ ರುಚಿ ಹುಟ್ಟುವುದು ಕಷ್ಟ. ಮತವಿಚಾರಗಳನ್ನು ಅಪಾರವಾದ ಶ್ರದ್ಧಾಭಕ್ತಿಗಳಿಂದ ವಿಚಾರವಾಡಿ ಅನುಸರಿಸುವ ಕಾಲ ಹೋಗುತ್ತಿರುವಾಗ ಜೈನರಿಗಾದರೂ ಈ ಪುರಾಣಗಳು ಎಷ್ಟು ರುಚಿಸುವುವೋ ಸಂದೇಹ.

ಧರ್ಮತತ್ತ್ವವು ಅದರ ಮರ್ಮವನ್ನರಿತವರಿಗೆ ಸಂಜೀವನ ಮೂಲಿಕೆಯಂತೆ ಸುಲಭವಾಗಿ ಹಿಡಿತಕ್ಕೆ ಸಿಕ್ಕುತ್ತದೆ. ಆದರೆ ಅದರ ಪರಿಚಯವು ತಪ್ಪಿ ಮೂಲಿಕೆಯ ಸುತ್ತ ಕಾಡು ಬೆಳೆದು ಅದರ ಆಶ್ರಯ ಮಾತ್ರ ಸ್ಥೂಲವಾಗಿ ಸಂಪ್ರದಾಯದಿಂದ ತಿಳಿಯುತ್ತ ಬಂದರೆ ಧರ್ಮ ಬೋಧನೆಯೂ ಆಚರಣೆಯೂ ಆಂಜನೇಯನು ಚಂದ್ರದ್ರೋಣ ಪರ್ವತವನ್ನು ಹೊತ್ತು ತಂದಂತಾಗುತ್ತದೆ. ಧರ್ಮದಲ್ಲಿಯೇ ಆಗಲಿ, ಶಾಸ್ತ್ರದಲ್ಲಿಯೇ ಆಗಲಿ, ಮತ್ತಾವ ಸಂಗತಿಯಲ್ಲಿಯೇ ಆಗಲಿ, ಅತಿ ವಿಸ್ತಾರವು ಕ್ಷೀಣ ದೆಶೆಯ ಚಿಹ್ನೆ—ಕರವಸ್ತ್ರವನ್ನು ಎಳೆಎಳೆಯಾಗಿ ಬಿಡಿಸಿ ಮನೆ ತುಂಬ ಹರಡಿದರೆ ಅದು ವಿಸ್ತಾರವೇನೋ ಆಯಿತು, ಆದರೆ ಅದರಿಂದ

ಉಪಯೋಗವೇನು? ವಸ್ತ್ರವಂತೂ ಹೋಯಿತು. ಅಜಿತಪುರಾಣ ದಲ್ಲಿ ಇಂಥ ನೀರಸವಾದ ಅತಿ ವಿಸ್ತೃತವಾದ ಧಾರ್ಮಿಕ ಭಾಗಗಳಿವೆ; ಆದರೆ ಅವಕ್ಕೆ ರನ್ನನನ್ನು ಉತ್ತರವಾದಿಯಾಗಿ ಎಳೆದು ಅವನ ಕವಿತಾ ಶಕ್ತಿಯನ್ನೂ ಅಭಿರುಚಿಯನ್ನೂ ಖಂಡಿಸುವುದು ಯುಕ್ತವಲ್ಲ; ಅಲ್ಲಿ ಅವನಿಗೇ ಸ್ವಾತಂತ್ರ್ಯವಿಲ್ಲ. ಸಂಪ್ರದಾಯವಾಗಿ ಬಂದ ಸಂಗತಿಗಳನ್ನು ಹೇಳಬೇಕು; ಅನೇಕ ಕಡೆಗಳಲ್ಲಿ ಉದ್ದವಾದ ಪಟ್ಟಿಗಳನ್ನು ಕೊಡಬೇಕು; ಇಲ್ಲದಿದ್ದರೆ ಅವರ ಪುರಾಣವು ಪೂರ್ಣವಾಗುತ್ತಿರಲಿಲ್ಲ. ಆದರೂ ಈ ಗ್ರಂಥವನ್ನೂ ಇತರ ಪುರಾಣಗಳನ್ನೂ ನೋಡಿದರೆ ಮಿಕ್ಕ ಪುರಾಣ ಲೇಖಕರಿಗೆ ಆಯಾ ಪುರಾಣ ರಚನೆಯಲ್ಲಿ ಇದ್ದ ಉತ್ಸಾಹವು ರನ್ನನಿಗೆ ಇದರಲ್ಲಿ ಇರುವಂತೆ ತೋರುವುದಿಲ್ಲ. ದೇವರ ಪೂಜೆ ಮಾಡಬೇಕಲ್ಲಾ ಎಂದು ಮಂತ್ರಗಳನ್ನೆಲ್ಲಾ ದಡಬಡನೆ ಉಚ್ಚರಿಸಿ ಮುಗಿಸುವ ಅರ್ಚಕನ ಹಾಗೆ ಈ ಪುರಾಣವನ್ನೂ ಅವನು ಬರೆದು ಮುಗಿಸಿದ ಹಾಗೆ ಭಾವವಾಗುತ್ತದೆ. ಇದರಲ್ಲಿ ಪುರಾಣ ಲಕ್ಷಣಗಳೆಲ್ಲಾ ಇವೆ; ಧಾರ್ಮಿಕ ವಿಚಾರಗಳೆಲ್ಲಾ ಬಂದಿವೆ; ಅದು— "ಎನಿತುಂಟಾಗಮವರ್ಣನಮನಿತುಮನೊಳಕೊಂಡು" ಇದೆ; ಆದರೂ ಅವುಗಳಲ್ಲಿ ಉಕ್ಕುತ್ತಿರುವ ಉತ್ಸಾಹವಿಲ್ಲ. "ಮೊನೆಯೊಳ್ ಮನೆಯೊಳ್" ನೆಗಳ್ದ "ಪೆಂಪಿನ ಕಣಿ" ಯಾದ ತೈಲಜನನಿಯ ಚರಿತ್ರೆಯನ್ನು ಬರೆದು ಆಕೆಯ "ಕೆಲದೊಳ್ ರಂಜಿಪರೆ ವಿಾಸೆವೊತ್ತಣ್ಣಂಗಳ್" ಎಂದು ಹೇಳುವಾಗ ಅವನಿಗೆ ಇರುವ ಆವೇಶವನ್ನೂ ಭಕ್ತಿಯನ್ನೂ ಹೋಲಿಸಿ ನೋಡಿದರೆ ಇದು ಸ್ಪಷ್ಟವಾಗುವುದು. ಆದ್ದರಿಂದಲೇ ಇದರಲ್ಲಿ ಜನ್ಮಾಂತರ ಕಥಾವನಾಂತರಗಳು ಬೆಳೆದಿಲ್ಲ; ಪುರಾಣಗಳಲ್ಲೆಲ್ಲಾ ಇದು ಬಹು ಚಿಕ್ಕ ಪುರಾಣ. ಈ ಪುರಾಣದಲ್ಲಿ ಬರುವ ಪೂರ್ವಜನ್ಮ ಕಥೆಗಳು ಇಷ್ಟೇ ಇರಬಹುದು; ಆದರೂ ಇದೇ ಇತರರ ಕೈಗೆ ಸಿಕ್ಕಿದ್ದರೆ, ಅಥವಾ ರನ್ನನೇ ಮನಸ್ಸು ಮಾಡಿದ್ದರೆ, ಇನ್ನೂ ಎಷ್ಟೋ ದೊಡ್ಡದಾಗುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

ಇದರಲ್ಲಿ, ರಸವನ್ನು ಒಪ್ಪಿಕೊಂಡು ಪ್ರಾಧಾನ್ಯ ವಿವೇಚನೆ ಮಾಡುವುದಾದರೆ, "ಜಿತಕಂದರ್ಪಮೆನಿಪ್ಪ ಶಾಂತಸರ" ವು ಪ್ರಧಾನ

ವೆಂದು ಹೇಳಬೇಕು. ಶೃಂಗಾರಾದಿ ಮತ್ತೆ ಕೆಲವು ರಸಗಳು ಅಲ್ಲಲ್ಲಿ ಕಾಣಿಸಿಕೊಂಡರೂ ನೀರಿನಲ್ಲಿ ಬಿದ್ದ ಬೆಂಕಿಯ ಕಿಡಿಗಳಂತೆ ಅವು ಆರಿ ಹೋಗುತ್ತವೆ. ಆ ಕಿಡಿಗಳಲ್ಲಿ ಕೆಂಡವೆನ್ನಿಸಿಕೊಳ್ಳಬಹುದಾದದ್ದು ಶೃಂಗಾರ. ಇದನ್ನು ಮುಂದುಮಾಡಬೇಕೆಂಬುದು ಕವಿಯ ಉದ್ದೇಶವಲ್ಲ. ಅದನ್ನು ದೊಡ್ಡದು ಮಾಡಿ "ಧರ್ಮಕಥೆ" ಯನ್ನು ಹೇಳಿದರೆ "ಜಿತಕಂದರ್ಪಮೆನಿಪ್ಪ ಶಾಂತರಸಮೆತ್ತ ಉದ್ದಾಮ ಶೃಂಗಾರಮೆತ್ತ?...... ಕಿಂ ಕೇನ ಸಂಗತಂ?" ಎಂಬ ಆಪವಾದಕ್ಕೆ ಗುರಿಯಾಗಿ "ಪಾಪಕ್ಕೆ ಪಕ್ಕು" ಆಗಬೇಕಾಗುತ್ತದೆಂಬುದನ್ನು ಅವನು ಬಲ್ಲನು. ಆದರೂ ಸಂಪ್ರದಾಯವನ್ನನುಸರಿಸಿಯೂ ಜನಸಾಮಾನ್ಯದ ರುಚಿಯನ್ನು ಅನುವರ್ತಿಸಿಯೂ ಶೃಂಗಾರವನ್ನು—ಅದು ಬಂದ ಕಡೆ—ತಕ್ಕಮಟ್ಟಿಗೆ ದಪ್ಪವಾಗಿಯೇ ಬರೆದಿದ್ದಾನೆ. ಹುಡುಗರು ಪುಸ್ತಕದಲ್ಲಿ ಚಿತ್ರವಿದೆಯೇ ಎಂದು ನೋಡುವ ಹಾಗೆ ಲೇಖಕ ಪಾಠಕವರ್ಗವು ಕಾವ್ಯ ನಾಟಕಗಳಲ್ಲಿ ಶೃಂಗಾರವಿದೆಯೇ ಇಲ್ಲವೇ ಎಂದು ನೋಡಿ ಮನಸೋಲುವುದು ಒಂದು ಸಾಮಾನ್ಯ ದೌರ್ಬಲ್ಯ ವಿಶೇಷವೆಂದು ತೋರುತ್ತದೆ. ಕೆಲವು ಕಡೆಗಳಲ್ಲಿ ಶೃಂಗಾರವು ಮುಂದೆ ಬರುವ ವೈರಾಗ್ಯದ ತೀವ್ರತೆಯನ್ನು ತೀಕ್ಷ್ಣವಾಗಿ ಉಜ್ವಲವಾಗಿ ಮಾಡುತ್ತದೆ. ಇದರಿಂದ ಶಾಂತರಸಪ್ರಧಾನವಾದ ಕಾವ್ಯಗಳಲ್ಲಿ ಶೃಂಗಾರದ ಔಚಿತ್ಯವನ್ನೂ ಉಪಯೋಗವನ್ನೂ ಸಮರ್ಥಿಸಬಹುದು. ಅಂತೂ ಈ ಬೆರಕೆಯೇನೋ ದೇವಸ್ಥಾನಗಳಲ್ಲಿ ದೇವದಾಸಿಯರು ಇರುವ ಹಾಗೆ ಸಂಪ್ರದಾಯವಾಗಿ ಬಂದಿದೆ. ಆದರೂ ಶಾಂತ ಶೃಂಗಾರಗಳನ್ನು ಬೆರೆಸಿ ಆನಂದವನ್ನುಂಟುಮಾಡುವುದು ಕಷ್ಟದ ಕೆಲಸ. ಅದರಲ್ಲಿಯೂ ಜನ್ಮಾಂತರಗಳ ಕಥೆಗಳೂ ಪೌರಾಣಿಕ ವಿಚಾರಗಳ ಕೋಶಗಳೂ ಧಾರ್ಮಿಕ ವಿಷಯಗಳ ನಿಘಂಟುಗಳೂ ಬರುವ ಪುರಾಣತಿಲಕಗಳಲ್ಲಂತೂ ಈ ರಸಗಳನ್ನಿಟ್ಟು ಪರಿಪೋಷಿಸಿ, ಔಚಿತ್ಯ ಹಾನಿಯಾಗದಂತೆಯೂ ರಸಾಭಾಸವಾಗಲಿ ರಸಕ್ಷಯ

* ಇದರಿಂದ ರನ್ನನ ಕಾಲಕ್ಕೆ ಒಂಬತ್ತನೆಯದಾದ ಶಾಂತವು ಅಂಗೀಕೃತವಾಗಿತ್ತೆಂಬುದು ಸ್ಪಷ್ಟವಾಗಿದೆ; ಮೊದಲು ಇದ್ದ ರಸಗಳು ಎಂಟೇ.

ವಾಗಲಿ ಆಗದಂತೆಯೂ ಕಾವ್ಯರಚನೆ ಮಾಡುವುದು ಕವಿ ರನ್ನನಿಗೂ ಅಸಾಧಾರಣವಾದ ಸಾಹಸ. ಈ ರಿಕ್ತ ಕೋಶಗಳನ್ನೂ ಶುಷ್ಕ ನಿಘಂಟು ಗಳನ್ನೂ ಬಿಟ್ಟು ಭಾವಪ್ರಪಂಚಕ್ಕೆ ಬಂದರೆ ರನ್ನನು ಮೃತಧರ್ಮ ವನ್ನು ಅಮೃತಮಯವಾಗಿ ಮಾಡಬಲ್ಲನು; ಹೃದಯದಲ್ಲಿ ರಸಪ್ರವಾಹ ವನ್ನೇ ಎಬ್ಬಿಸಿ ಅದನ್ನು ಉಕ್ಕಿಸಿ ಹರಿಸುವ ಜಾಣ್ಮೆಯೂ ಬಲ್ಮೆಯೂ ಅವನಿಗೆ ಉಂಟು. ಇದನ್ನು ಅವನು ಅಜಿತಪುರಾಣಕ್ಕಿಂತಲೂ ಗದಾ ಯುದ್ಧದಲ್ಲಿ ಸ್ಪಷ್ಟವಾಗಿ ತೋರಿಸಿದ್ದಾನೆ.

ಗದಾಯುದ್ಧವು ಒಂದು "ರಸಘಟ್ಟ." ಆದರೆ ಅದರಲ್ಲಿ ಚರಿತ್ರೆ ಎಂಬ ಕಸವು ಸಿಕ್ಕಿಕೊಂಡಿದೆ; ಅದನ್ನು ಶೋಧಿಸಿ ತೆಗೆದುಹಾಕಿಬಿಟ್ಟರೆ ಉಳಿದ ಕಾವ್ಯವು ಎಂಥ ರಸಾಯನವಾಗುವುದೆಂಬುದನ್ನು "ಗದಾ ಯುದ್ಧ ನಾಟಕ" ದಲ್ಲಿ ನೋಡಬಹುದು. ಈ ಕಾವ್ಯವನ್ನು ರನ್ನನು ಬರೆದು ರಾಜಾಸ್ಥಾನದಲ್ಲಿ ಓದಿದಾಗ ರಸಕ್ಕಿಂತ ಈ ಕಸವೇ ಮೇಲಾಗಿ ಗಣ್ಯವೆನಿಸಿದ್ದಿರಬಹುದು. ಸತ್ಯಾಶ್ರಯನನ್ನು ಸಾಹಸಭೀಮನೆಂದು ಕರೆದು ಅವನಲ್ಲಿ ಅತುಲ ಭುಜಬಲ ಪರಾಕ್ರಮಗಳನ್ನು ಆರೋಪಿಸಿ ಅವನಿಂದ ದುರ್ಯೋಧನನನ್ನು ಕೊಲ್ಲಿಸಿದಾಗ, ಆ ರಾಜಪೋಷಕನಿಗೆ ಚತುರ್ಭುಜವಾಗಿ ಮೈ ಉಬ್ಬಿ ಹೋಗಿರಬೇಕು. ಆದರೆ ಭೀಮನನ್ನು 'ಅಮ್ಮನ ಗಂಧವಾರಣ' 'ಇರಿವಬೆಡಂಗ' ಎಂದು ಕರೆದು, ಅವನು—"ಆಹವಮಲ್ಲಂಗಂ ಜಾಕವ್ವೆದೇವಿಗಂ ಪುಟ್ಟಿದುದಂ" ವರ್ಣಿಸುವಾಗ ಭೀಮನ ಮನಸ್ಸಿಗೆ ಹೇಗಾಗಿರಬೇಕು! ಪುಣ್ಯಕ್ಕೆ ಭೀಮನು ತನ್ನ ಅಣ್ಣನಾದ ಆಂಜನೇಯನಂತೆ ಚಿರಜೀವಿಯಾಗಿರದೆ ಹಿಂದೆಯೇ ಸತ್ತಿದ್ದುದರಿಂದ ಕವಿಯೂ ಅವನ ಪೋಷಕನೂ ಬದುಕಿ ಕೊಂಡರು. ಸತ್ಯಾಶ್ರಯನಿಗೂ—"ದುಶ್ಶಾಸನೋರಸ್ಥಳೋಚ್ಛಲ ದುಷ್ಣಾಂಬು ಸಿಮಗ್ನ ಪೂರ್ಣ ಜಠರಂ........ಚಾಳುಕ್ಯ ಕಂಠೀರವಂ" ಎಂದು ಹೇಳಿದಾಗ, ಆ ಶಬ್ದಗಳು ಅರ್ಥವಾಗಿದ್ದರೆ, ಸ್ವಲ್ಪವಾದರೂ ಹೊಟ್ಟೆ ತೊಳಸಿಕೊಂಡು ಬರುವ ಹಾಗಾಗಿರಬೇಕು. ಇದು ಚತು ರ್ಭುಜವಾದದ್ದಕ್ಕೆ ಶಿಕ್ಷೆ; ಚಿನ್ನದ ಮಾವಿನ ಹಣ್ಣಿಗೆ ಬಾಯಿಬಿಟ್ಟರೆ ಬೆನ್ನಿನ ಮೇಲೆ ಬರೆ ಹಾಕಿಸಿಕೊಳ್ಳುವುದಕ್ಕೂ ಸಿದ್ಧವಾಗಿರಬೇಕು.

ಪ್ರತಿಯೊಬ್ಬ ಕವಿಯ ಕಾಲ ದೇಶ ವರ್ತಮಾನ ಸನ್ನಿವೇಶೋದ್ದೇಶಾದಿಗಳನ್ನು ಗಣನೆಗೆ ತೆಗೆದುಕೊಂಡು ಅವನು ಆ ಸಂದರ್ಭ ವಿಶೇಷಗಳಲ್ಲಿ ತನ್ನ ಉದ್ದೇಶವನ್ನು ಎಷ್ಟು ಚೆನ್ನಾಗಿ ನೆರವೇರಿಸಿಕೊಂಡಿದ್ದಾನೆ ಎಂದು ವಿಚಾರ ಮಾಡಿಯೇ ಅವನ ಕೃತಿಯನ್ನು ವಿಮರ್ಶೆ ಮಾಡಬೇಕು. ಆದರೂ, ಯಾವ ದೇಶದಲ್ಲಿಯೇ ನೋಡಲಿ ತಾತ್ಕಾಲಿಕವಾದ ಆಸಕ್ತಿ ಇರತಕ್ಕ ಸಾಹಿತ್ಯ ವಿಶೇಷದ ಹಣೆಯಬರಹವೆಲ್ಲಾ ಇಷ್ಟೇಯೆ—ಸುನೇರಿ ಕಾಗದವನ್ನು ಅಂಟಿಸಿದರೆ ಎಷ್ಟು ದಿನ ಅದಕ್ಕೆ ಹೊಂಬಣ್ಣದ ಮಿರುಗು ಇದ್ದೀತು? ಅಂತು ಈ ಬೆರಕೆಯೇನೋ ನಿಷ್ಪಕ್ಷಪಾತವಾಗಿ ನೋಡಿದರೆ, ಅಷ್ಟು ಚೆನ್ನಾಗಿ ಕಾಣಿಸುವುದಿಲ್ಲ—ನೀಗ್ರೋ ಜನಗಳಲ್ಲಿ ಪ್ರಸಿದ್ಧನಾದ ಬೂಕರ್ ಟಿ. ವಾಷಿಂಗ್ಟನ್ನನು ತನ್ನ ಜೀವನ ಚರಿತ್ರೆಯನ್ನು ಬರೆದುಕೊಳ್ಳುತ್ತ ಮಧ್ಯದಲ್ಲಿ—"ನಮ್ಮ ಪೂರ್ವಿಕರಾದ ಮನು ಮಾಂಧಾತ ಮುಂತಾದವರು ಉಪ್ಪಿಲ್ಲದೆ ಮುಗುಳುಗಂಜಿಯನ್ನು ಕುಡಿದಿದ್ದರು" ಎಂದು ಹೇಳಿದಂತಾಗುತ್ತದೆ. ಇದು "ಎಂಟಿರ್ದೆ" ಇಲ್ಲದವರು ಆಡತಕ್ಕ ಮಾತಲ್ಲ. ಆದರೂ "ಕೃತಿ ಗುಣದೋಷ ಪರೀಕ್ಷೆಗಾರನಾರ್ ಬಾರಿಪರೋ!"

ಗದಾಯುದ್ಧದಲ್ಲಿ ವೀರರಸವು ಪ್ರಧಾನ. ರೌದ್ರಕರುಣಗಳು ಅವುಗಳಿಗೆ ಉಪಷ್ಟಂಭಕ. ಶೃಂಗಾರಾದಿ ಮಿಕ್ಕ ರಸಗಳೂ ಬಂದಿವೆ. ಆದರೆ ಅವು ಯಾವಕ್ಕೂ ಪುಷ್ಟಿಯಿಲ್ಲ. "ಕುರುಕುಲ ಪ್ರಳಯಕಾಲೆ" ಯಂತೆ ತಲೆ ಕೆದರಿಕೊಂಡು ತಿರುಗುತ್ತಿರುವ "ಅಗ್ನಿಪುತ್ರಿ" ಯಲ್ಲಿ ಶೃಂಗಾರ ತೋರುವುದು ಹೇಗೆ? ಅವಳು ವೇಣೀಸಂಹಾರಮಾಡಿಕೊಂಡು "ಮಾಂಗಲ್ಯ ಮಾಲಾಲಂಕೃತ" ಳಾದಾಗಲೂ ಇನ್ನೂ ಆ "ಎರಡನೆಯ ಹಿಡಿಂಬಿಯ" ರೌದ್ರಾವತಾರವು ಇಳಿದಿರುವುದಿಲ್ಲ. "ವನಿತಾರೂಪ ಮಾಶ್ಚರ್ಯ ರೂಪಂ" ಎಂದು ಕವಿಯೊಡನೆ ನಾವೂ ಕೈಯೆತ್ತಿ ಕಣ್ಣರಳಿಸಿ ಕೂಗಬಹುದೇ ಹೊರತು "ಅಡಿ, ಕಿಱುದೊಡೆ, ಪೆರ್ದೊಡೆ, ಕಟಿ, ನಡು" ಎಂದು ಮೊದಲಾಗಿ ಶರೀರದ ಅಂಗಾಂಗಗಳನ್ನೆಲ್ಲಾ ಸಾಲಾಗಿ ಪಾದಾದಿ ಕೇಶಾಂತವಾಗುವಂತೆ ಪಟ್ಟಿಹಾಕಿ ವರ್ಣಿಸಿರುವುದು ಶೃಂಗಾರರಸವೆಂದು ಅಷ್ಟೇನೂ ಚಪಲಗೊಳಿಸುವಂತಿಲ್ಲ. ಅವಳ "ಕಳಕಳ

ಸ್ಪರ್ಶನ"ವು "ಪಾರಿಜಾತ ಪಲ್ಲವೋಲ್ಲಸಿತನಿಕಾಮಕೋಮಲ" ವಾಗಿದ್ದರೂ ಆ "ಕಟಾಕ್ಷಚ್ಛಟಾಚ್ಛೋಟನ"ವು ಚಾಟಿಯಿಂದ ಹೊಡೆಯುವ ಹಾಗಾಗುತ್ತದೆ. ಅವಳ ಕೈಯನ್ನು "ನಿಕಾಮ ಕೋಮಲ" ವೆಂದು ವರ್ಣಿಸುವಾಗಲೂ ಕವಿಯು ಪಾರಿಜಾತ "ಪಲ್ಲವ"ದ ಸಾದೃಶ್ಯವನ್ನು ಏಕೆ ಕೊಟ್ಟನೊ! ಪಾರಿಜಾತ "ಕುಸುಮ"ದಷ್ಟು ಪೇಲವವಲ್ಲವೆಂದು ಅವನ ಅಭಿಪ್ರಾಯವಿರಬಹುದು! ಭೀಮನಿಗೆ ತಕ್ಕ ಶೃಂಗಾರ!!

ರಣರಂಗದ ವರ್ಣನೆಯಲ್ಲಿ ಕವಿಸಮಯಾನುಸಾರವಾದ ಬೀಭತ್ಸವೂ ಮರುಳುಗಳ ಭೀಕರ ಹಾಸ್ಯವೂ (ವೃದ್ಧ ಕಂಚುಕಿಯು ಚಾಳುಕ್ಯ ರಾಜಪರಂಪರೆಯನ್ನೂ ಬಿರುದಾವಳಿಯನ್ನೂ ಪಾಠ ಒಪ್ಪಿಸಿದಮೇಲೆ) ವಿದೂಷಕನ ಪರಿಹಾಸ್ಯವೂ ಬರುತ್ತವೆ. ಅಟ್ಟಲಾಟದಲ್ಲಿ ಬರುವ ಕೋಡಂಗಿಯಂತೆಯೂ ತಮಿಳು ನಾಟಕಗಳಲ್ಲಿ ಬರುವ ಅಧಿಕಪ್ರಸಂಗಿಯಾದ ವಿದೂಷಕನಂತೆಯೂ ಈ ನರ್ಮ ಸಚಿವನು ಇಲ್ಲಿ ಏಕೆ ಬಂದನೋ! ಹೊಟ್ಟೆಬಾಕತನದ ಹಾಸ್ಯವು ಇಲ್ಲಿ ಬರದಿದ್ದರೆ ಏನು ಉಳಿದು ಹೋಗುತ್ತಿತ್ತೋ! ಈ ಹುಟ್ಟು ಹೇಡಿಗೆ ಆ ಪರಿಸ್ಥಿತಿಯಲ್ಲಿ ದ್ರೌಪದಿಯೊಡನೆ ಹಾಸ್ಯಮಾಡುವ ಧೈರ್ಯವು ಹೇಗೆ ಬಂತೋ ತಿಳಿಯದು! ಇವಲ್ಲದೆ ರಣರಂಗದಲ್ಲಿ "ಸಂಜಯನರಸಂಗೆ ನವರಸಮನಭಿನವರಸಂ ಮಾಡಿ" ತೋರುತ್ತಾನೆ—ಆದರೆ ಇಲ್ಲಿ ಬರೆದಿರುವ ಚಿತ್ರಗಳೆಲ್ಲವೂ ರಕ್ತದಲ್ಲಿ ಬರೆದ ಚಿತ್ರಗಳು! ಸಾಯಂಕಾಲದ ಕೆಂಡಗೆಂಪಿನಿಂದ ತುಂಬಿದ ಪಶ್ಚಿಮ ದಿಗಂತದಲ್ಲಿ ಒಂದೆರಡು ನಕ್ಷತ್ರಗಳು ಬೆಳ್ಳಗೆ ಮಿಣುಗುಟ್ಟಿದರೇನು? ಮೋಡಗಳ ತುಂಡು ಸುಳಿದಾಡಿದರೇನು? ಅಲ್ಲಿ ಮರುಳುಗಳ ಕರಾಳ ಛಾಯೆಗಳು, ಏಕಾದಶಾಕ್ಷೋಹಿಣೀ ಪತಿಯಾಗಿದ್ದರೂ ಕಾಲ ಒದಗಿ ಬಂದಿದ್ದ ಕುರುರಾಜನನ್ನು ಜೀವದಿಂದಿರುವಾಗಲೇ ಕಿತ್ತುಕೊಂಡು ತಿನ್ನಲು ಬರುತ್ತವೆ.

ಈ ರಸಗಳೆಲ್ಲವೂ ನಾಯಕರಸವಾದ ವೀರದ ಪರಿವಾರದಲ್ಲಿ ಬಂದು ಅದರ ಜಾಜ್ವಲ್ಯವನ್ನೂ ಔದ್ಧತ್ಯವನ್ನೂ ಹೆಚ್ಚಿಸತಕ್ಕವುಗಳು. ಕರುಣ ರೌದ್ರಗಳು ಅದರ ಎರಡು ಕಾಲುಗಳಿದ್ದ ಹಾಗೆ. ಇವುಗಳ ಪೆಡಗೆಯೇ ಬೇರೆ! ಆದ್ದರಿಂದ ಭಾವಾಭಿನಿವೇಶವಿಲ್ಲದ ಕಡೆಯಲ್ಲಿ

ಒಡ್ಡರ ಬಂಡಿಯಂತೆ ಹೋಗುವ ಸಪ್ಪೆಶೈಲಿಯು ಇವು ಬಂದಾಗ ಒಳಗೆ ರಾಜನು ಕುಳಿತಿರುವ ಭವ್ಯರಥದ ಸ್ವರೂಪವನ್ನು ತಾಳಿ ಶೋಭಿಸುತ್ತದೆ. ಕರುಣವು, ಬಿಟ್ಟು ಬಿಟ್ಟು ಬರುವ ಸೋನೆ ಮಳೆಯಂತೆ ಗ್ರಂಥದ ಉದ್ದಕ್ಕೂ, ಆದರಲ್ಲಿಯೂ ವಿಶೇಷವಾಗಿ ಗ್ರಂಥದ ಪೂರ್ವಾರ್ಧದಲ್ಲಿ, ಬರುತ್ತದೆ. "ಏಕೋ ರಸಃ ಕರುಣ ಏವ............" ಎಂದು ಮುಂತಾಗಿ ಭವಭೂತಿಯು ಕರುಣರಸವನ್ನು ಬಹುವಿಸ್ತಾರವಾಗಿ ಪ್ರತಿಪಾದಿಸಿರುವಂತೆ ಅವನದೇ ಆದ ಒಂದು ಅಹಂಕಾರ ವಿಶೇಷದಿಂದ ಹೇಳಿಕೊಂಡಿದ್ದಾನೆ. ಇದನ್ನೇ ಪಂಡಿತರು ಸಮ್ಮತಿಸಿ "ಉತ್ತರೇ ರಾಮಚರಿತೇ ಭವಭೂತಿರ್ವಿಶಿಷ್ಯತೇ" ಎಂದು ಅವನಿಗೆ ಪ್ರಶಸ್ತಿ ಪತ್ರವನ್ನು ಕೊಟ್ಟುಬಿಟ್ಟಿದ್ದಾರೆ. ಇದರ ಅರ್ಹತೆ ಔಚಿತ್ಯಾದಿಗಳು ಹೇಗಾದರೂ ಇರಲಿ, ರನ್ನನ ಕರುಣರಸ ಪ್ರತಿಪಾದನೆಯು ಮೇಲ್ಕಂಡಂತೆ ಸುಪ್ರಸಿದ್ಧವಾಗಿರುವ ಭವಭೂತಿಯ ಪ್ರತಿಪಾದನೆಗೆ ಯಾವ ವಿಧದಲ್ಲಿಯೂ ಕಡಮೆಯಲ್ಲ. ಇನ್ನೂ ಇಲ್ಲಿರುವ ಗಭೀರತೆ ವೈಚಿತ್ರ್ಯ ವೈವಿಧ್ಯಾದಿಗಳು ಅಲ್ಲಿ ಇಲ್ಲವೆಂದು ಹೇಳಬಹುದು. ದ್ರೌಪದಿ ದುರ್ಯೋಧನ ಧೃತರಾಷ್ಟ್ರ ಗಾಂಧಾರಿ ಭೀಷ್ಮ ಲಕ್ಷ್ಮಿ ಮುಂತಾಗಿ ಎಷ್ಟು ಜನ ಎಷ್ಟು ವಿಧವಾಗಿ ಇಲ್ಲಿ ಶೋಕವನ್ನುಂಟುಮಾಡುವರು! ಕುರುಡರೂ ಮುದುಕರೂ ಆದ ತಾಯಿತಂದೆಗಳ ಗೋಳಾಟವೂ, ಕೈಲಾಸಶೈಲ ಸದೃಶರಾದ ವೀರಾಧಿವೀರರು ತನಗಾಗಿ ಕಾದಿ ಸತ್ತರೆಂಬ ಚಿಂತೆಯೂ, ಪ್ರಾಣಕ್ಕಿಂತ ಹೆಚ್ಚಾದ ದುಶ್ಶಾಸನ ಕರ್ಣರು ಅಳಿದ ವ್ಯಸನವೂ ಹೃದಯವನ್ನು ಸೀಳುವ ಪುತ್ರಶೋಕವೂ ದುರ್ಯೋಧನನನ್ನು ರೇಗಿಸಿ ಅವನ ಚಲವನ್ನು ಕಲ್ಲುಮಾಡುವುವು. ನಿಸರ್ಗವಾಗಿ ಮಾನಧನನೂ ಆತ್ಮಸಂಯಮಶಾಲಿಯೂ ಆಗಿದ್ದರೂ ಅವನು ಕರ್ಣ ದುಶ್ಶಾಸನರ ಕಳೇಬರಗಳನ್ನು ನೋಡಿದಾಗ ಮೈಮರೆತು ಅಳುತ್ತಾ ಕುಳಿತು ಬಿಡುವನು. ಆಗ ಸಂಧಿಮಾಡಿಕೊಳ್ಳೆಂದು ಪ್ರಾರ್ಥಿಸುತ್ತಿರುವ ಸಂಜಯನೇ ಈ ಸ್ಥಿತಿಯಲ್ಲಿ ಅವನನ್ನು

" ಪೆಂಡಿರ್ ಪೞಯಿಸುವಂದದೆ
ಗಂಡರ್ ಪೞಯಿಸುವುದಾಯಮೋ ಚಲಮಂ ಕೈ !

ಕೊಂಡೆಸಪರಾತೊ ! ಕುರುಕುಲ
ಮಂಡನ ನೀನೆತ್ತಿಕೊಂಡ ಚಲಮನೆ ಮೆಚ್ಚಿಯಾ ! ||"

ಎಂದು ಮೂದಲಿಸಿ ರೇಗಿಸಿ ಹೊಡೆಸಬೇಕಾಗುವುದು. ಗದಾಯುದ್ಧದಲ್ಲಿ ರಸವತ್ತಾದ ಅನೇಕ ಭಾಗಗಳಿಗೆ ಪಂಪನು ಕಾರಣವಾಗಿರುವಂತೆ ಈ ಭಾಗಕ್ಕೂ ಕಾರಣವಾಗಿದ್ದರೂ ಇಲ್ಲಿ ರನ್ನನ ಕೈವಾಡವೇ ಹೆಚ್ಚಾಗಿದೆ. ಅಲ್ಲದೆ ಮತ್ತೊಬ್ಬರು ಸಂಪಾದಿಸಿಟ್ಟ ವಸ್ತುವಿನ ಬೆಲೆಯನ್ನು ಗ್ರಹಿಸಿ ಅದನ್ನು ಸದುಪಯೋಗಪಡಿಸಿ ಅಭಿವೃದ್ಧಿಪಡಿಸಿಕೊಳ್ಳುವುದಕ್ಕೂ ಒಂದು ಸಾಮರ್ಥ್ಯ ಬೇಕು ; ಹಾಗಲ್ಲದಿದ್ದರೆ, ಪಂಪನನ್ನು ಓದಿದ ಕವಿಗಳೆಲ್ಲರೂ ರನ್ನರಾಗಬೇಕಾಗಿತ್ತು.

ಭೀಮನಲ್ಲಿ ವೀರರಸವನ್ನೂ ಅವನಿಗೆ ಪ್ರತಿನಾಯಕನಾದ ದುರ್ಯೋಧನನಲ್ಲಿ, ಸಂಪ್ರದಾಯವನ್ನನುಸರಿಸಿ, ರೌದ್ರವನ್ನೂ ತೋರಿಸಬೇಕೆಂದು ರನ್ನನು ಸಂಕಲ್ಪಿಸಿರಬಹುದು. ಆದರೆ ಕಾರ್ಯದಲ್ಲಿ ಇದು ತಲೆಕೆಳಗಾಗಿದೆ. ಇಬ್ಬರಲ್ಲಿಯೂ ಕ್ರೋಧ ದ್ವೇಷ ಮೂದಲಿಕೆಗಳು ಸಮವಾಗಿದ್ದರೂ, ದುರ್ಯೋಧನನಲ್ಲಿರುವ "ಮಹಾನುಭಾವ"ತ್ವವೂ ಗಾಂಭೀರ್ಯವೂ ಭೀಮನಲ್ಲಿಲ್ಲ. ಅವನ ಮೂದಲಿಕೆಯಲ್ಲಿರುವ ತೀಕ್ಷ್ಣತೆಯು ಭೀಮನ ಮೂದಲಿಕೆಯಲ್ಲಿಲ್ಲ. ಭೀಮನಲ್ಲಿ ಔದ್ಧತ್ಯವೂ ಆಡಂಬರವೂ ಹೆಚ್ಚು; ಅವನು ಮೀಸೆ ಕಡಿಯುವುದೇನು, "ದೋರ್ದಂಡ ಕಂಡೂತಿ" ಯನ್ನು ಹೊಗಳಿಕೊಳ್ಳುವುದೇನು, ಗದಾದಂಡವನ್ನು ರಕ್ತ ಮಾಂಸಾದಿ "ರೌದ್ರಾರ್ಚನಾದ್ರವ್ಯದಿಂ" ಪೂಜಿಸುವುದೇನು! ಅವನದು "ಅಂತಕನಂತೆ" ರಾಕ್ಷಸಕೃತ್ಯ. ಅವನನ್ನು ನೋಡಿದ ಕೂಡಲೆ, ಅವನು "ಕೌರವ್ಯರನ್ನು ತಿಂದ ರಕ್ಕಸನೋ!" "ನುಂಗೆ ಬಂದಂ ಭರದಿಂ ಪನ್ನಗಕೇತನನುಮಂ" ಎಂದು ಗಾಂಧಾರಿಯು, ಹಸಿಯ ಮಾಂಸವನ್ನು ತಿನ್ನುವವರನ್ನು ಕಂಡರೆ ಹೆದರುವಂತೆ, ಹೆದರುವಳು. ದುರ್ಯೋಧನನದು ಕೃಷ್ಣನೂ ಆಶ್ಚರ್ಯಪಡುವ "ನಿರ್ವ್ಯಾಜಶೌರ್ಯ." ಅವನಲ್ಲಿ ಅಂಥ ಶೌರ್ಯವಿರುವುದರಿಂದಲೇ ತನಗೆ ಚಿರಂಜೀವಿಯಾಗಿದ್ದ ಅಭಿಮನ್ಯುವಿನ ಶವವನ್ನು ಕಂಡು ಗುರುಭಾವನೆಯಿಂದ "ನಿಜ ಸಾಹಸೈಕದೇಶಾನುಮರಣಮೆಮಗಕ್ಕೆ ಗಡಾ!" ಎಂದು ಕೈಮುಗಿದು ಪ್ರಾರ್ಥಿಸುವನು.

ರನ್ನನ ರಸಪ್ರತಿಪಾದನ ಕ್ರಮವು "ಗೂಡಾರದ ಕವಿಯಂತಿರೆ ಮುಚ್ಚಿ" ಹೋಗುವುದಲ್ಲ. "ನವರಸಮಂ ತೆಱೆಯೆ" ನುಡಿದು ಅವು ಗಳನ್ನು ವಿಸ್ತಾರಗೊಳಿಸಿ ಪೂರ್ಣವಾಗಿ ಪ್ರಕಾಶಗೊಳಿಸುವುದು. ಒಂದೆ ರಡು ಗೀಟುಗಳಲ್ಲಿ ಸ್ಪಷ್ಟವಾದ ಚಿತ್ರವನ್ನು ಚಿತ್ರಿಸುವವನಂತೆ, ಒಂದೆ ರಡು ಮಾತಿನಲ್ಲಿ ಸೂಚಿಸಿ ಚಿತ್ರಿಸುವುದು ಗಟ್ಟಿಗತನವೇ! ಆದರೆ ಅತಿ ವಿಸ್ತಾರಮಾಡದೆ, ಎಲ್ಲೆಯರಿತು, ಮಿತಿಯರಿತು, ವಿಸ್ತಾರ ಪಡಿಸುವುದೂ ಕಷ್ಟವೇ! ಕೆಲವು ವೇಳೆ, ಅತಿ ಸೂಕ್ಷ್ಮವಾದದ್ದನ್ನಾದರೂ ಒಪ್ಪಬಹುದು, ಅತಿ ವಿಸ್ತಾರವನ್ನು ಸಹಿಸುವುದು ಕಷ್ಟವಾಗುತ್ತದೆ. ಹಂಸತೂಲಿಕೆ ಯಾದರೂ ಅದನ್ನು ದಿಂಬು ಹಾಸಿಗೆಗಳಿಗೆ ಗಿಡಿದು ಗಿಡಿದು ತುಂಬಿದರೆ ಹಂಸತೂಲಿಕಾತಲ್ಪ ಹೋಗಿ ಶಿಲಾಫಲಕತಲ್ಪವಾಗುತ್ತದೆ. ರನ್ನನಲ್ಲಿ, ಬರೆಯುಬಲ್ಲೆನೆಂದು ಭರ್ತಿಹಾಕುವ ಈ ದೋಷವಿಲ್ಲ.

" ಕವಿಮಾರ್ಗದೊಳೊಪ್ಪಾಣಿಪ
ಕವಣಿಪ ಕಮ್ಮೈಸುವೆಡೆಯೊಳೊಪ್ಪಾಣಿಸಲುಂ!
ಕವಣಿಸಲುಂ ಕಮ್ಮೈಸಲು
ಮಿವನಂತಾರ್ ಬಲ್ಲರೆನಿಸಿದಂ ಕವಿರತ್ನಂ ‖ *

* ರನ್ನ ಕವಿ ಪ್ರಶಸ್ತಿ—೧೯೩೮.

ನೆಯ ಶತಮಾನಕ್ಕಿಂತ ಹಿಂದೆ ಇದ್ದವರು. ಇನ್ನು ಸಿದ್ಧರಾಮನ ಕಾಲವೂ ಸರಿಯಾಗಿ ಗೊತ್ತಿಲ್ಲ. (ಸುಮಾರು ೧೧೬೦ ಎಂಬುದು ಕವಿಚರಿತಕಾರರ ಅಭಿಪ್ರಾಯ—ಕವಿಚರಿತೆ. I, ಪುಟ ೧೮೩.) ಕಲ್ಯಾಣದ ಬಿಜ್ಜಳನು ಸಿದ್ಧರಾಮನ ಕಾಲದಲ್ಲಿ ಗತಿಸಿದನೆಂದು ಸಿದ್ಧರಾಮ ಪುರಾಣದಲ್ಲಿ ಉಕ್ತವಾಗಿರುವುದರಿಂದ ಇದನ್ನು ಬರೆದ ರಾಘವಾಂಕನು ಕ್ರಿ.ಶ. ೧೧೫೬-೧೧೬೭ರಲ್ಲಿ ಆಳುತ್ತಿದ್ದ ಬಿಜ್ಜಳನಿಗಿಂತ ಒಂದೆರಡು ತಲೆಯಾದರೂ ಈಚೆ ಇದ್ದಿರಬೇಕು. ಏಕೆಂದರೆ, ಬಿಜ್ಜಳನು ಸತ್ತಮೇಲೆ ಸಿದ್ಧರಾಮನು ಬಯಲಾದದ್ದು. ಸಿದ್ಧರಾಮನು ಬಯಲಾದ ಮೇಲೆ ರಾಘವಾಂಕನು ಅವನ ಪುರಾಣವನ್ನು ಬರೆದದ್ದು. "ಸೋಮನಾಥ ಚರಿತೆ" ಯೂ ಹೀಗೆಯೇ ಆದಯ್ಯನ ಕಾಲಾನಂತರ ಬರೆದದ್ದು. ಆದಯ್ಯನ ವಚನಗಳನ್ನು ನೋಡಿದರೆ, (ಶಿವಾನುಭವ, ಸಂಪುಟ ೬, ಸಂಚಿಕೆ ೩; "ಆದಯ್ಯನ ವಚನಗಳು," ಪುಟಗಳು ೧೬-೧೭ ಮತ್ತು 'ಪ್ರಸ್ತಾವನೆ' ಪುಟ ೫) ಅವನು ಬಸವಣ್ಣನವರ ಕಾಲಕ್ಕಿಂತ ಈಚೆಗೆ ಇದ್ದನೆಂದು ಊಹಿಸಬೇಕಾಗುತ್ತದೆ. ಆದ್ದರಿಂದ ರಾಘವಾಂಕನು ಸುಮಾರು ಕ್ರಿ. ಶ. ೧೨೦೦ರ ಮೇಲೆ ಇದ್ದಿರಬೇಕೆಂದು ಸ್ಥೂಲವಾಗಿ ಹೇಳಬಹುದು.

ಸುಮಾರು ೧೨೬೩ರಲ್ಲಿ ರಚಿತವಾದ ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ' ದಲ್ಲಿ ಹರೀಶ್ವರನ 'ಗಿರಿಜಾಕಲ್ಯಾಣ' ದಿಂದ ಪದ್ಯಗಳು ಉದ್ಧೃತವಾಗಿರುವುದರಿಂದ ಹರೀಶ್ವರನು ಆ ಕಾಲದಲ್ಲಿ ಅಥವಾ ಅದಕ್ಕಿಂತ ಹಿಂದೆ ಇದ್ದನೆಂದು ಹೇಳಬಹುದು. ರಾಘವಾಂಕನು ಅವನಿಗಿಂತ ಸ್ವಲ್ಪ ಕಿರಿಯವನಾಗಿರಬೇಕು.

---

ಮರಳಿ ಪಡೆದಂತೆಯೂ, ಮಯೂರನು ಸೂರ್ಯನಿಂದ ಹೋಗದ ಕುಷ್ಠವನ್ನು ಶಿವನಿಂದ ನೀಗಿ ನಿರ್ಮಲ ತನುವನ್ನು ಪಡೆದಂತೆಯೂ, ಬಾಣನು ತನ್ನ ಕೈಕಾಲುಗಳನ್ನು ಕತ್ತರಿಸಿಕೊಂಡು ಶಿವನನ್ನು ಸ್ತುತಿಸಿ ಮರಳಿ ಪಡೆದಂತೆಯೂ, ಭೋಜನು ಶಿವಕಾವ್ಯವನ್ನು ಬರೆಯಲು ಶಿವನು ಮೆಚ್ಚಿ ಕೈಲಾಸಕ್ಕೆ ಕರೆದುಕೊಂಡು ಹೋದಂತೆಯೂ ವೀರಶೈವ ಗ್ರಂಥಗಳಲ್ಲಿ ಹೇಳಿದೆ. . . . '—(ಕವಿಚರಿತೆ, I, ೨೨೨ ೨೩.)

ಈತನ ವಿಷಯವಾಗಿ ರಾಘವಾಂಕ ಚಾರಿತ್ರ (ಕ್ರಿ. ಶ. ೧೬೫೦), ಚೆನ್ನಬಸವ ಪುರಾಣ (೧೫೮೪), ಭೈರವೇಶ್ವರಕಾವ್ಯದ ಕಥಾಸೂತ್ರ ರತ್ನಾಕರ (೧೬೭೨), ಗುರುರಾಜ ಚಾರಿತ್ರ (೧೬೫೦) ಇವುಗಳಿಂದ ಈ ವಿಷಯಗಳು ತಿಳಿಯುತ್ತವೆ*—

ರಾಘವಾಂಕ ಚಾರಿತ್ರ :—' ಈತನು ಕುಂತಳ ದೇಶದಲ್ಲಿ ತುಂಗಭದ್ರಾತೀರದಲ್ಲಿರುವ ಪಂಪಾಪುರದಲ್ಲಿ ಹುಟ್ಟಿದನು. ಇವನ ತಂದೆ ಮಹಾದೇವಭಟ್ಟ ; ತಾಯಿ ರುದ್ರಾಣಿ ; ಸೋದರದ ಮಾವ ಮತ್ತು ಗುರು ಹಂಪೆಯ ಹರೀಶ್ವರ. ಈತನು ತನಗೆ ಕವಿತಾಶಕ್ತಿಯುಂಟಾದ ಮೇಲೆ ಪಂಪಾಪುರದ ರಾಜನಾದ ದೇವರಾಜನ ಸಭೆಯಲ್ಲಿ ವಿದ್ವಾಂಸರೆಲ್ಲರೂ ಮೆಚ್ಚುವಂತೆ ಹರಿಶ್ಚಂದ್ರ ಕಾವ್ಯವನ್ನು ರಚಿಸಿ ಓದಿದನು. ಹೀಗೆ ನರಸ್ತುತಿಮಾಡಿದ ತಪ್ಪಿತಕ್ಕೆ ಹರೀಶ್ವರನು ಹಲ್ಲುಗಳನ್ನು ಮುರಿಯಲು ಹರೀಶ್ವರನ ಇಷ್ಟಾನುಸಾರ ಸೋಮನಾಥ ಚರಿತೆಯೇ ಮುಂತಾದ ಗ್ರಂಥಗಳನ್ನು ಬರೆದು ಹಲ್ಲುಗಳನ್ನು ಮರಳಿ ಪಡೆದನು. ತರುವಾಯ ನರಸಿಂಹ ಬಲ್ಲಾಳನ ಮಂತ್ರಿಯಾದ ಕೆರೆಯ ಪದ್ಮರಸನನ್ನು ನೋಡುವುದಕ್ಕಾಗಿ ಹೊಯ್ಸಳ ನಗರಕ್ಕೆ ಹೋದನು. ಅಲ್ಲಿಂದ ಮರಳಿ ಹಂಪೆಗೆ ಬಂದು ಓರುಗಲ್ಲಿನ ರಾಜನಾದ ರುದ್ರಪ್ರತಾಪನ ಸಭೆಯಲ್ಲಿ ಏಕ ದ್ವಿ ತ್ರಿ ಸಂಧಿಗ್ರಾಹಿಗಳೆಂಬ ಕುಕವಿಗಳಿದ್ದಾರೆಂದು ಕೇಳಿ ಅಲ್ಲಿಗೆ ಹೋಗಿ ಷಟ್ಪದೀರೂಪವಾದ ವೀರೇಶ್ವರ ಚರಿತೆಯೆಂಬ ಗ್ರಂಥವನ್ನು ಬರೆದು ರಾಜನ ಸಭೆಯಲ್ಲಿ ಓದಿ ಕುಕವಿಪರವಾದಿಗಳನ್ನು ಜಯಿಸಿ ಹಂಪೆಗೆ ಬಂದು ಹರೀಶ್ವರನ ಆಜ್ಞಾನುಸಾರವಾಗಿ ಬೇಲೂರಿಗೆ ಹೋಗಿ ಅಲ್ಲಿ ಬಯಲಾದನು. ಈತನಿಗೆ ಹಿಂದೆ ಷಟ್ಪದಿಗಳಲ್ಲಿ ಆರೂ ಗ್ರಂಥವನ್ನು ಬರೆದಿರಲಿಲ್ಲ ; ಈತನೇ ಅವುಗಳನ್ನು ನಿರ್ಮಿಸಿದವನು.'

ಚೆನ್ನಬಸವ ಪುರಾಣ :—

ವರಹರೀಶ್ವರನ ಸೋದರದಳಿಯನುಭಯ ಕವಿ
ಶರಭ ಭೇರುಂಡನೆಂದೆಂಬ ನಾನಾಹರಿಯ
[illegible]

* ಕವಿಚರಿತೆ I, ೨೪೫–೨೪೬

ಪರವಾದಿಗಳನಲ್ಲಿ ಗೆಲಿದು ವೀರೇಶನಿಂ
ಪಡೆದೆಸಿಹ ಪದಕಮುಂ ಪಡೆದು ವೇಲಾಪುರಿಂಗೆ
ಮರಳಿ ಬಂದಲ್ಲಿ ದೇಹವನುಳಿದು ಪರಸಮಾಧಿಯೊಳಿರದೆ ಬಯಲಪ್ಪನು ॥

ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರ :—

‘ ಪ್ರತಾಪರುದ್ರನ ಸಭೆಯಲ್ಲಿ ಏಕದಂಡಿ, ದ್ವಿದಂಡಿ, ತ್ರಿದಂಡಿ, ಯೆಂಬ ಮೂವರು ವೈಷ್ಣವಕವಿಗಳು ಸಕಲ ವಿದ್ವಾಂಸರು ಮಾಡಿದ ಪದ್ಯಮಂ ಮೂಱು ವೇಳೆ ಓದಿಸಿ ಆ ಪದ್ಯವ ಪಾಠಮಾಡಿ ನನ್ನ ಪದ್ಯವ ನೀನೆಲ್ಲಿ ಕಲಿತೆ ಎಂದು ಕವಿಗಳನ್ನು ರಾಜನ ಸಭೆಯಲ್ಲಿ ಮನ್ನಣೆಯಿಲ್ಲದಂತೆ ಸೋಲಿಸುತ್ತಿರಲು, ರಾಘವಾಂಕನು ಆ ವಾರ್ತೆಯಂ ಕೇಳಿ ಕವಿಮುಖಕವಾಟವೆಂಬ ಪದ್ಯಶಾಸ್ತ್ರವಂ ರಚಿಸಿ ಓರುಗಲ್ಲಿಗೆ ಹೋಗಿ ಆ ಏಕದ್ವಿತ್ರಿದಂಡಿಗಳನ್ನು ಸೋಲಿಸಿ ರಾಜನಿಂದ ಮನ್ನಣೆ ಯನ್ನು ಹೊಂದಿದನು. ಉಭಯಕವಿಶರಭಭೇರುಂಡ ರಾಘವಾಂಕ ಪಂಡಿತ ಎಂಬ ಶಿವಕವೀಶ್ವರನ ಕವಿತ್ವದಲ್ಲಿ ತಪ್ಪಿಲ್ಲವೆಂದು ಸಮಸ್ತ ಸಮಯದ ಕವಿಗಳೆಲ್ಲಾ ಕೀರ್ತಿಸಿದರು.’

ಗುರುರಾಜ ಚಾರಿತ್ರ :—

‘ ಕವಿಕಮಲಮಾರ್ತಂಡ ರಾಘವಾಂಕಂ ಪಂಪಾವಿರೂಪಾಕ್ಷ ನನು ಸ್ತುತಿಸಿ ಕಂಕಣಕಿರೀಟಾದಿಗಳನನುನಯದಿ ಪಡೆದು ಉಭಯ ಕವಿಶರಭಭೇರುಂಡನೆಂಬ ಪೆಂಡೆಯುವ ಧರಿಸಿ ಹರಿಶ್ಚಂದ್ರನ ಕಾವ್ಯವ ಮುಱಿದು ಸೋಮನಾಥನ ಕಾವ್ಯವ ಪೇಟ್ ಕುಮಾರವ್ಯಾಸನ ಗೆಲಿದು ಓಱುಂಗಲ್ಲಿಗೈದುತ್ತ ಸುಮನಸನ ಲೀಲೆಯಿಂ ಗಂಧರ್ವಲೋಕಕ್ಕೆ ಕಳುಹಿ ವೀರೇಶನಾಲಯಕೆ ಹೋಗಿ ದೇಗುಲದ ಹಿಂದೆ ಕುಳಿತು ಭಕ್ತಿಯಿಂದ ಮಾಸಲುಗವಿತೆಯೆಂಬ ಪ್ರಬಂಧಮಂ ರಾಗದಿಂದೊರೆದು ದೇಗುಲವನಭಿ ಮುಖಗೈದು ವೀರಭದ್ರನಂ ರಂಗಸ್ಥಲಕೆ ಬರಿಸಿ ರುದ್ರಪ್ರತಾಪನಿಂ ಪೂಜೆವಡೆದನು.’

ಈ ಗ್ರಂಥಗಳನ್ನು ನಂಬುವುದಾದರೆ, ರಾಘವಾಂಕ, ಪಂಪಾ ಪುರದ ದೇವರಾಜ, ನರಸಿಂಹಬಲ್ಲಾಳ, ಓರುಗಲ್ಲಿನ ರುದ್ರಪ್ರತಾಪ ಇವರೆಲ್ಲರೂ ಸಮಕಾಲಿಕರಾಗುತ್ತಾರೆ. ಇದು ಸಂಭವವಾಗದೇಹೋದರೆ

ರಾಘವಾಂಕನು ಕ್ರಿ.ಶ. ಸುಮಾರು ೧೨೮೦–೯೦ರಲ್ಲಿ ಇದ್ದಿರಬೇಕೆಂದು ರೆ॥ ಕಿಟ್ಟೆಲ್ ಮತ್ತು ಡಾ॥ ವೆಂಕಟಸುಬ್ಬಯ್ಯನವರೂ, ಸುಮಾರು ೧೧೬೫ರಲ್ಲಿ ಇದ್ದಿರಬೇಕೆಂದು ರಾ. ನರಸಿಂಹಾಚಾರ್ಯರೂ ಅಭಿಪ್ರಾಯ ಪಡುತ್ತಾರೆ.

ನರಸಿಂಹ ಬಲ್ಲಾಳನು ೧ನೆಯ ನರಸಿಂಹ ಹೊಯ್ಸಳ (೧೧೫೨–೧೧೭೧), ರುದ್ರಪ್ರತಾಪನು ೧೧೬೨ರಲ್ಲಿ ಇದ್ದ ರುದ್ರದೇವ, ದೇವರಾಜನು ಯಾರೋ ಗೊತ್ತಿಲ್ಲ—ಎಂಬುದು ರಾ. ನರಸಿಂಹಾಚಾರ್ಯರ ಹೇಳಿಕೆ. ಆದರೆ ಈ ನರಸಿಂಹ ಬಲ್ಲಾಳನು (ಮೂರನೆಯ ನರಸಿಂಹ ಹೊಯ್ಸಳನ ಮಗನಾದ) ಮೂರನೆಯ ಬಲ್ಲಾಳ (೧೨೯೧–೧೩೪೨), ರುದ್ರಪ್ರತಾಪನು ಈ ಮೂರನೆಯ ಬಲ್ಲಾಳನ ಸಮಕಾಲಿಕನಾದ ಓರುಗಲ್ಲಿನ ಪ್ರತಾಪರುದ್ರ, ಪಂಪಾಪುರದಲ್ಲಿ ದೇವರಾಜನೆಂಬ ಒಬ್ಬ ಸಣ್ಣ ರಾಜನಿದ್ದಿರಬಹುದು—ಎಂಬುದು ಡಾ॥ ವೆಂಕಟಸುಬ್ಬಯ್ಯನವರ ಮತ.

ಮೇಲೆ, ಆಂತರಪ್ರಮಾಣ ಮುಂತಾದ ಕಾರಣಗಳಿಂದ ರಾಘವಾಂಕನು ಕ್ರಿ. ಶ. ೧೨೦೦ರ ಮೇಲೆ ಇದ್ದಿರಬಹುದೆಂಧು ಮಾಡಿರುವ ಊಹೆಗೆ ಡಾ॥ ವೆಂಕಟಸುಬ್ಬಯ್ಯನವರ ಮತವು ಉಪಷ್ಟಂಭಕವಾಗುತ್ತದೆ.

ವಸ್ತುತಃ ರಾಘವಾಂಕನ ಕಾಲವಾದ ೩೦೦–೪೦೦ ವರ್ಷಗಳ ಮೇಲೆ ಬರೆದ 'ರಾಘವಾಂಕ ಚಾರಿತ್ರ' ಮುಂತಾದ ಗ್ರಂಥಗಳ ಹೇಳಿಕೆಗೆ ಎಷ್ಟು ಬೆಲೆ ಕೊಡಬೇಕೆಂದು ನಿರ್ಧರಿಸುವುದು ಕಷ್ಟ. ಅವೇನು ಚರಿತ್ರೆಗಳೆಂದು ಬರೆದ ಗ್ರಂಥಗಳಲ್ಲ. ಜನಜನಿತವಾಗಿ ತಿಳಿಯ ಬಂದ ಸಂಗತಿಗಳು ಕಾವ್ಯದಲ್ಲಿ ಪ್ರತಿಪಾದಿತವಾದಾಗ ಒಂದು ಕಾಲದಿಂದ ಮತ್ತೊಂದು ಕಾಲಕ್ಕೆ ಬಣ್ಣವೇರಿ ಬದಲಾಯಿಸುತ್ತ ಹೋಗುವುದು ಸ್ವಭಾವ.

ಆದ್ದರಿಂದಲೇ ಈ ಗ್ರಂಥಗಳಲ್ಲಿ ಚರಿತ್ರಕಾರರಿಗೆ ಸಮ್ಮತವಲ್ಲದ ಸಂಗತಿಗಳೂ ಪರಸ್ಪರ ವಿರೋಧಗಳೂ ಕಂಡುಬರುತ್ತವೆ. ('ಕೆಲವು ಕನ್ನಡ ಕವಿಗಳ ಜೀವನಕಾಲವಿಚಾರ,' ಪುಟಗಳು ೨೬೧–೨೩ನ್ನು ನೋಡಿ.)

ಆದ್ದರಿಂದ ರಾಘವಾಂಕನು ಸುಮಾರು ಕ್ರಿ.ಶ. ೧೨೫೦ರಲ್ಲಿ ಇದ್ದಿರಬಹುದೆಂದು ಸ್ಥೂಲವಾಗಿ ಹೇಳಬಹುದು.*

## ಮತ

ಈತನು ಶಿವಭಕ್ತನಾದ ಕವಿ. 'ಮಹಾಲಿಂಗಭಕ್ತರ ಭಕ್ತ.' ಇದು ಈತನು ಬರೆದಿರುವ ಗ್ರಂಥಗಳ ಸ್ವರೂಪ, ವಿಷಯಗಳು, ಶಿವ ಶೈವಪಕ್ಷಪಾತ ಇವುಗಳಿಂದಲೇ ಗೊತ್ತಾಗುತ್ತದೆ. ಹರಿಶ್ಚಂದ್ರಕಾವ್ಯ ವನ್ನು ಬರೆದಾಗ ರಾಘವಾಂಕನು ನರಸ್ತುತಿಮಾಡಿದನೆಂದು ಅವನ ಮಾವನಾದ ಹರಿಹರನು ಅವನ ಹಲ್ಲುಮುರಿದು 'ಸೋಮನಾಥ ಚರಿತೆ' ಮುಂತಾದ ಶೈವ ಕಾವ್ಯಗಳನ್ನು ಬರೆದ ಮೇಲೆ ಅವುಗಳನ್ನು ಹಿಂತಿರುಗಿ ಕೊಟ್ಟನೆಂದು ಕಥೆಯಿದೆ. ಇದನ್ನು ನಂಬುವುದು ಕಷ್ಟ; ಏಕೆಂದರೆ ಹರಿಶ್ಚಂದ್ರ ಕಾವ್ಯದಲ್ಲಿ ಹರಿಶ್ಚಂದ್ರನು ಶಿವನ ಭಕ್ತನೆಂದೇ ವರ್ಣಿತನಾಗಿದ್ದಾನೆ. ಶೈವ ಕವಿಗಳಿಗೆ ಶಿವನ ಚರಿತೆ ಎಷ್ಟು ಪೂಜ್ಯವೋ ಶಿವಶರಣರ ಚರಿತೆಯೂ ಅಷ್ಟೇ ಪೂಜ್ಯವಾದದ್ದು. ಅಲ್ಲದೆ ಹರಿಶ್ಚಂದ್ರ ಕಾವ್ಯಕ್ಕೆ 'ಒಡೆಯನಮಳ ಪಂಪಾ ವಿರೂಪಾಕ್ಷ'; ಹರಿಶ್ಚಂದ್ರ ನಲ್ಲ. 'ರಾಘವಾಂಕನು ಶರಣರ ಚಾರಿತ್ರ ಪಂಚಕಾವ್ಯವಂ ಪೇಳ್ದ ದನು' (ಕವಿಚರಿತೆ, I, ಪುಟ ೨೩೫) ಎಂದು ಪ್ರವಾದವಿದೆ. ಈ ಪಂಚ

* 'ಸೂಕ್ತಿಸುಧಾರ್ಣವ' ದಲ್ಲಿ ಹರಿಶ್ಚಂದ್ರಕಾವ್ಯದಿಂದ ಪದ್ಯಗಳು ಉದ್ಧೃತವಾಗಿಲ್ಲವಾದ್ದರಿಂದ ಆಗಿನ ಕಾಲಕ್ಕೆ (ಕ್ರಿ.ಶ. ೧೨೪೫) ಹರಿಶ್ಚಂದ್ರ ಕಾವ್ಯವು ಇನ್ನೂ ರಚಿತವಾಗಿದ್ದಿರಲಾರದೆಂದು ಡಾ॥ ವೆಂಕಟಸುಬ್ಬಯ್ಯನವರು ಹೇಳುತ್ತಾರೆ. ಇದು ಅಷ್ಟೇನೂ ತೃಪ್ತಿಕರವಾದ ಕಾರಣವಲ್ಲ. ಷಟ್ಪದಿ ಕಾವ್ಯಕ್ಕೆ ಆಗ ಇನ್ನೂ ಚಂಪೂಗ್ರಂಥಕ್ಕೆ ಇದ್ದ ಗೌರವವು ಇಲ್ಲದೆ ಅದನ್ನು ಮಲ್ಲಿಕಾರ್ಜುನನು ಬಿಟ್ಟಿದ್ದರೂ ಬಿಟ್ಟಿರಬಹುದು. ಪರೀಶ್ವರನ ರಗಳೆಯಿಂದ ಉದ್ಧಾರಮಾಡದಿರುವು ದಕ್ಕೂ ಇದೇ ಕಾರಣವನ್ನು ಹೇಳಬೇಕಾಗುತ್ತದೆ. ಅಲ್ಲದೆ ಸೂಕ್ತಿಸುಧಾರ್ಣವದಲ್ಲಿ ಈಚೆಗೆ ಕೆಲವು ಪದ್ಯಗಳು ಸೇರಿವೆಯೆಂದು ಹೇಳಲು ಆಧಾರವಿದೆ. ಆದ್ದರಿಂದ ಈ ಗ್ರಂಥದ ಸಹಾಯವೊಂದರಿಂದಲೇ ಕಾಲನಿರ್ಧಾರಮಾಡುವುದು ನಿರ್ದುಷ್ಟ ವಾಗಲಾರದು.

'ಚಾರಿತ್ರ'ಗಳಲ್ಲಿ ಹರಿಶ್ಚಂದ್ರಕಾವ್ಯವೂ ಒಂದಾಗಿರಬಹುದು. ಏಕೆಂದರೆ ಕೆಲವು ಕಡೆ ಇದಕ್ಕೆ 'ಹರಿಶ್ಚಂದ್ರ ಚರಿತೆ' ಎಂಬ ಹೆಸರೂ ಕಂಡು ಬರುತ್ತದೆ. ಕವಿಯೂ 'ಕೃತಿಗೆ ನಾಮಂ ಹರಿಶ್ಚಂದ್ರಚಾರಿತ್ರ' ಎಂದು ಹೇಳಿದ್ದಾನೆ (ಹ.ಕಾ. ಸಂಗ್ರಹ, ೧–೩).

ಸಾಮಾನ್ಯವಾಗಿ ವೀರಶೈವ ಕವಿಗಳು ತಮ್ಮ ಗ್ರಂಥಾದಿಯಲ್ಲಿ ಬಸವ ಚೆನ್ನಬಸವಾದಿಗಳನ್ನು ಸ್ತುತಿಸುವುದುಂಟು. ಹರಿಹರನಾಗಲಿ ರಾಘವಾಂಕನಾಗಲಿ ಇವರನ್ನು ಸ್ತುತಿಸಿಲ್ಲ. ಇದಕ್ಕೆ ಏನು ಕಾರಣವೋ ನಿರ್ಧರವಾಗಿ ಹೇಳಲಾಗುವುದಿಲ್ಲ. ಹರಿಹರಾದಿಗಳು ಬಸವ ಚೆನ್ನಬಸವರಿಗಿಂತ ಹಿಂದೆ ಇದ್ದರೂ ಇದ್ದಿರಬಹುದೆಂದು ಕಾವ್ಯಕಲಾನಿಧಿಯ ಸಂಪಾದಕರು ಅಭಿಪ್ರಾಯಪಡುತ್ತಾರೆ.* ಆದರೆ ಇವರೆಲ್ಲರೂ ಒಂದು ವೇಳೆ ಸ್ವಲ್ಪ ಹೆಚ್ಚು ಕಡಿಮೆ ಸಮಕಾಲಿಕರೆಂದಾದರೂ ಹೇಳಬಹುದಲ್ಲದೆ ಹರಿಹರಾದಿಗಳು ಮುಂಚೆ ಇದ್ದರು ಎಂದು ಹೇಳುವುದು ಕಷ್ಟ. ಹರಿಹರ ರಾಘವಾಂಕರು ವೀರಶೈವರೇ ಆದರೂ ಬಸವೇಶ್ವರನ ಮತಾನುಯಾಯಿಗಳಲ್ಲದಿರಬಹುದೆಂಬುದು ಮತ್ತೆ ಕೆಲವರ ಮತ. ಆದರೆ ಹರಿಹರನು ಬಸವೇಶ್ವರನನ್ನು ಶರಣನೆಂದು ಗಣಿಸಿ 'ಶರಣರ ರಗಳೆ'ಯಲ್ಲಿ ಅವನ ಚರಿತ್ರೆಯನ್ನು ಬರೆದಿದ್ದಾನೆ.† ಇದರಿಂದ ಹರಿಹರ ರಾಘವಾಂಕರಿಗೆ ಬಸವೇಶ್ವರನಲ್ಲಿ ಪೂಜ್ಯಭಾವವಿತ್ತೆಂದು ಹೇಳಬಹುದು§.

* ಹರಿಶ್ಚಂದ್ರಕಾವ್ಯದ (೧೯೦೯) ಭೂಮಿಕೆ, ಪುಟ ೪.

† 'ಬಸವರಾಜದೇವರ ರಗಳೆ'ಯನ್ನು ನೋಡಿ.

§ ಹರಿಹರ ರಾಘವಾಂಕರು ಹಿಂದಿನಿಂದ ಬಂದ ಜಾತಿ ಮತ ಕುಲಾಚಾರಗಳಿಗೆ ಮರ್ಯಾದೆಯನ್ನು ಕೊಟ್ಟು, ಶೈವಾಗಮಾನುಸಾರವಾಗಿ ಕರ್ಮಾಚರಣೆ ಮಾಡಿಕೊಂಡು ಬರುತ್ತಿದ್ದ ಶೈವರೆಂದೂ, ಬಸವ ಸಿದ್ಧರಾಮ ಅಲ್ಲಮಾದಿಗಳು ಕರ್ಮಜಾತಿ ಮತಾಗಮಗಳ ಬಂಧನವನ್ನು ನೀಗಿಕೊಂಡು ಶಿವಾನುಭವ ಸತ್ವಶುದ್ಧಿಗಳಿಗೆ ಪ್ರಾಶಸ್ತ್ಯ ಕೊಡುತ್ತಿದ್ದ ಸಿದ್ಧಪುರುಷರೆಂದೂ ಅವರ ಗ್ರಂಥಗಳಿಂದ ಊಹಿಸಬಹುದಾಗಿದೆ.

## ಗ್ರಂಥಗಳು

ರಾಘವಾಂಕನ ಗ್ರಂಥಗಳಲ್ಲಿ 'ಹರಿಶ್ಚಂದ್ರಕಾವ್ಯ,' 'ವೀರೇಶ ಚರಿತೆ,' 'ಸಿದ್ಧರಾಮ ಪುರಾಣ,' 'ಸೋಮನಾಥ ಚರಿತ್ರೆ' ಇವು ನಾಲ್ಕುಮಾತ್ರ ಸಿಕ್ಕಿ ಅಚ್ಚಾಗಿವೆಯೆಂದೂ 'ಶರಭ ಚಾರಿತ್ರ,' 'ಹರಿಹರ ಮಹತ್ವ' ಗಳು ಸಿಕ್ಕಿಲ್ಲವೆಂದೂ ಹೇಳಿದೆಯಷ್ಟೆ. "ಸಿದ್ಧನಂಜೇಶನ 'ರಾಘವಾಂಕ ಚಾರಿತ್ರ' ದಿಂದ, 'ಶರಭ ಚಾರಿತ್ರ'ದಲ್ಲಿ ಹಿರಣ್ಯಕಶಿಪುವಿನ ರಕ್ತಪಾನದಿಂದ ಮತ್ತನಾದ ನರಸಿಂಹನನ್ನು ವೀರಭದ್ರನು ಶರಭಾಕಾರದಿಂದ ಶಿಕ್ಷಿಸಿದ ಕಥೆಯೂ, 'ಹರಿಹರ ಮಹತ್ವ' ದಲ್ಲಿ ಹಂಪೆಯ ಹರೀಶ್ವರನ ಮಾಹಾತ್ಮ್ಯವೂ ವರ್ಣಿತವಾಗಿರುವಂತೆ ತಿಳಿಯಬರುತ್ತದೆ."*

## ವೀರೇಶ ಚರಿತೆ

'ವೀರೇಶ ಚರಿತೆ' ಯನ್ನು ಕೀರ್ತನ ಕೇಸರಿ ಶ್ರೀಮರ್ಾ ಬಿ. ಶಿವಮೂರ್ತಿಶಾಸ್ತ್ರಿಗಳವರು ಈಚೆಗೆ (೧೯೪೨) ಸಂಪಾದಿಸಿ ಅಚ್ಚು ಹಾಕಿಸಿದ್ದಾರೆ. ವೀರಭದ್ರನು ದಕ್ಷಾಧ್ವರವನ್ನು ನಾಶಮಾಡಿದ ಕಥೆಯನ್ನು ರಾಘವಾಂಕ ಈ ಕಾವ್ಯದಲ್ಲಿ ಹೇಳಿದ್ದಾನೆ. ಈ ಚಿಕ್ಕ ಕಾವ್ಯದಲ್ಲಿ ಇರುವುದು ಎರಡೇ ಸಂಧಿಗಳು, ಒಟ್ಟು ೧೨೭ ಪದ್ಯಗಳು. ಇದು ರಾಘವಾಂಕನ 'ವಿಾಸಲುಗವಿತೆ.' ಈ ಕೃತಿಗೆ ಪತಿ ಓರುಂಗಲ್ಲಿನ ವಿಶ್ವೇಶ್ವರನೆಂದು ಕವಿಯೇ ಹೇಳಿರುವುದರಿಂದ ಈಚಿನ ವೀರಶೈವ ಗ್ರಂಥಗಳಲ್ಲಿ ರಾಘವಾಂಕ ಓರುಗಲ್ಲಿಗೆ ಹೋಗಿ ಅಲ್ಲಿದ್ದ ಕುಕವಿಗಳನ್ನು ಸೋಲಿಸಿದನೆಂದಿರುವ ಕಥೆಯಲ್ಲಿ ಸತ್ಯಾಂಶವಿರುವಂತೆ ಊಹಿಸಬಹುದು. ಈ ಕಾವ್ಯದಲ್ಲಿರುವ ಷಟ್ಪದಿಯ ರಚನೆಯನ್ನು ತಿಳಿಸುವುದಕ್ಕಾಗಿ ಇಲ್ಲಿ ಒಂದು ಪದ್ಯವನ್ನು ಕೊಟ್ಟಿದೆ:

ಪರಿಕಿಪೊಡೀ ಕೃತಿಗಾವುದು ಮೊದಲೆನೆ ಪಳಚುವ
ಕೆರೆಯೊಳು ತಿರುಗುವ ಕರಿಮಕರಂಗಳ ಪುಞ್ಜೋ
ತ್ಕರ ಪತಿಯಿಂ ಚೆಲ್ಲಿದ ಮಣಿಗಳ ಬೆಳಗಿಂ ಶ್ವೇತದ್ವೀಪವನಣಕಿಸುತ।

* ಕವಿಚರಿತೆ, I, ಪು. ೨೪೪.

**ಶರನಿಧಿಯೊಪ್ಪುವುದಂತಾ ಶರನಿಧಿಪರಿವೃತ
ಧರೆಯೊಪ್ಪುವುದಂತಾ ಧರೆಯ ಶಿರೋಮಣಿವೊಲ್
ಸುರಗಿರಿಯೊಪ್ಪುವುದಂತಾ ಸುರಗಿರಿಯುತ್ತರ ಭಾಗವನೇಂ ಬಣ್ಣಿಪೆನು॥ ೧-೧೦**

ವಾರ್ಧಕ ಷಟ್ಪದಿಯಂತೆಯೇ ಇದರ ಪ್ರತಿ ಪಾದದಲ್ಲಿಯೂ ಮಾತ್ರಾ ಸಂಖ್ಯೆಯಿದೆ. ಆದರೆ ಇಲ್ಲಿ ಐದು ಮಾತ್ರೆಗಳ ಗಣಗಳಿಗೆ ಬದಲಾಗಿ ನಾಲ್ಕು ಮಾತ್ರೆಗಳ ಗಣಗಳು ಉಪಯುಕ್ತವಾಗಿವೆ. ೧, ೨, ೪, ೫ ನೆಯ ಪಾದಗಳಲ್ಲಿ ೪ ಮಾತ್ರೆಗಳ ೫ ಗಣಗಳೂ ೩, ೬ ನೆಯ ಪಾದಗಳಲ್ಲಿ ೪ ಮಾತ್ರೆಗಳ ೮ ಗಣಗಳೂ ಇವೆ. ಒಂದು ಪ್ರತಿಯಲ್ಲಿ ಇದನ್ನು 'ಉದ್ದಂಡ ಷಟ್ಪದಿ' ಎಂದು ಕರೆದಿದೆಯಂತೆ. (ವೀರೇಶ ಚರಿತ್ರೆಯ ಮುನ್ನುಡಿ ಪು. ೩.)

## ಸಿದ್ಧರಾಮ ಪುರಾಣ

ಸಿದ್ಧರಾಮ ಪುರಾಣದಲ್ಲಿರುವ ವಿಷಯವನ್ನು ಇಲ್ಲಿ ಸಂಗ್ರಹಿಸಿದೆ:

ಸೊನ್ನಲಿಗೆಯಲ್ಲಿ * ನನ್ನಪ್ಪನೆಂಬ ಪ್ರಭುವು ಚಾಮಲದೇವಿಯೆಂಬ ಅರಸಿಯೊಡನೆ ಆಳುತ್ತಿದ್ದನು. (III. ೩೦). ಆಗ ಆ ಊರಿನಲ್ಲಿದ್ದ ಮುದ್ದಯ್ಯ ಸುಗ್ಗವ್ವೆ ಎಂಬವರಿಗೆ 'ದೇಹವಿಕಾರ ವಿಷಯಂಗಳಳಿದ ಬಳಿಕ' ಮುಪ್ಪಿನಲ್ಲಿ ಶಿವಾಂಶಸಂಭೂತನಾದ ಸಿದ್ಧರಾಮನು ಹುಟ್ಟಿದನು. ಇವನಿಗೆ ತಾಯಿತಂದೆಗಳು ಧೂಳಿಮಾಕಾಳಯ್ಯನೆಂದು ತಮ್ಮ ಮನೆದೇವರ ಹೆಸರಿಟ್ಟಿದ್ದರು. ಜಡಭರತನಾಗಿದ್ದ ಈ ಮಗನನ್ನು ಮುದ್ದಯ್ಯನು ದನಕಾಯುವುದಕ್ಕೆ ಹಾಕಿದ್ದನು. ಅಲ್ಲಿ ಲಿಂಗಾರ್ಚನೆ ಮಾಡುತ್ತಿರಲು ಸಿದ್ಧರಾಮನಿಗೆ ಒಂದು ದಿನ ಶಿವದರ್ಶನವಾಯಿತು. ತನಗೆ ದರ್ಶನವಿತ್ತವನು ಶ್ರೀಶೈಲದಲ್ಲಿರುವ ಮಲ್ಲಿನಾಥನೆಂದು ಕೇಳಿ ಸಿದ್ಧರಾಮನು ಅಲ್ಲಿಗೆ ಯಾತ್ರಿಕರೊಡನೆ ಹೊರಟು ಹೋದನು. ಹುಡುಗನು ಎಂದಿನಂತೆ ಮನೆಗೆ ಬಾರದ್ದರಿಂದ ಅವನ ಅಣ್ಣನಾದ ಬೊಮ್ಮಯ್ಯನು ಹುಡುಕಿಕೊಂಡು ಬಂದು, ಮಲ್ಲಿಕಾರ್ಜುನನ ದರ್ಶನಮಾಡಿ ಶಿವಮಯನಾಗಿದ್ದ ತಮ್ಮನನ್ನು ಊರಿಗೆ ಕರೆದುಕೊಂಡು ಬಂದನು.

* 'ಸುವರ್ಣವಲ್ಲಿ' (I, ೧೪): ಈಗಿನ ಸೋಲಾಪುರ.

ಅನಂತರ ಸಿದ್ಧರಾಮನು ತಾಯಿತಂದೆಗಳಿಗೂ ಅಣ್ಣನಿಗೂ ಶಿವದೀಕ್ಷೆಯನ್ನು ಕೊಟ್ಟು, ಶಿವಾಲಯಗಳನ್ನು ಕಟ್ಟಿಸಿ ಮಲ್ಲಿಕಾರ್ಜುನನನ್ನು ಪ್ರತಿಷ್ಠೆಮಾಡಿ, ಕೆರೆಯನ್ನು ಕಟ್ಟಿಸಿ ಅನೇಕ ಪವಾಡಗಳನ್ನು ಮಾಡಿದನು.

ಈ ಮಧ್ಯೆ ವೀರನಾದ ಜಗದೇವನಿಂದ ಬಿಜ್ಜಳರಾಯನು ಅಳಿದು ಹೋದನು. ಬಿಜ್ಜಳನ ತಮ್ಮನಾದ ಕರ್ಣದೇವನು ತನಗೆ ಸಿದ್ಧರಾಮನು ಪಟ್ಟ ಕಟ್ಟಬೇಕೆಂದು ಪದೇ ಪದೇ ಹೇಳಿ ಕಳುಹಿಸಿದನು.* ಆದರೆ "ಹರ ಮುನ್ನ ಹರಸಿ ಕಟ್ಟಿದ ಲಿಖಿತಪಟ್ಟವಂ ಪರಿಹರಿಸಿ ಮತ್ತೊಂದು ಮಾಡುವೀ ಸಾಮರ್ಥ್ಯ . . . . ನರರಿಗಳವಲ್ಲ" (IX, ೨೦) ಎಂದು ಸಿದ್ಧರಾಮನು ಒಪ್ಪಲಿಲ್ಲ.

ಸಿದ್ಧರಾಮನ ಮಾಹಾತ್ಮ್ಯವನ್ನು ಕೇಳಿ ನಾನಾ ದೇಶಗಳಿಂದ ಜನರು ಬರುತ್ತ ತಮ್ಮ ರೋಗಾದಿ ಉಪದ್ರವಗಳನ್ನು ಕಳೆದುಕೊಳ್ಳುತ್ತಿದ್ದರು. ಆಗ ಅಲ್ಲಮನೂ ಅವನ ಹತ್ತಿರಕ್ಕೆ ಬಂದು 'ನೆರೆಯವರಿಗತ್ತು ಕಣ್ಣು ಹೋಹಂದ ನಿಮಗೆ' ಎಂದು ಆಕ್ಷೇಪಿಸಿದನು. ಸಿದ್ಧರಾಮನು 'ಸಾಕಾರನಿಷ್ಠೆ ಭೂತಂಗಳೊಳಗನುಕಂಪೆ ತಾನೆ ಪರಬೊಮ್ಮ' ವೆಂದು

* ಸೃಷ್ಟಿಯೆಲ್ಲವನಾಳ್ವ ಸ್ಥಿರಪಟ್ಟವಂ ತನಗೆ । ಕಟ್ಟುವಡೆ ಸಿದ್ಧರಾಮನು ನಾಥನಾತನೆಂ । ದಟ್ಟಿದಂ ಕರ್ಣದೇವಂ ಸುಖಾಸನವನಾಳ್ಕುದುರೆಯುಂ ಮಂತ್ರಿಯೊಡನೆ । ix, ೧.

ದೇವ ನೀನೊಲಿದು ಬಂದಿಹೆಯೆಂದು ಭೃಶಿವತೇ । ಜೀವಕ್ಕೆ ತಡೆಯಾಯ್ತು ಕರ್ಣದೇವಂ ನಿಮ್ಮ । ನಾವಗಂ ದಿಜಯಗೈಸಿಯೆ ತರಲಿಕಟ್ಟಿದನು ಬರಬೇಹುದೊಲ್ಲೆವೆನಲು । ಸಾವೆನೆಂದನುಗೈಯೆ ಬೇಡಬೇಡವೊ ಅಣ್ಣ । ನಾವೇನು ಬಲ್ಲವೈ ಮಲ್ಲಿಕಾರ್ಜುನ ತನ್ನ । ಕಾವಿಂದ ತೆತಳುವಡೆಯನ್ನಿಚ್ಛೆಯೇ . . . . ix, ೧೧.

....ಎಲ್ಲವನು ದಿನ್ನೈಸಿ ಪಟ್ಟಾದೇಶ ನಿರ್ಧಾರದವ ॥ ಸೋದಿಸಿಂದೇ ಹೋಗಿ ನಾಳೆ ಬಹುದೆನಲವರು। ಮೇದಿನಿಯ ನಾಙ್ಘಡಿಯು ವಾರಣಾಸಿಯ ದಿಟ್ಟ । ಹೋಧರೆಂಬುವುದು ಯೆಮಗಾಯ್ತೆಂದು ಹರುಷದಿಗಿಲಾಭರಕ್ಕೈತಂದರು । ix, ೧೩.

ಸಮಾಧಾನಮಾಡಿ ತನ್ನ ಕೆಲಸದಲ್ಲೇ ನಿರತನಾಗಿದ್ದನು. ಅಲ್ಲಮನು ಸಂತೋಷಪಟ್ಟು ಕದಳಿಕಾವನದ ಕಡೆಗೆ ಹೊರಟು ಹೋದನು.

ಇದಾದ ಕೆಲವು ದಿನಗಳ ಮೇಲೆ ಸಿದ್ಧರಾಮನು ಹಾವಿನಹಾಳ ಕಲ್ಲಯ್ಯ ಮುಂತಾದ ಗುಡ್ಡರನ್ನು ಕರೆದು ಉಪದೇಶಮಾಡಿ ಕೆರೆಯ ಮಧ್ಯದಲ್ಲಿ ಕಟ್ಟಿಸಿದ್ದ ಮಂದಿರದಲ್ಲಿ ಸೇರಿ ಬಯಲಾದನು.

## ಸೋಮನಾಥ ಚರಿತೆ

ಸೋಮನಾಥ ಚರಿತೆಯ ಕಥೆ ಸಂಕ್ಷೇಪವಾಗಿ ಹೀಗಿದೆ :—

ಪುಲಿಗೆಱೆಯಲ್ಲಿ ಜೈನರು ಹೆಚ್ಚಿ ಅಲ್ಲಿಯ ಶಿವಾಲಯದ ಕದವನ್ನು ಹಾಕಿ, ‘ ಭೋಗವ ಕೆಡಿಸಿ ಸದೆಸೊಪ್ಪನೊಟ್ಟಿ ತೀರ್ಥವ ಹೂಳಿ ದುರ್ನೀತಿಯಲಿ ನಡೆಯುತಿಹರು ’ ಎಂದು ನಾರದನು ಶಿವಸಭೆಯಲ್ಲಿ ಹೇಳಲು, ಅದನ್ನು ಕೇಳಿ ಶಿವನು ತನ್ನ ಹಿಂದೆ ನಿಂತಿದ್ದ ಆದಿಗಣನಾಥನನ್ನು ಅಲ್ಲಿಗೆ ಹೋಗುವಂತೆ ಕಳುಹಿಸಿದನು. ಅವನು ಅದರಂತೆ ಪಶ್ಚಿಮ ಸಮುದ್ರ ತೀರದಲ್ಲಿದ್ದ ಸೌರಾಷ್ಟ್ರಪುರದಲ್ಲಿ ಹರದತ್ತ ಪುಣ್ಯವತಿಯೆಂಬವರ ಹೊಟ್ಟೆಯಲ್ಲಿ ಹುಟ್ಟಿದನು. ಪ್ರಾಯಸಮರ್ಥನಾದ ಮೇಲೆ ಅವನು ಒಂದು ದಿನ ತೆಂಕನಾಡಿಗೆ ವ್ಯಾಪಾರಕ್ಕೆಂದು ಹೊರಟು ‘ ಚಂದ್ರಾದಿತ್ಯ ಚಕ್ರೇಶ ’ ನಿದ್ದ ಹುಲಿಗೆರೆಗೆ ಬಂದನು. ಅಲ್ಲಿ ಇಳಿದುಕೊಳ್ಳುವುದಕ್ಕೆ ಭಕ್ತರ (ಎಂದರೆ ಶೈವರ) ಮನೆಯೊಂದೂ ಇರಲಿಲ್ಲ. ಆದರೆ ಬಸದಿಗಳ ಮಧ್ಯೆ ಒಂದು ಶಿವಾಲಯವಿತ್ತು. ಅಲ್ಲಿಗೆ ಹೋದನು.

ಆ ಊರಿನಲ್ಲಿ ಒಂದು ಸಾಯಂಕಾಲ ತಿರುಗಾಡುತ್ತ ಪದ್ಮಾವತಿ ಎಂಬಾಕೆಯನ್ನು ಕಂಡು ಆಕೆಯಲ್ಲಿ ಅನುರಕ್ತನಾಗಿ ಆಕೆಯ ಮನೆಯಲ್ಲಿಯೇ ಒಂದೆರಡು ತಿಂಗಳು ಇದ್ದುಬಿಟ್ಟನು. ಪ್ರಣಯಭರವು ಸ್ವಲ್ಪ ಕಡಮೆಯಾದ ಮೇಲೆ ಆಕೆ ಯಾರು, ಏನು, ಎಂದು ವಿಚಾರಿಸಲು ಆಕೆ ತಾನು ಪಾರಿಸಶೆಟ್ಟಿಯ ಒಬ್ಬಳೇ ಮಗಳು, ತನ್ನದು ಜೈನಮತ ಎಂದಳು. ಇದನ್ನು ಕೇಳಿ ತಾನು ‘ ಭವಿ ’ ಯನ್ನು ಕೂಡಿದ್ದು ತಪ್ಪೆಂದು ಕೊರಗಿ ಆದಯ್ಯನು ಊರಿಗೆ ಹೋಗುತ್ತೇನೆಂದು ನೆವಹಾಕಿಕೊಂಡು ಹೊರಟನು. ಆಕೆ ಬಿಡಲಿಲ್ಲ. ಕೊನೆಗೆ ಆಕೆಯು ಹೋಜೇಶ್ವರದ ಹಿಂದು

ಆಚಾರ್ಯರಿಂದ ಶಿವದೀಕ್ಷೆ ತೆಗೆದುಕೊಂಡಳು. ಅವಳ ತಂದೆ ಇದನ್ನು ಕೇಳಿ ಮಗಳ ಮೇಲೆ ಕೋಪಿಸಿಕೊಂಡನು. ಆಕೆಯು 'ನೀನಾರು ನಾನಾರು? ಸರ್ವಸ್ವವೆನಗೆನ್ನಿನಿಯನಲ್ಲದಿಲ್ಲೆಂದು ನಿರ್ದಾಕ್ಷಿಣ್ಯದಿಂ ತಂದೆಯಂ ಜರಿದಳು.' ಕೊನೆಗೆ ತಂದೆಯು ಸಮಾಧಾನಮಾಡಿಕೊಂಡು, ಇದ್ದ ಒಬ್ಬ ಮಗಳು ಕೈಬಿಟ್ಟು ಹೋದಾಳೆಂದು, ಯಾವ ದೇವರನ್ನಾದರೂ ಪೂಜಿಸಿಕೊ, ಎಲ್ಲಿಯಾದರೂ ತಣ್ಣಗಿದ್ದರೆ ಸಾಕು ಎಂದು ಸುಮ್ಮನಾದನು.

ಒಂದು ದಿನ ಆದಯ್ಯನು ಉದ್ಯಾನವನದಲ್ಲಿ ಸಂಚರಿಸುತ್ತಿರಲು, ಅಲ್ಲಿ ಕೆರೆಯ ಮೇಲೆ ಐದು ಜನ ಶಿವಭಕ್ತರು ಬಂದರು. ಅವರು, ತಾವು ಸೇತುಯಾತ್ರೆಯಿಂದ ಬರುತ್ತ ಐದು ಉಪವಾಸಮಾಡಿಕೊಂಡು ಬಂದರೆಂದೂ, ತಮ್ಮನ್ನು ಇಲ್ಲಿ ಯಾರೂ ಕೇಳದ್ದರಿಂದ ಈ ಹುಲಿಗೆರೆಯು ಹುಲಿಯೂರಾಯಿತೆಂದೂ ಹೇಳಿದರು. ಇದನ್ನು ಕೇಳಿ ಆದಯ್ಯನು ತನ್ನ ಸ್ನೇಹಿತರಿಬ್ಬರನ್ನು ಅವರ ಹತ್ತಿರ ಕೂರಿಸಿ ತಾನು ಮನೆಗೆ ಬಂದು ಹೆಂಡತಿಗೆ ಈ ವೃತ್ತಾಂತವನ್ನು ತಿಳಿಸಿ ಎಲ್ಲರಿಗೂ ಅಡಿಗೆಮಾಡುವಂತೆ ಹೇಳಿ, ತಾನು ಬಿಟ್ಟದ್ದ ಶಿವಭಕ್ತರನ್ನು ಕರೆತರುವುದಕ್ಕೆ ಹೋದನು.

ಇತ್ತ ಕೊಪ್ಪಣದ ಕಡೆಯಿಂದ ಕೆಲವು ಮಲಧಾರಿಗಳಾದ ಶ್ರಮಣರು ಬರಲು ಅವರನ್ನು ಪಾರಿಸಶೆಟ್ಟಿಯು ತಮ್ಮ ಮನೆಗೆ ಚರಿಗೆಗೆಂದು ಕರೆದುಕೊಂಡು ಬಂದನು. ಮನೆಯಲ್ಲಿ ಮಾಡಿದ್ದ ಅಡಿಗೆಯು ಮುಗಿದು ಹೋಗಿದ್ದದ್ದರಿಂದ, ಅವನೂ ಅವನ ಹೆಂಡತಿಯೂ ತನ್ನ ಮಗಳು ಶಿವಭಕ್ತರಿಗೆಂದು ಮಾಡಿಟ್ಟಿದ್ದ ಅಡಿಗೆಯನ್ನು (ಅದಕ್ಕೆ ಬದಲಾಗಿ ಅಕ್ಕಿ ಕೊಡುತ್ತೇವೆಂದು ಹೇಳಿ) ಬಲವಂತವಾಗಿ ತಂದುಬಿಟ್ಟರು. ಶಿವಭಕ್ತರು ಬಂದಾಗ ಪದ್ಮಾವತಿಯು ತಿರುಗಿ ಅಡಿಗೆಯ ಪ್ರಯತ್ನ ಮಾಡಬೇಕಾಯಿತು. ಆದರೆ ಆಗಲೆ ಕತ್ತಲೆಯಾಗುತ್ತ ಬಂದದ್ದರಿಂದ ಅವರು ರಾತ್ರಿಯೂಟಕ್ಕೆ ಒಪ್ಪಲಿಲ್ಲ. ಆದ್ದರಿಂದ ಆದಯ್ಯನು ಅವರಿಗೆ ಹಣ್ಣು ಹಂಪಲುಗಳನ್ನು ತಂದುಕೊಟ್ಟು ಫಲಾಹಾರ ಮಾಡಿಸಿದನು.

ಈ ಅವಾಂತರದಿಂದ ಅವನಿಗೆ ಅಸಮಾಧಾನವಾಗಿ ಊಟ

ಬೇಕಾಗಲಿಲ್ಲ. ಹೆಂಡತಿ, ಅತ್ತೆ, ಮಾವ ಎಷ್ಟೆಷ್ಟೋ ಸಮಾಧಾನ ಹೇಳಿದರೂ ಆವನು ಊಟಕ್ಕೆ ಏಳಲಿಲ್ಲ. ಕೊನೆಗೆ ಸೆಟ್ಟಿಗೆ ಸಿಟ್ಟು ಬಂದು 'ಇವನೇನು ತಮ್ಮ ದೇವರನ್ನು ತಂದು ನಮ್ಮ ದೊಡ್ಡ ಸುರ ಹೊನ್ನೆಯ ಬಸದಿಯಲ್ಲಿ ಪ್ರತಿಷ್ಠಿಸಿ ಜೈನಕುಲವನ್ನು ಹಾಳು ಮಾಡಿದ ಹೊರತು ಊಟಮಾಡುವುದಿಲ್ಲವೇನೋ!'—ಎಂದು ಮೂದಲಿಸಿದನು. ಈ ಮಾತು ಕೇಳಿ ಸಿಟ್ಟುಗೊಂಡು ಆದಯ್ಯನು ಒಂದು ತಿಂಗಳೊಳಗಾಗಿ ಸೋಮಯ್ಯನನ್ನು ತಂದಿಟ್ಟೇ ಊಟ ಮಾಡುತ್ತೇನೆಂದು ಹಟ ಕಟ್ಟಿ ಕೊಂಡು ತನ್ನ ಊರು ಕಡೆ ಹೊರಟನು. ಪದ್ಮಾವತಿಯು ತನ್ನ ಗಂಡನು ಹಿಂತಿರುಗಿ ಬರುವವರೆಗೆ ತನ್ನ ತಂದೆತಾಯಿಗಳನ್ನು ಮಾತಾಡಿಸುವುದಿಲ್ಲವೆಂದು ಹಟ ಹಿಡಿದಳು.

ಇತ್ತ ಆದಯ್ಯನು ಊರ ಕಡೆ ಹೊರಟು ಕಾಡಿನಲ್ಲಿ 'ಉರಿವುರಿವ ಬಿಸಿಲೊಳಗೆ ಬಳಲಿ ಬೆಂಡಾಗಿ' ಇಪ್ಪತ್ತೆಂಟು ದಿನದ ಮೇಲೆ ಸೋಮನಾಥನನ್ನು ಕಂಡನು. ಆವನು ಭಕ್ತನ ಮೇಲೆ ಕರುಣೆತೋರಿ ಆದಯ್ಯನನ್ನು ಪುಲಿಗೆರೆಯಲ್ಲಿ ಕರೆತಂದು ಬಿಟ್ಟು ತಾನು ಬಸದಿಯಲ್ಲಿ ಸೇರಿ ಬಾಗಿಲು ಹಾಕಿಕೊಂಡನು. ಮರುದಿನ ಬೆಳಗ್ಗೆ ಶ್ರಮಣರು ಯಾರು ಬಂದು ತೆಗೆದರೂ ಬಾಗಿಲು ಬರದು; ಹಾರೆ ಮುಂಡಿಗೆಗಳೆಲ್ಲಾ ನಿರುಪಯೋಗವಾದುವು. ಪಟ್ಟದಾನೆಯಿಂದ ಕದವನ್ನು ತಳ್ಳಿಸಿದರೂ ಅದು ಅಲ್ಲಾಡಲಿಲ್ಲ. ಕೊನೆಗೆ ಆದಯ್ಯನು ಬಂದು ಶಿವನನ್ನು ಸ್ತುತಿಸಲು, ಬಾಗಿಲು ತೆರೆಯಿತು. ಆದರೆ, ಒಳಗೆ ಅರುಹಮೂರ್ತಿಯೊಡೆದು ಶಿವಮೂರ್ತಿ ಮೂಡಿತ್ತು. ಇದನ್ನು ನೋಡಿ, ಪುಲಿಗೆರೆಯ ಜೈನರೆಲ್ಲರೂ ಚಂದ್ರಾದಿತ್ಯನನ್ನು ಮುಂದುಮಾಡಿಕೊಂಡು ಆದಯ್ಯನ ಮೇಲೆ ಬಿದ್ದರು. ಆದಯ್ಯನಿಗೆ ನಂದಿಯ ಸಹಾಯ ದೊರೆತು ಜೈನರೆಲ್ಲರೂ ಸೋತರು. ಚಂದ್ರಾದಿತ್ಯನು ಕಾಡಿಗೆ ಓಡಿಹೋದನು. ಅನಂತರ ಆದಯ್ಯನು ತನ್ನ ತಾಯಿ ತಂದೆ ಅತ್ತೆ ಮಾವಂದಿರನ್ನು ಊರಲ್ಲಿ ಮುಖ್ಯಸ್ಥರನ್ನಾಗಿ ಮಾಡಿ ನಿಲ್ಲಿಸಿ ತಾನು ಪದ್ಮಾವತಿಯೊಡನೆ ಸೋಮನಾಥನ ಬಲದ ಕಂಬದಲ್ಲಿ ಐಕ್ಯವಾದನು.*

* ಹರಿಹರನೂ ಆದಯ್ಯನ ಚರಿತ್ರೆಯನ್ನು 'ರಗಳೆ'ಯ ರೂಪವಾಗಿ

ಈ ಗ್ರಂಥಗಳಲ್ಲಿ ಸೋಮನಾಥ ಚರಿತೆಗಿಂತಲೂ ಸಿದ್ಧರಾಮ ಪುರಾಣದ ವಿಷಯವು ಹೆಚ್ಚು ಗಂಭೀರವಾಗಿದೆ; ಗುರುಭಕ್ತಿ ಗೌರವಗಳಿಂದ ಕೂಡಿದೆ; ಇದರಲ್ಲಿ ಕೀಳುಭಾವಗಳಿಗಾಗಲಿ, ಸಡಿಲವಾದ ಸಂಗತಿಗಳಿಗಾಗಲಿ, ಮತವೈಷಮ್ಯ ಪ್ರದರ್ಶನಕ್ಕಾಗಲಿ ಅವಕಾಶವಿಲ್ಲ. ಅತಿಶಯೋಕ್ತಿ ಹೆಚ್ಚಾಗಿಲ್ಲ. ಇದರ ನಾಯಕನು ಘುಟಿಕೆ, ಮೂಲಿಕೆ, ಅಂಜನ, ವಾದ, ವಶ್ಯ, ಕಾಲವಂಚನ, ಮಾರಣ, ಪರಕಾಯಪ್ರವೇಶ ಮುಂತಾದವುಗಳನ್ನು ಬಯಸುವ "ವಿಕಾರಿ ಸಿದ್ಧ" ನಲ್ಲ. ಈ ಚರಿತ್ರೆಯಲ್ಲಿ ಸಿದ್ಧರು, ಸಾಧುಗಳು, ಅವತಾರಪುರುಷರು ಎಂದು ಗಣ್ಯರಾದವರ ಜೀವನಗಳಿಂದ ಸಾಮಾನ್ಯವಾಗಿ ಜನರು ಮೆಚ್ಚಿ ಆರಿಸಿಕೊಂಡು ಪ್ರತಿಪಾದಿಸುವಂಥ ಸಂಗತಿಗಳೇ ಇವೆ. ಇಂಥ ಚರಿತ್ರೆಗಳು ಬರಬರುತ್ತ ಮಹತ್ವದಿಂದ ಕೂಡಿಕೊಂಡು ಅದ್ಭುತಗಳ ಬೀಡಾಗುವುವೆಂಬುದು ತಿಳಿದ ವಿಷಯ; ಈ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕಾವ್ಯವು ಇನ್ನೂ ಸಿದ್ಧರಾಮನು ಮುಕ್ತನಾದ ಹೊಸದರಲ್ಲಿಯೇ ಬರೆದಂತೆ ತೋರುತ್ತದೆ.†

'ಸೋಮನಾಥಚರಿತೆ' ಯು ನಿಜವಾಗಿ ನೋಡಲು 'ಆದಯ್ಯನ

ಬರೆದಿರುವನು (ಶಿವಾನುಭವ, ಸಂಪುಟ ೮, ಸಂಚಿಕೆ ೨) ಇದರ ಪ್ರಕಾರ, ಆದಯ್ಯನು ಹುಟ್ಟಿದ್ದು ಶಿವಪುರದಲ್ಲಿ; ಅವನ ತಾಯಿತಂದೆಗಳು 'ಶಿವಭಕ್ತೆ' ಮತ್ತು 'ಶಿವಭಕ್ತ.' ಅವನ ಮಾವನು ಪಾರಿಷ ಪಂಡಿತ; ಆದಯ್ಯನು ಪುಲಿಗೆರೆಗೆ ಹೋದಾಗ ಅವನು ಸುರಹೊನ್ನೆಯ ಬಸದಿಯಲ್ಲಿ ಪೂಜಾರಿಯಾಗಿದ್ದನು. ಸೋಮನಾಥನನ್ನು ತಂದಿರಿಸಿದ ಮೇಲೆ ಆದಯ್ಯನು ಪುಷ್ಪಕವಿಮಾನದಲ್ಲಿ ಕೈಲಾಸಕ್ಕೆ ಹೋದನು. ಒಟ್ಟಿನ ಮೇಲೆ ಈ ಗ್ರಂಥದಲ್ಲಿ ಸೋಮನಾಥ ಚರಿತೆಗಿಂತ ಸ್ವಮತಾಭಿಮಾನವೂ ಪರಮತದೂಷಣವೂ ಹೆಚ್ಚಾಗಿ ಕಾಣುತ್ತವೆ. ಕಾವ್ಯಗುಣಗಳೇನು ಹೆಚ್ಚಾಗಿಲ್ಲ.

† ಈ ಗ್ರಂಥದ ಕೊನೆಯಲ್ಲಿ ಸಿದ್ಧರಾಮನು ಮೃತನಾದನೆಂದು ಸ್ಪಷ್ಟವಾಗಿ ಹೇಳಿಲ್ಲ 'ಅರರೆ ಕಸುವೆರಸಿ. . . . ಎಲ್ಲ ಧರೆಯ ಪ್ರಾಯಲಿಂತು ಸೊನ್ನಲಿಗೆಯಲಿ ನಲಿವುತಿಹ ಸಿರಿಯಾಣ್ಮ . . .' (I, ೭) ಎಂಬ ಪೀಠಿಕಾ ಭಾಗವನ್ನು ನೋಡಿದರೆ ಸಿದ್ಧರಾಮನು ಬದುಕಿದ್ದಾಗಲೇ ಈ ಗ್ರಂಥವು ರಚಿತವಾಯಿತೋ ಎಂಬ ಸಂದೇಹ ಬರುತ್ತದೆ. 'ಸಿದ್ಧರಾಮನು ಸತ್ತಿಲ್ಲ, ಜೀವಂತನಾಗಿ ಸಮಾಧಿಯಲ್ಲಿ ನೆಲಸಿದ್ದಾನೆ'—ಎಂದು ಜನರು ನಂಬಿದ್ದರೂ ಇದ್ದಿರಬಹುದು.

ಚರಿತೆ.' ಇದರಲ್ಲಿ ಕವಿಸಮಯವನ್ನನುಸರಿಸಿ ಪುರವರ್ಣನೆ, ವನವರ್ಣನೆ, ಸ್ತ್ರೀವರ್ಣನೆ ಮುಂತಾದ ವಿಸ್ತಾರವಾದ ವರ್ಣನೆಗಳಿವೆ. ಆದಯ್ಯನು ಅವತಾರಪುರುಷ, ಶಿವಭಕ್ತ ಎಂದು ವರ್ಣಿತನಾಗಿದ್ದರೂ, ಸೋಮಯ್ಯ ಸೋಮಯ್ಯನೆನ್ನುತ್ತ ಸೋಮನಾಥನ ಸ್ತುತಿ ಮಾಡಿದ್ದರೂ ಅವನಲ್ಲಿ ಸಿದ್ಧರಾಮನ ಘನತೆ ಗುರುತ್ವಗಳಿಲ್ಲ ; ಸಿದ್ಧರಾಮನ ಸ್ವಾರ್ಥತ್ಯಾಗ, ಪರೋಪಕಾರ ಬುದ್ಧಿ, ಪಾರಲೌಕಿಕ ವಿಚಾರ, ನಿತ್ಯಾನಿತ್ಯ ವಿವೇಕ ಮುಂತಾದ ಮಹಾಪುರುಷಗುಣಗಳು ಕಂಡುಬರುವುದಿಲ್ಲ. ಅವನಲ್ಲಿ ಆ ಪೂಜ್ಯಭಾವವುಂಟಾಗುವುದಿಲ್ಲ.

## ಹರಿಶ್ಚಂದ್ರ ಕಾವ್ಯ

ಸಿದ್ಧರಾಮ ಪುರಾಣ, ಸೋಮನಾಥ ಚರಿತೆ ಇವೆರಡಕ್ಕಿಂತಲೂ ಹರಿಶ್ಚಂದ್ರ ಕಾವ್ಯದಲ್ಲಿ ಮತಾಂಶಗಳು ವಿರಳವಾಗಿಯೂ, ಕಾವ್ಯಾಂಶಗಳು ನಿಬಿಡವಾಗಿಯೂ ಇವೆ. ಹರಿಶ್ಚಂದ್ರನು ಶಿವಭಕ್ತ, ಸತ್ಯವ್ರತಿ, ಎಂದು ವರ್ಣಿತನಾಗಿದ್ದರೂ ಅವನು ಸಿದ್ಧರಾಮ ಆದಯ್ಯರಂತೆ ಶೈವಧರ್ಮೋದ್ಧಾರಕ್ಕಾಗಿಯೇ ಜನಿಸಿದವನು, ಜೀವಿಸಿದವನು—ಎಂಬ ಭಾವವುಂಟಾಗುವುದಿಲ್ಲ. ಅವನು ಶಿವಸಂಕಲ್ಪದಿಂದಲೋ ಪ್ರಸಾದದಿಂದಲೋ ಹುಟ್ಟಿದ ಗಣೇಶ್ವರನಲ್ಲ, ಪವಾಡಪುರುಷನಲ್ಲ. ಆದ್ದರಿಂದಲೇ ಅವನು ನರಮನುಷ್ಯನೆಂದು ಗಣ್ಯನಾಗಿದ್ದಿರಬಹುದು. ಆದರೆ ಈ ಗ್ರಂಥದಲ್ಲಿ ರಸಾಲಂಕಾರಾದಿ ಕಾವ್ಯಲಕ್ಷಣಗಳೂ ಪ್ರೌಢಿಮೆಯೂ ಹೆಚ್ಚಾಗಿವೆ.

ಗ್ರಂಥಾರಂಭದಲ್ಲಿ ಬರುವ ಮಂಗಳಪದ್ಯವು ಬಹು ಸುಂದರವಾಗಿಯೂ, ಸುಲಭವಾಗಿಯೂ, ಗಂಭೀರವಾಗಿಯೂ ಅರ್ಥಪುಷ್ಟಿಯುಳ್ಳದ್ದಾಗಿಯೂ ಇದೆ. ಜಗತ್ತಿನಲ್ಲಿರುವ ಸೊಬಗು ಶಾಂತಿ, ಚಾತುರ್ಯ

ಇದರ ಆದಿಯಲ್ಲಿ ವಿರೂಪಾಕ್ಷಸ್ತುತಿಯಿಲ್ಲ ; ಪೀಠಿಕೆಯು ಸೂಕ್ಷ್ಮವಾಗಿದೆ ; ಗ್ರಂಥವು ಸರಳವಾಗಿದೆ; ಷಟ್ಪದಿಯ ರಚನೆಯಲ್ಲಿ ಅಷ್ಟೊಂದು ನಯವಿಲ್ಲ, ಓಟವಿಲ್ಲ. ಆದ್ದರಿಂದ ಇದೇ ರಾಘವಾಂಕನ ಮೊದಲನೆಯ ಕಾವ್ಯವಾಗಿದ್ದರೂ ಇರಬಹುದು ಎನ್ನಿಸುತ್ತದೆ.

ಶಿವಮೊಗ್ಗ ಕರ್ಣಾಟಕ ಸಂಘದಿಂದ ಪ್ರಕಟಿತವಾದ (೧೯೪೧) ಈ ಗ್ರಂಥದ ಪೀಠಿಕೆಯಲ್ಲಿ ಅದರ ಸಂಪಾದಕರಾದ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ಇದನ್ನು ವಿಸ್ತಾರವಾಗಿ ವಿಮರ್ಶೆಮಾಡಿದ್ದಾರೆ.

ಪ್ರತಾಪ, ಭೋಗ, ರೂಪ, ಗಾಂಭೀರ್ಯ, ತೇಜಸ್ಸು ಇವೆಲ್ಲಾ, ಗುರುವಿನಿಂದ ಶಿಷ್ಯನಿಗೆ ವಿದ್ಯೆ ಬಂದಂತೆ, ವಿರೂಪಾಕ್ಷನಿಂದ ಪ್ರಪಂಚಕ್ಕೆ ಬಂದಿವೆಯೆಂದು ಬಹು ಉದಾತ್ತವೂ ಉದಾರವೂ ಮನೋಹರವೂ ಆದ ಸೂಚನೆ ಇದೆ. ಇದನ್ನು ಓದಿದಾಗ

ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಂಶಸಂಭವಂ ॥

ಎಂಬ ಗೀತಾ ಶ್ಲೋಕವು ಜ್ಞಾಪಕಕ್ಕೆ ಬರುತ್ತದೆ.

ವಿರೂಪಾಕ್ಷಸ್ತುತಿಯಾದಮೇಲೆ, ಕವಿಯು ಪಂಪಾಂಬಿಕೆಯನ್ನೂ, ಗುರುಹಿರಿಯರನ್ನೂ, ಪೂರ್ವ ಕವಿಗಳನ್ನೂ ಸ್ಮರಿಸಿ 'ಕಥಾಬೀಜ'ವನ್ನು ತಿಳಿಸುತ್ತಾನೆ :—

ವಸುಧಾಧಿಪತಿ ಹರಿಶ್ಚಂದ್ರ ಘನಸತ್ಯನೆಂ
ದೊಸೆದು ವಾಸಿಷ್ಠನಿಂದ್ರಂಗೆನಲು ಕೌಶಿಕಂ
ಹುಸಿಮಾಳ್ಪೆನೆಂದು ಭಾಷೆಯನಿತ್ತು ಧರೆಗೆ ಬಂದವನಿಪನ
ಸತಿಪುತ್ರರ ।
ಅಸುವಂತ್ಯವೆನೆ ನಿಗ್ರಹಂಮಾಡೆ ತಪ್ಪದಿರೆ
ಶಶಿಮೌಳಿ ಶ್ರೀವಿಶ್ವನಾಥ ಭೂಪಂಗೆ ಕರು
ಣಿಸಿ ಸಕಲಸಾಮ್ರಾಜ್ಯವಿತ್ತಾತನಂ ಮೆಱೆದ ಕೃತಿ
ಪುಣ್ಯದಾಕೃತಿಯಿದು ॥ (ಸಂಗ್ರಹ, ೧.೪)

ಇದು 'ಶಿವಭಕ್ತಿವಲ್ಲರಿಯ ಹೊಸಬಿತ್ತು.' 'ಜಡಮತಿಯೊಳೀತನಂ ಬಣ್ಣಿಸಿದನಿವನೆಂದು' ಯಾರಾದರೂ ನಿಂದಿಸಿಯಾರು! ಆದರೆ 'ಗುಡ್ಡಿ ಪಶು ಕುಡೆ ಕಱೆದ ಹಾಲು ಕಹಿಯಪ್ಪುದೇ?' ನಿಂದಿಸುವವರು ನಿಂದಿಸಲಿ; ಅವರ ಗೋಜಿಗೆ ಹೋಗುವುದು ಕೊಳಕುಬಟ್ಟೆಯನ್ನು ಒಗೆಯುವಂಥ ಕೆಲಸ; ಇಷ್ಟರಮೇಲೆ ದೋಷಗಳಿದ್ದರೆತಾನೇ ಏನು? 'ನಡೆವರೆಡಹದೆ ಕುಳಿತರೆಡಹುವರೆ?' ಆದ್ದರಿಂದ ತಪ್ಪಿದ್ದರೆ, ಶಿವಾರ್ಚಕರು 'ಸಸಿನೆಮಾಡುವುದದ ತಿರ್ದುವುದು, ಕೊಂಡಾಡಿ ಲಾಲಿಸಿ ಕೇಳ್ವುದು.' ಮತ್ತು ಕವಿ ಗಮಕಿ ವಾದಿ ವಾಗ್ಮಿರಸಾಲೋಕಿಗಳು ತಲೆದೂಗಿಬಿಟ್ಟರೆ ಸರಿ; 'ವ್ಯಾಕರಣ ಪರಿಣತನಲಂಕಾರ ಪರಿಶೋಧನೀಶರಸನಿಪುಣನಭಿಧಾನ ಪ್ರವೀಣನೆಲ್ಲಾ ಕಳಾಕುಶಲನೆನಿಪ' ಕವೀಶನಿದ್ದರೂ

ಅವನ ಕಾವ್ಯವನ್ನು ಕೇಳುವವರಿಲ್ಲದಿದ್ದರೆ ಏನು ಪ್ರಯೋಜನ? ಅವರು ಹೊಗಳದೆ ದುರ್ಜನರು ಹೊಗಳಿದರೇನು? ತೆಗಳಿದರೇನು? ರೋಗಿ ಹಳಿದಡೆ ಹಾಲು ಹುಳಿಯಪ್ಪುದೇ? ಪರೋಕ್ತಿಗಳ ಅರ್ಥವನ್ನು ಕದಿಯುವುದು ಉಗುಳಿದ ತಂಬುಲಕ್ಕೂ ಉಟ್ಟು ಕಳೆದ ಮೈಲಿಗೆಗೂ ಕೈನೀಡುವಂಥ ಕೆಲಸ (ಹರಿಶ್ಚಂದ್ರಕಾವ್ಯ, i, ೧೯-೨೪)—ಎಂದು ಕವಿಕಾವ್ಯ ವಿಚಾರವಾಗಿ ತನ್ನ ಅಭಿಪ್ರಾಯವನ್ನು ತಿಳಿಸಿ ಅನಂತರ ಕಾವ್ಯವನ್ನು ಆರಂಭಿಸುತ್ತಾನೆ.

ಸಂಪ್ರದಾಯದಂತೆ, ಮೊದಲು ಸಮುದ್ರದ ವರ್ಣನೆ ಬರುತ್ತದೆ; ಆದರೆ ಕವಿಯು ಇದನ್ನು ಲಂಬಿಸದೆ, ಇನ್ನೊಂದು ಪದ್ಯದಲ್ಲಿ ಮೇರುವಿನ ದಕ್ಷಿಣಕ್ಕೆ ಲಾಳದೇಶವಿತ್ತೆಂದೂ ಅದಕ್ಕೆ ಅಯೋಧ್ಯೆ ರಾಜಧಾನಿಯಾಗಿತ್ತೆಂದೂ ಹೇಳಿಬಿಡುತ್ತಾನೆ. ಅಲ್ಲಿ ಹರಿಶ್ಚಂದ್ರನು ಚಂದ್ರಮತಿ ಎಂಬ ಹೆಂಡತಿಯೊಡನೆಯೂ ರೋಹಿತಾಶ್ವನೆಂಬ ಮಗನಿಂದಲೂ ಕೂಡಿ ರಾಜ್ಯವಾಳುತ್ತಿದ್ದನು.

ಇತ್ತ, ದೇವೇಂದ್ರನ ಸಭೆಯಲ್ಲಿ, ಭೂಲೋಕದೊಳಗೆ ಸತ್ಯವಂತರಾದ ರಾಜರು ಯಾರು ಎಂದು ಪ್ರಶ್ನೆ ಹುಟ್ಟಿ ವಸಿಷ್ಠನು ಹರಿಶ್ಚಂದ್ರನ ಹೆಸರು ಹೇಳುವನು; ವಿಶ್ವಾಮಿತ್ರನು ವಿರೋಧಿಸುವನು. ಅವರ ಸಂಭಾಷಣೆಯು ಸ್ವಾರಸ್ಯವಾಗಿದೆ. ವಿಶ್ವಾಮಿತ್ರನ ಮಾತಿನಲ್ಲಿ ಕ್ಷಾತ್ರವೂ ವಸಿಷ್ಠನ ಮಾತಿನಲ್ಲಿ ಸ್ಥೈರ್ಯವೂ ಹೇಗೆ ಕಂಡುಬರುವುವು ನೋಡಿ:—

ವಿಶ್ವಾ—‘ ಇನಿತು ಮುಳಿಸಾವುದು! ಹರಿಶ್ಚಂದ್ರ ಭೂಭುಜನ ಮನೆಗೀಗ
ಳಿಂತು ನೀ ಹೋಗಿ ಕೌಶಿಕನು ನೆಟ್ಟನೆ ನಿನ್ನನಂತಿಂತು ಕೆಡಿಸಿ
ದಪ; ನೀನಾವ ಪರಿಯುಳಿಚ್ಚತ್ತಿರೆಂದು ನೆನೆಸಿಕೊಡು ಹೋಗು.’

ವಸಿ.—‘ ಅನಾಡುವವನೆ ಹೇಳು!’

ವಿಶ್ವಾ.—‘ ಎನ್ನ ಗಾಸಿಗಾಱದೆ ನೃಪಂ ಹುಸಿನುಡಿಯೆ ಮುನಿತನವ
ನೀಡಾಡಿ ಹೋಹಂತಿರಾದಪುದು. ಹೋಗಿ ನೀಂ ಹೇಳು!’

ವಸಿ.—‘ ತರಣಿ ತೇಜಂಗಿಡದಿರು. ಅಗ್ನಿ ಬಿಸುಪಾಱದಿರು, ಸರಸಿಜಾಪ್ತ
ವೈರಿ ತಂಪಂ ಬಿಡದಿರು, ಎಲೆ ಮಂದರವೆ ಚಲಿಸದಿರು ಎಂದು
ಬೋಧಿಸಲದೇಕೆ? ನಿಜವಳಿವವೇ ಸುಮ್ಮನಿರಲು?’

ವಿಶ್ವಾ.—‘ ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ? . . . ಕವಿದು
ಹೆಗ್ಗಡಲುಕ್ಕಿ ಜಗವ ಮೊಗೆವಡೆ ಮೆಳೆಗಳಡ್ಡಬಹವೇ? ಮುನಿಪ,
ನಿನ್ನ ಬಹ ಬೋಧೆಗೀಧೆಗಳು ರಕ್ಷಿಸುವುವಲ್ಲ; ನೀ ಹೇಳದಿರ್ದಡೆ
ಮದನಹರನಾಣೆ; ಹೋಗು! . . . .’

ವಸಿ.—‘ ಕುಲವ ನಾಲಗೆಯಱುಹಿತೆಂಬ ನಾಣ್ನುಡಿಗಿಂದು ನೆಲೆಯಾಯ್ತಲಾ! ಬ್ರಹ್ಮಋಷಿಯಾದಡೋಗು ನಿರ್ಮಳವಪ್ಪುದಯ್ಯ! ನೀಂ ರಾಜರ್ಷಿ; ಕೋಪಿಸದೆ ಥಟ್ಟಿಸದೆ ಕೆಡೆನುಡಿಯದೆ ನಿಲಲೆಂತು ಬಲ್ಲೆ! . . .’

‘ ಕೋಣಗಳ ಹೋರಾಟ, ಗಿಡಕ್ಕೆ ಮೃತ್ಯು’ ಎಂಬಂತೆ ವಸಿಷ್ಠ ವಿಶ್ವಾಮಿತ್ರರ ಹೋರಾಟ ಹರಿಶ್ಚಂದ್ರನನ್ನು ಕಷ್ಟಕ್ಕೆ ಗುರಿಮಾಡಿತು. ವಿಶ್ವಾಮಿತ್ರನು ‘ ನಿಜವೈರದಂತಸ್ಥವನಱಿಯದ ಮುನಿಗಳ ಕರೆದು’ ಅವರ ಪ್ರೇರಣೆಯಿಂದ ಹರಿಶ್ಚಂದ್ರನು ಸುವರ್ಣಯಾಗವನ್ನು ಮಾಡುವಂತೆ ಏರ್ಪಡಿಸಿ, ಯಾರು ಏನು ಕೇಳಿದರೂ ದಾನಮಾಡುತ್ತೇನೆಂಬ ಹರಿಶ್ಚಂದ್ರನ ಪ್ರತಿಜ್ಞೆಯನ್ನು ಭಂಗಪಡಿಸುತ್ತೇನೆಂದು ಎಷ್ಟೋ ಉತ್ಸಾಹದಿಂದ ಬಂದು, ‘ ಪಿರಿಯ ಕರಿಯಂ ಮೆಟ್ಟಿ ಕವಡೆಯಂ ಮಿಡಿದಡೆನಿತುದ್ದಕ್ಕೆ ಹೋಹುದದಱ ಸರಿಯೆನಿಸಿ ಸುರಿದ ಹೊಸ ಹೊನ್ನರಾಸಿಯ ನೀವುದರಸ!’ ಎಂದನು. ಹರಿಶ್ಚಂದ್ರನಿಗೆ ಲಕ್ಷ್ಮೀಪ್ರಸಾದ ಚೆನ್ನಾಗಿತ್ತು. ಆದ್ದರಿಂದ, ಹಿಂದುಮುಂದು ನೋಡದೆ ‘ ಹಸಾದಂ, ಕೊಟ್ಟೆನು; ಅದನೀಗಳೆ ಇರದುಯ್ವುದು!’ ಎಂದನು. ಮುನಿಯ ಮುಖವು ಮಂಕಾಯಿತು. ‘ ನಿನ್ನ ಮೇಲೆ ಇರಲಿ; ಬೇಕಾದಾಗ ತರಿಸಿಕೊಳ್ಳುತ್ತೇನೆ’ ಎಂದು ಹೇಳಿ ಹೊರಟುಹೋದನು.

ಹೀಗೆ ವಿಶ್ವಾಮಿತ್ರನ ಸೋಲಿಗೆ ಮೊದಲಾಯಿತು. ಆದರೆ ಸೋತಷ್ಟೂ ಕೋಪ ಹೆಚ್ಚಿತು; ಆದ್ದರಿಂದ ನಾನಾ ಮೃಗಪಕ್ಷಿಗಳನ್ನು ಸೃಷ್ಟಿಸಿ ಅವುಗಳನ್ನು ಹರಿಶ್ಚಂದ್ರನ ದೇಶದ ಮೇಲೆ ಬಿಟ್ಟನು. ಅವು ಬೆಳೆಗಳನ್ನು ಹಾಳುಮಾಡುತ್ತ ಬಂದುವು. ‘ ಖಗಮೃಗದ ಕಾಟದಿಂದ ಧರೆಯೊಳಗೆ ಬಿತ್ತಿಲ್ಲ ಬೆಳೆಯುಲ್ಲ ನೀರಿಲ್ಲ’ ಎಂದು ಪ್ರಜೆಗಳೆಲ್ಲರೂ ಹಾಹಾಕಾರ ಪಡುವಂತಾಯಿತು. ಅವುಗಳ ಕಾಟವನ್ನು ಪರಿಹರಿಸಲು ಹರಿಶ್ಚಂದ್ರನು

ಬೇಟೆಗೆ ಹೊರಟು ಮೃಗಗಳನ್ನು ಅಟ್ಟಿಕೊಂಡು ಬರುತ್ತ ವಸಿಷ್ಠನಿದ್ದೆಡೆಗೆ ಬಂದನು. (ವಸಿಷ್ಠಾಶ್ರಮವು ತನ್ನ ಹಂಪೆಯಲ್ಲಿತ್ತೆಂಬುದು ಕವಿಯ ಅಭಿಮಾನಪೂರ್ವಕವಾದ ಉತ್ಪ್ರೇಕ್ಷೆ!) ವಸಿಷ್ಠನಿಗೆ ತನ್ನ ಪ್ರಿಯ ಶಿಷ್ಯನನ್ನು ಕಂಡು ಧರ್ಮಸಂಕಟ ಒದಗಿತು. 'ವಿಷಮ ವಿಶ್ವಾಮಿತ್ರಮುನಿ ಮುನಿದು ತಪ್ಪ ಸಾಧಿಸುವ, ನೀನಱಿದಿರೆಂದಱುಪಬೇಕು; ಅಱುಪಿದಡೆ ಪಿಸುಣತ್ವ: ಅಱುಪದಿರ್ದಡೆ ನೃಪನ ಕೇಡ ನಾನೋತುಪೇಕ್ಷಿಸಿದಾತನು; ಗಸಣಿಯಾಯ್ತು; ಏಗೆಯ್ವೆನು ಎಂದು ಮನದೊಳಗೆ ಚಿಂತಿಸಿ' ಕೊನೆಗೆ 'ಪೇಳದಂತೆ ಪೇಳ್ದಪೆನೆಂದು' ನೆನೆದು 'ಎನ್ನನೊಲುವೊಡೆ ಕುಲಾಚಾರಮಂ ಬಿಡದಿರ್ಪಡೆ ಉನ್ನತಿಕೆ ಬೇಹಡೆ ಉತ್ತಮಕೀರ್ತಿ ಕೆಡದಿಹಡೆ, ನನ್ನಿಯುಳಿವಡೆ, ಮಗನೆ ಹೋಗದಿರು ಮಗೆದು ವಿಶ್ವಾಮಿತ್ರನಾಶ್ರಮಕ್ಕೆ, ಗನ್ನದಿಂ ಮಱಹಿಕ್ಕಿಕೊಂಡೊಯ್ದು ಬಳಿಕ ಮುನಿ ಬನ್ನಬಡಿಸಿಯೆ ಕಾಡಿದಪನಱಿದಿರು . . . . .' ಎಂದು ಎಚ್ಚರಿಕೆ ಕೊಟ್ಟನು.

ಆದರೆ ವಿಧಿಯು ಹರಿಶ್ಚಂದ್ರನನ್ನು ಅಲ್ಲಿಗೇ ಎಳೆದುಕೊಂಡು ಹೋಯಿತು. ಅವನು ಒಂದು ಕಾಡುಹಂದಿಯನ್ನು ಬೆನ್ನಟ್ಟಿ ಅರಿಯದೆ ವಿಶ್ವಾಮಿತ್ರನ ಆಶ್ರಮಕ್ಕೇ ಹೋದನು. ಬೇಟೆಯ ಆಯಾಸವೊಂದು ಕಡೆ, ಗುರ್ವಾಜ್ಞೆಗೆ ವಿರುದ್ಧವಾಗಿ ವಿಶ್ವಾಮಿತ್ರನೆಡೆಗೆ ಬಂದನೆಂಬ ಅಂಜಿಕೆಯೊಂದುಕಡೆ; ದುಸ್ಸ್ವಪ್ನ ದೌರ್ಮನಸ್ಯಗಳ ಕಳವಳ ಒಂದು ಕಡೆ; ಈ ಸ್ಥಿತಿಯಲ್ಲಿ ವಿಶ್ವಾಮಿತ್ರನ 'ಹೊಲೆ' ಯಾದ 'ಕೋಪ ಬದ್ಧ ದ್ವೇಷ ಅನಿಮಿತ್ತವೈರ' ಗಳಿಂದ ಹುಟ್ಟಿದ ಇಬ್ಬರು ಸ್ತ್ರೀಯರು ಬಂದು ಗಾನಮಾಡಿ ಅವನ 'ದುಗುಡವನ್ನು ರಾಗರಸಲಹರಿಯಿಂದ ತೊಳೆದರು.' ಅವನು ಅದಕ್ಕೆ ಸಂತೋಷಪಟ್ಟು ತನ್ನ ಸರ್ವಾಭರಣವನ್ನೂ ಕೊಟ್ಟನು. ಅವರು ಬಂದಿದ್ದದ್ದು ಸಂಪಾದನೆಗಲ್ಲ, ವ್ಯಾಜ್ಯಕ್ಕೆ; ಆದ್ದರಿಂದ ಅಷ್ಟಕ್ಕೆ ಒಪ್ಪಲಿಲ್ಲ. ಇಲ್ಲಿ ಹರಿಶ್ಚಂದ್ರನ ಸೌಮ್ಯಗುಣವನ್ನೂ ಗಾಯಕಿಯರ ವಕ್ರಸ್ವಭಾವವನ್ನೂ ಕವಿ ಚೆನ್ನಾಗಿ ಚಿತ್ರಿಸಿದ್ದಾನೆ. ಅವರ ಸಂಭಾಷಣೆಯು ರಸವತ್ತಾಗಿದೆ :

ಗಾಯಕಿಯರು.— 'ಬಡತನದ ಹೊತ್ತಿನಲ್ಲಿ ಆನೆ ದೊರಕಿ ಫಲವೇನು?

ನೀರಡಸಿರ್ದ ಹೊತ್ತಿನಲ್ಲಿ ಅಜ್ಯ ದೊರಕಿ ಫಲವೇನು ? . . ಕಡು ಎಸಿಲು ಹೊಡೆದು ಬೆಂಡಾಗಿ ಬೀಳ್ವೆಮಗೆ ನೀನೊಲಿದು ಮಣಿದೊಡಿಗೆಗಳನಿತ್ತು ಫಲವೇನು ಭೂಪಾಲ ! . . ಸುಡುಸುಡನೆ ಸುಡುವ ಬಿರುಬಿಸಿಲ ಸೆಕೆಯುಸುರು ಬಿಸಿಹೊಡೆದುದುರಿಹತ್ತಿ ಬಾಯ್ ಬತ್ತಿ ಡಗೆ ಸುತ್ತಿ ಸಾವಡಸುತ್ತಿದೆ ! ನಿನ್ನ ಮುತ್ತಿನ ಸತ್ತಿಗೆಯನಿತ್ತು ಸಲಹು ! '

ಹರಿಶ್ಚಂದ್ರ.—' ರವಿಕುಲದ ಪೀಳಿಗೆಯೊಳೊಗೆದ ರಾಯರ್ಗೆ ಪಟ್ಟವ ಕಟ್ಟುವಂದಿದಿಲ್ಲದಡರಸುತನ ಸಲ್ಲದವನಿಯೊಳು ; ಯುದ್ಧರಂಗದೊಳಿದಂ ಕಂಡ ಹಗೆಗಳು ನಿಲ್ಲರು. ಇದರ ಕೆಳಗೆ ಕವಿವ ನೆಳಲೊಳಗಾವನಿರ್ದನಾತಂಗೆ ತಾಂ ತವಿಲೆಡರು ಬಡತನಂ ರೋಗವಪಕೀರ್ತಿ ಪರಿಭವ ಭಯಂ ಹರೆವುದು; ಇದನರಿಂದರಿಂದು ಸತ್ತಿಗೆಯ ಕೊಡಬಹುದೆ ? '

ಹೀಗೆಯೇ ಬಹುವಾಗಿ ವಾದವಿವಾದಗಳು ನಡೆದುವು. ಆದರೆ ಹರಿಶ್ಚಂದ್ರನು ತನ್ನ ಶ್ವೇತಚ್ಛತ್ರವನ್ನು ಕೊಡಲೊಪ್ಪಲಿಲ್ಲ. ಅವಿವೇಕಕ್ಕೆ ಹೊರಟಿರುವವರಿಗೆ ಅಲ್ಲದ್ದಾವುದು ಸಲ್ಲದ್ದಾವುದು ? ಅವರು ' ಛತ್ರವಿಲ್ಲದಿದ್ದರೆ ಹೋಗಲಿ, ನಮ್ಮನ್ನು ಮದುವೆಮಾಡಿಕೊ ! ' ಎಂದು ' ಅಳವಳಿದು ಬಾಯ್ಬಿಟ್ಟು ಕೈಮುಗಿದು ' ಕೇಳಿಕೊಂಡರು.

ಹರಿಶ್ಚಂದ್ರ—' ಸೂರ್ಯಕುಲದ ರಾಯರ್ಗೆ ವಂಶದೊಳು ಕೀರ್ತಿಯೊಳು ಭುಜಬಲದೊಳೊರೆದೊರೆಯೆನಿಸಿ ಕನ್ನಿಕೆಯರಂ ಕೊಡುವ ಭೂಪರಿಲ್ಲಿಂಧುತನಕ ; ಹೊಲತಿಯರು ಬಂದಾವು ಸತಿಯರಾದಪ್ಪೆವೆಂಬುಲಿಹವೆಂಬುದು ಬಂದ ಕಾಲಗುಣವೋ ನಿಂದ ನೆಲದ ಗುಣವೋ ! '

ಗಾಯಕಿಯರು—' ಪಾವನ ಕ್ಷೀರಮಂ ಕೊಡುವ ಕೆಚ್ಚಲ ಮಾಂಸವಾವ ಲೇಸು ? ಮಧುವನೊಸೆದೀವ ಪೋಳಪಾವ ಲೇಸು ? ಅಧಿಕ ಕಸ್ತೂರಿಯಂ ಕೊಡುವ ಮೃಗನಾಭಿ ಪಾಪಾವ ಲೇಸು ? ದೇಹದಗೆ ಸಲ್ಲದೇ ? [illegible]

ಲಾಱವವನೀಶ? ಇಂತೆಮ್ಮ ರೂಪು ಜವ್ವನವಿರಲು ಕುಲದ ಮಾತೇಕೆ?'

ಹ—'ಅಕ್ಕಕ್ಕ; ಬಚ್ಚಲುದಕಂ ತಿಳಿದಡಾರ ಮಿಾಹಕ್ಕೆ ಯೋಗ್ಯಂ? ನಾಯ್ಗೆ ಹಾಲುಳ್ಳಡಾವನೂಟಕ್ಕೆ ಯೋಗ್ಯಂ?..................ಮಿಕ್ಕ ಹೊಲತಿಯರು ನೀವೆನೆ ನಿಮ್ಮ ಜವ್ವನದ ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪವೇತಕ್ಕೆ ಯೋಗ್ಯಂ? ಶಿವಶಿವಾ! ಈ ಮಾತು ತಾ ಹೊಲೆ!!' *

ಗಾ—' ಹಾಡನೊಲಿದಾಲಿಸಿದ ಕಿವಿಗೆ ಹೊಲೆಯಿಲ್ಲ, ಮಾತಾಡಿ ನುಡಿಸಿದ ಬಾಯ್ಗೆ ಹೊಲೆಯಿಲ್ಲ, ರೂಪ ನೆಱೆ ನೋಡಿದ ವಿಲೋಚನಕೆ ಹೊಲೆಯಿಲ್ಲ, ಮೆಯ್‌ಮುಡಿಗಳಿಂ ಸುಳಿವ ತಂಗಾಳಿಯಿಂ ತೀಡುವ ಸುಗಂಧಮಂ ವಾಸಿಸಿದ ನಾಸಿಕಕೆ ನಾಡೆ ಹೊಲೆಯಿಲ್ಲ, ಸೋಂಕಿಂಗೆ ಹೊಲೆಯುಂಟಾಯ್ತೆ! ಪಂಚೇಂದ್ರಿಯಂಗಳೊಳು ನಾಲ್ಕಧಮ, ಒಂದಧಿಕವೇ?'

ಹ—' ಕೆಂಡವನು ಮುಟ್ಟದಡೆ ಬೇವಂತೆ, ಕೇಳ್ದಡಂ ಕಂಡು ವಾಸಿಸಿದಡಂ ಬೆಂದವೇ? ಕಾಳುಗೆಡೆಯದೆ ಹೋಗಿ!

ಗಾ—' ಶಾಪದಿಂದೆಮಗಾದ ದುಷ್ಕುಲಂ ನಿನ್ನಯ ಸಂಗದಿಂ ಶುದ್ಧಮಪ್ಪುದೆಂಬಾಪೇಕ್ಷೆಯಿಂ ಬಂದೆವು.'

ಹ—' ನಿಮಗೋಸುಗೆನ್ನ ಕುಲಮಂ ಕೆಡಿಪೆನೆ?'

ಗಾ—' ಪಾಪಿಗಳ ಪಾಪಮಂ ತೊಳೆವ ಗಂಗೆಗೆ ಪಾಪಲೇಪವುಂಟಾಯ್ತೆ?'

ಹ—' ಕೊಡವಾಲ ಕೆಡಿಸುವಡಾಮ್ಲವೆನಿತಾಗಬೇಕು?'

ಗಾ—' ಮಾತಿಂಗೆ ಮಾತುಗೊಡಲರಿದು; ನಿನ್ನಯ ನುತಖ್ಯಾತಿಗಡಟಂಗೆ ಸುರುಚಿರಗುಣವ್ರಾತಕ್ಕೆ ಹರೆಯಕ್ಕೆ ಗರುವಿಕೆಗೆ ಮನಸಂದು ಮತಿಗೆಟ್ಟು ಮರುಳಾದೆವು; ನಿನ್ನಯ ಬೆನ್ನಬಿಡೆವು.'

* 'ಕುಲವಿಲ್ಲದ ರೂಪು ಎಲ್ಲಿದ್ದರೇನು? ಬಚ್ಚಲ ನೀರು ತಿಳಿದಲ್ಲಿ ಫಲವೇನು?'—ಬಸವೇಶ್ವರ ವಚನ.

ಹ—'ಬಳಿವಿಡಿದು ಬಂದು ಮಾಡುವುದೇನು ?'

ಪಾ—'ಎಳಸಿ ಮೆಚ್ಚಿಸಿ ಮರುಳ್ಗೊಳಿಸಿ ಮತ್ತೊಲ್ಲನವನಿಪನೆಂದು
ಮೊಱೆಯಿಡುತ್ತ ಇಳೆಯೊಳಗೆ ಸಾಱುತ್ತ ದೂಱುತ್ತ ಬಪ್ಪೆವು.'

ಇನ್ನು ಹರಿಶ್ಚಂದ್ರನಿಗೆ ತಡೆಯಲಾಗಲಿಲ್ಲ. ಅವನ ತಾಳ್ಮೆಯೂ ಹೋಯಿತು. ಹೆಂಗಸರೆಂದು ಹೇಸದೆ ಅವರನ್ನು ಚಮ್ಮಟಿಗೆಯಿಂದ ಹೊಯ್ದು ಓಡಿಸಿದನು.

ವಿಶ್ವಾಮಿತ್ರನು ಇದನ್ನು ತಿಳಿದು ತನ್ನ ಮನೋರಥವು ಕೈಗೂಡಿತೆಂದು ಮನಸ್ಸಿನಲ್ಲಿ ಉತ್ಸಾಹಗೊಳ್ಳುತ್ತ, ಹೊರಗೆ ಕೋಪವನ್ನು ತೋರಿಸುತ್ತ, ಬಂದು ಹರಿಶ್ಚಂದ್ರನು ತನ್ನ ತಪೋವನಕ್ಕೆ ಪ್ರವೇಶ ಮಾಡಿದ್ದು ಮೊದಲುಮಾಡಿಕೊಂಡು ಗಾಯಕಿಯರನ್ನು ಹೊಡೆದದ್ದರ ವರೆಗೆ ಅವನ ಮೇಲೆ ನಾನಾ ತಪ್ಪುಗಳನ್ನು ಹೊರಿಸಿ ಕೊನೆಗೆ ಅವರನ್ನು ಮದುವೆಯಾದರೆ ಎಲ್ಲಾ ನಿರೋಧವನ್ನೂ ಬಿಡುವೆನೆಂದನು. ಹರಿಶ್ಚಂದ್ರನು ಏನು ಹೇಳಿದರೂ ಅದಕ್ಕೆ ಒಪ್ಪದೆ 'ಎಡೆಬಿಡದೆ ಬೇಡಿ ಕಾಡುವಿರಾದರೆ ಸರ್ವ ರಾಜ್ಯವನ್ನಾದರೂ ಕೊಟ್ಟೇನು, ಇದಕ್ಕೆ ಒಪ್ಪಲಾರೆ' ಎಂದನು.

ವಿಶ್ವಾಮಿತ್ರನು ಆ ಮಾತನ್ನೇ ಹಿಡಿದುಕೊಂಡು ಅವನಿಂದ ರಾಜ್ಯವನ್ನು ಕಸಿದುಕೊಂಡನು. ತೊಟ್ಟ ಆಭರಣಗಳನ್ನೂ ಉಟ್ಟ ಬಟ್ಟೆಯನ್ನೂ ಸಹ ಬಿಡಲಿಲ್ಲ. ಉಟ್ಟ ಬಟ್ಟೆಯನ್ನು ಕೊಡುವುದು ಹೇಗೆಂದು ಹರಿಶ್ಚಂದ್ರನು ತಲೆವಾಗಿ ನಿಂತಿರಲು ವಿಶ್ವಾಮಿತ್ರನು 'ಅವನಿಪರು ಮರುಳರೆಂಬುದು ತಪ್ಪದು. ಇದಕ್ಕುಪಾಯವ ಕಾಣ್ಬುದರಿದೆ, ನಾ ತೋಱಿದಪೆ 'ಎಂದು 'ತನ್ನ ವನೊರ್ವನುಟ್ಟ ಹಣ್ಣಱುವೆ ಸೀರೆಯನೀಸಿಕೊಂಡು ನಾಲ್ಕಾಗಿ ಸೀಳಿಕೊಟ್ಟನು.' ಆದರೆ ಸುಲಿಗೆ ಇಷ್ಟಕ್ಕೇ ನಿಲ್ಲಲಿಲ್ಲ; ಹೇರನ್ನು ಒಪ್ಪಿಸಿದರೂ ಸುಂಕ ಕೇಳುವವನಂತೆ ವಿಶ್ವಾಮಿತ್ರನು ತನಗೆ ಮೊದಲು ಕೊಟ್ಟ ದಕ್ಷಿಣೆಯೆಲ್ಲಿ ಎಂದನು. ಅದನ್ನು ಸಂಪಾದಿಸಿ ಕೊಡುತ್ತೇನೆಂದು ಒಂದು ಗಡುವನ್ನು ಮಾಡಿಕೊಂಡು ಹರಿಶ್ಚಂದ್ರನು ರಾಜಧಾನಿಗೆ ಬಂದು ತನ್ನ ರಾಜ್ಯವನ್ನು ಕ್ರಮವಾಗಿ ಒಪ್ಪಿಸಿಕೊಟ್ಟು ಕಾಶಿಗೆ ಹೊರಡಲನುವಾದನು. ಅವನಲ್ಲಿ ಪಿತೃಪ್ರೀತಿಯಿದ್ದ ಪುರಜನರ

ಪರಿಜನರ ಮತ್ತು ಪ್ರಜೆಗಳ ಗೋಳು ಹೇಳತೀರದು. ವಿಶ್ವಾಮಿತ್ರನು ಆಗ ಮತ್ತೊಂದು ಸಾರಿ ' ಈ ಕಟಕ ಈ ಕೋಟಿ ಈ ಕರಿಗಳೀ ತುರುಗವೀ ರಥಗಳೀಪರಿಜನ ಈ ಕೋಶವೀ ಕಾಂತೆ ಈ ಕುವರನೀ ಮಂತ್ರಿ ಈ ಕಾಮಿನೀಜನಂ ಮಱುಗದಂತರಸಾಗಬೇಕಾದಡೆನ್ನ ಮಕ್ಕಳ ಮದುವೆಯಾಗು ' ಎಂದು ಹೇಳಿ ಚಪಲಗೊಳಿಸಿ ನೋಡಿದನು. ಆದರೆ ಹರಿಶ್ಚಂದ್ರನ ಮನಸ್ಸು ನಿರ್ಧರವಾಗಿಹೋಗಿತ್ತು. ಅದು ಈ ಯಾವ ಸುಖದುಃಖಕ್ಕೂ ಸಗ್ಗುವಂತಿರಲಿಲ್ಲ. ಅವನ ಈ ಧೈರ್ಯ ಸ್ಥೈರ್ಯ ನಿಷ್ಠೆ ಕ್ಷಮೆ ಶಾಂತಿ ದಾಂತಿಗಳನ್ನೂ, ವಿಶ್ವಾಮಿತ್ರನ ಕುಹಕ ಕಾಠಿಣ್ಯ ಕಿರುಕುಳ ಕುಟಿಲತೆಗಳನ್ನೂ ಕವಿ ಮನಕರಗುವಂತೆ ಚಿತ್ರಿಸಿದ್ದಾನೆ.

ಹರಿಶ್ಚಂದ್ರನ ವೈರಾಗ್ಯವು ಅವನ ಪ್ರಜೆಗಳಿಗಿರಲಿಲ್ಲ. ಅವರು ವಿಶ್ವಾಮಿತ್ರನನ್ನು ' ಪಾಪಿ, ನಿಷ್ಕರುಣ, ನಿರ್ದಯ, ಮೂರ್ಖ, ನೀಚ, ನೀರಸ, ನಿರ್ಗುಣ. . . . . ಎನ್ನೊಡಲೊಳಳ್ಳಿಱಿವುತಿಪ್ಪಳಲ ಬೇಗೆಯ ಬೆಂಕಿಯುರಿ ನಿನ್ನ ನಿಱಿಯದೇ ' ಎಂದು ಮುಂತಾಗಿ ಬಯ್ಯುತ್ತಿದ್ದರು. ಆದರೆ ಹರಿಶ್ಚಂದ್ರನು ' ನಿಮ್ಮನು ಜಱೆದು ಮಾಱುತ್ತರಂಗೊಟ್ಟು ಕೆಟ್ಟು ನುಡಿದು ನಿಂದೆಗೆಯ್ದನ್ಯಾಯ ಪಾಪಿ ಚಾಂಡಾಲ ನೆನ್ನಿಂದಧಮರಾರಯ್ಯ, ಸರ್ವಾಪರಾಧಿಯಾಂ, ತಂದೆ, ಕರುಣಂಗೆಡದಿರೆಂದು ಮುನಿಯಂ' ಬೇಡಿಕೊಳ್ಳುತ್ತಿದ್ದನು.

ಇಲ್ಲಿಗೆ ಹರಿಶ್ಚಂದ್ರನ ಗ್ರಹಚಾರದಲ್ಲಿ ಒಂದು ಘಟ್ಟ ಮುಗಿಯಿತು. ಆದರೆ ಮುಂದೆ ದಾನಕ್ಕಿಂತ ದಕ್ಷಿಣೆಯೇ ಕಷ್ಟವಾಯಿತು. ಸಾಲಗಾರನಿಗಿಂತ ನಕ್ಷತ್ರಕನೇ ಬಲವಾದನು. ವಿಶ್ವಾಮಿತ್ರನು ಕಣ್ಣೆದುರಿಗೆ ಇದ್ದಾಗ ಆದ ಹಿಂಸೆಗಿಂತ ಹಿಂದೆ ಇದ್ದಾಗ ಆದ ಹಿಂಸೆಯೇ ಘೋರವಾಯಿತು.

ನಕ್ಷತ್ರಕನು ಸ್ವಭಾವತಃ ' ಹುಸಿಯುಸೂಯಾನೀಚವೃತ್ತಿ ನಿರ್ದಾಕ್ಷಿಣ್ಯ ನಿಷ್ಕರುಣ ನೀತಿಗಳಲಿ ಹೆಸರುಳ್ಳ ಹಿರಿಯ.' ಸಾಲದುದಕ್ಕೆ ವಿಶ್ವಾಮಿತ್ರನು ಅವನಿಗೆ ' ಕೊಡುವೊಡವೆ ಬರಲಿ ಬಾರದೆ ಕೆಡಲಿ, ಕಾನನದ ನಡುವೆ ತಗಹಿನಲಿರಿಸಿ ಕೆಲವು ದಿನ ಉಪವಾಸಬಡಿಸಿರ್ದು ಕೆಲವುದಿನ ದೇಹವನುವಲ್ಲೆಂದು ನೆನವೊಡ್ಡಿ ಕೆಲವು ದಿವಸ ನಡೆವಾಗ

ದಾರಿತಪ್ಪಿಸಿ ತಿರುಪಿ ಕೆಲವುದಿನ ಪಡಿಯ ಬೇಯಕ್ಕಾಣೆಯಿಟ್ಟಿಂತು ಕೆಲವುದಿನ ಕೆಡಿಸಿ ನುಡಿದವಧಿಯಾಯ್ತೆಂಥು ಧರೆಯಱೆಯೆ ನೃಪನಂ ಹುಸಿಕನೆನಿಸು ' ಎಂದು ಹೇಳಿಕೊಟ್ಟನು. ಅವನ ಕಾಟದಲ್ಲಿ ಕುಸುಮ ಸುಕುಮಾರರಾದ ಹೆಂಡತಿ ಮಕ್ಕಳು ಕಾಡುದಾರಿಯಲ್ಲಿ ನಡೆಯಲಾರದೆ ಪಟ್ಟ ಸಂಕಟವೂ ಎಲ್ಲಿಯೋ ಹೋಯಿತು. ಚಂದ್ರ ಸೂರ್ಯರೂ ಮರುಗಿದರು ; ಆದರೆ ಕೌಶಿಕನು ಮರುಗಲಿಲ್ಲ. ಅವನ ಪ್ರೇರಣೆಯಿಂದ ಘೋರ ಕಾನನದಲ್ಲಿ ಕಾಳಗತ್ತಲೆ ಕವಿದು ಕಡಲಿಟ್ಟು ಮಡುಗಟ್ಟಿತು. ಹಾವು, ಚೇಳು, ಹುಲಿ, ಕರಡಿ, ಭೂತ, ಭೇತಾಳಗಳು ಸುತ್ತಿ ಮುತ್ತಿ ಬೊಬ್ಬಿಟ್ಟು ಝುಂಕಿಸಿದುವು. ದಾವಾಗ್ನಿ ಮುತ್ತಿಕೊಂಡಿತು. ಆದರೆ ' ಉತ್ತಮರ ಮುಂದಾವ ಶಕ್ತಿರಲಾಪುದು ? ' ಇದೆಲ್ಲವನ್ನೂ ಕಳೆದು ಗಂಗಾದರ್ಶನ ಮಾಡಿ ಹರಿಶ್ಚಂದ್ರನು ಕಾಶೀಕ್ಷೇತ್ರವನ್ನು ಸೇರಿದನು. ಕೈಕೊಂಡಿದ್ದ ಅವಧಿ ತೀರುತ್ತ ಬಂತು. ಆದರೆ ಸಂಪಾದನೆಗೆ ಮಾತ್ರ ಯಾವ ಮಾರ್ಗವೂ ಇರಲಿಲ್ಲ. ' ಭಿಕ್ಷೆ ಬೇಡುವುದು ಕ್ಷತ್ರಿಯ ಧರ್ಮಕ್ಕೆ ವಿರುದ್ಧ; ಒಂದುಪಕ್ಷ ನಾಚಿಕೆ ಬಿಟ್ಟು ಬೇಡಿದರೂ ಕೊಡುವ ದಾತನಿಲ್ಲ; ಕೃಷಿಯಿಂದ ಸಂಪಾದಿಸೋಣವೆಂದರೆ ಭೂಮಿ ಇಲ್ಲ, ಕಾಲವಿಲ್ಲ. ಇನ್ನೇನು ನನ್ನ ಸತ್ಯ ಇವೊತ್ತು ಸೂರೆ ಹೋಯ್ತು ' ಎಂದು ಸ್ವಲ್ಪ ದಿನದ ಕೆಳಗೆ ಚಕ್ರವರ್ತಿಯಾಗಿದ್ದವನು ದಿಕ್ಕು ತೋರದೆ ಮುಖವನ್ನು ಕೈಯಿಂದ ಮುಚ್ಚಿಕೊಂಡು ಕುಳಿತುಬಿಟ್ಟನು. ಆ ಸಮಯದಲ್ಲಿ, ಪತಿಯು ' ಚಿಂತಾಗ್ನಿಯುರಿಯ ಹೊಯ್ಲಿಂ ಕರಗಿಹೋಗದಿರನೆಂದು ' ಚಂದ್ರಮತಿಯೇ ಮುಂದೆ ಬಂದು, ಇರುವ ಎರಡು ಜಾವದಲ್ಲಿ ತಿದ್ದುವ ಬುದ್ಧಿಯನ್ನು ಕಾಣಬೇಕಲ್ಲದೆ ನೂಗುವಟ್ಟೆದೊರ್ಡೇನಹುದೆಂದು ಉತ್ಸಾಹಗೊಳಿಸಿ, ಏನು ಮಾಡೋಣವೆಂದು ಕೇಳಿದ ಪತಿಪ್ರಶ್ನೆಗೆ ತನ್ನನ್ನೂ ಮಗನನ್ನೂ ಮಾರಿ ಸಾಲದ ಹೊರೆಯನ್ನು ಸ್ವಲ್ಪ ತೀರಿಸಿಕೊಂಡು ಮಿಕ್ಕುದಕ್ಕೆ ಮತ್ತೇನಾದರೂ ಉಪಾಯವನ್ನು ಮಾಡಬೇಕೆಂದು ಸಲಹೆ ಕೊಟ್ಟಳು. ಹರಿಶ್ಚಂದ್ರನು ಇದಕ್ಕೆ ಸುಮ್ಮನೆ ಒಪ್ಪಿಯಾನೇ ? ಆದರೆ ಚಂದ್ರಮತಿ ಬಿಡಲಿಲ್ಲ. ' ಎಲೆ ಮರುಳೆ, ಸರ್ವಕ್ಕೆ ಮೊದಲು ಸತಿ ಸುತರು ತನ್ನ ಒಡಲು ಕಡೆ. . . ' ಎಂದು ವಾದಿಸಿದಳು. ಹರಿಶ್ಚಂದ್ರನು

ವಿಧಿಯಿಲ್ಲದೆ ಒಪ್ಪಿ, ಹೆಂಡತಿ ಮಕ್ಕಳ ತಲೆಯ ಮೇಲೆ ಹುಲ್ಲುಕಡ್ಡಿಯನ್ನಿಟ್ಟು ಅವರನ್ನು ಮಾರುತ್ತೇನೆಂದು ಸಾರುತ್ತ ಬಂದನು. ಇವರನ್ನು ಕೊಳ್ಳುವವರು ಯಾರು ಬರಬೇಕು? ಪೀಡೆಯನ್ನು ತಂದೊಡ್ಡಿದ ವಿಶ್ವಾಮಿತ್ರನೇ ಅದರ ನಿವಾರಣೆಗೂ ಬರಬೇಕಾಯಿತು. ಅವನ ಅಜ್ಞೆಯಿಂದ ಅಗ್ನಿಯು ವಿಪ್ರನಾಗಿ ಬಂದು ಅವರಿಬ್ಬರನ್ನೂ ಕೊಂಡುಕೊಂಡನು. ನೆಟ್ಟನೆ ಕೊಂಡುಕೊಂಡುಬಿಟ್ಟನೇ? 'ಹುಡುಗ ಚಿಕ್ಕವನು, ಈಕೆ ಮುದುಕಿ; ಇವರನ್ನೇನು ಮಾಡಿಕೊಳ್ಳಲಿ?' ಎಂದು ಚೌಕಾಶಿ ಮಾಡಿದನು. 'ಬೆಲೆ ಹೇಳು; ನನಗೆ ಸರಿಹೋದರೆ ಇನ್ನೆಂಟುದಿನಕ್ಕೆ ಕೊಡುತ್ತೇನೆ' ಎಂದನು. ಕೊನೆಗೆ ಅಂದೇ ಹಣಕೊಟ್ಟು ಕೊಂಡು ಹರಿಶ್ಚಂದ್ರನೆದುರಿಗೇ ಅವರನ್ನು 'ಕೆಡೆಯೊದೆದು ನೂಕಿ ನಿಜಗೇಹಕ್ಕೆ ಜಱೆವುತ್ತ ಕೊಂಡೊಯ್ದನು.' ಯುದ್ಧಕ್ಕೆ ಬಂದರೆ 'ಲೋಕದರಸುಗಳ ಸಪ್ತಾಂಗಮಂ ಕೊಂಬ' ಹರಿಶ್ಚಂದ್ರನು 'ಬಡಮುನಿಯ ನುಡಿಯ ತೊಡಕಿನ ಬೆಡಗಿನಿಂದ' ಸೋತು ರಾಜ್ಯವನ್ನೂ ಹೆಂಡತಿ ಮಕ್ಕಳನ್ನೂ ಕಳೆದುಕೊಂಡನು. ಆದರೂ ಋಣ ಹರಿಯಲಿಲ್ಲ. ಅವರನ್ನು ಮಾರಿ ಸಂಪಾದಿಸಿದ್ದು 'ಬತ್ತಾಯ'ಕ್ಕೆ ಸರಿಹೋಯಿತು. ಇನ್ನು ಉಳಿದವನು ತಾನೊಬ್ಬನು; ತನ್ನನ್ನೂ ಮಾರಿಕೊಳ್ಳಲನುವಾದನು. ತನ್ನ ಮಾತಿಗೆ ತಾನೇ ಕಟ್ಟುಬಿದ್ದು 'ಕೌಶಿಕಮುನೀಶ್ವರ ಮೊದಲನಾಮಿಕರೆ ಕಡೆ ಸಮಸ್ತರ ಮನಕ್ಕೆ ಸತ್ಯನೆನಿಸುವೆನೆಂದು' ವೀರಬಾಹುವಿಗೆ ತನ್ನನ್ನು ಮಾರಿಕೊಂಡು ಅವಧಿಗೆ ಇನ್ನೆರಡುಗಳಿಗೆ ಇರುವ ಹಾಗೇ ಋಣಮುಕ್ತನಾದನು. 'ಹೇಳಿದ್ದನ್ನು ಮಾಡುತ್ತೇನೆಂದು' ಒಪ್ಪಿಕೊಂಡಿದ್ದುದರಿಂದ ವೀರಬಾಹುವಿನ ಪಾದಸೇವೆ ಮಾಡಿ, ಅವನಿಂದ ಸಣ್ಣ ಮಾತುಗಳನ್ನು ಕೇಳಿ, ರಾಜಬೀದಿಯಲ್ಲಿ 'ಹೆಸರಹೇಳುತ್ತ ಮೆಯ್ಯುಗ್ಗಡಿಹ ತೋಱಿಸುತ ಪುರದೊಳಗೆಯ್ದಿ ಜನವಱಿಯೆ ಹಱೆಯ ಮೊಳಗಿಸುತ' ಸುಡುಗಾಡಿಗೆ ಹೋದನು. ಅಲ್ಲಿ 'ಹೆಣನ ತಲೆಯಕ್ಕಿ, ನೆಲದೆಱೆಯು ಹಾಗ, ಶವದುಡಿಗೆ' ಇವುಗಳನ್ನು ತೆಗೆದುಕೊಳ್ಳುವುದೇ ಇವನ ಕೆಲಸ ಕಾರ್ಯ! ಆಡಿದ ಮಾತು ಹೋಗುವುದೆಂದು ಇದೊಂದಕ್ಕೂ ಅವನು ಹಿಂದೆಗೆಯಲಿಲ್ಲ; ಸಂಕೋಚಪಟ್ಟುಕೊಳ್ಳಲಿಲ್ಲ. ಹರಿಶ್ಚಂದ್ರನು ತನ್ನ

ಕೈಮಾರಿದನೆಂದು ವಿಶ್ವಾಮಿತ್ರನು ಯಮನನ್ನು ವೀರಬಾಹುವಾಗು ವಂತೆ ಹೇಳಿಕಳುಹಿಸಿ ಅವನ ಜಾತ್ಯಭಿಮಾನ ಆತ್ಮಗೌರವಗಳನ್ನು ಅಲ್ಲಾಡಿಸಿ ನೋಡಿದನು. ಆದರೆ ಸತ್ಯವೇ ಪರಮಧರ್ಮವೆಂದಿದ್ದ ಹರಿಶ್ಚಂದ್ರನು ಆ ಪರಮಧರ್ಮಕ್ಕೆ ಇತರ ಧರ್ಮಗಳನ್ನು ಶರಣು ಗೊಳಿಸಿ ಜಯಶೀಲನಾಗಿ 'ಸತ್ಯಸಂಪನ್ನ'ನೆನಿಸಿದನು.

ಇತ್ತಲಾಗಿ ಚಂದ್ರಮತಿಯ ಗ್ರಹಚಾರವು ಕ್ರೂರವಾಯಿತು.

ಒಡೆಯನತಿಕೋಪಿ ಹೆಂಡತಿ ಮಹಾಮೂರ್ಖೆ ಮಗ
ಕಡುಧೂರ್ತ ಸೊಸೆಯಾದಡಧಿಕನಿಷ್ಠುರೆ ಮನೆಯ
ನಡೆವವರು ದುರ್ಜನರು ನೆರೆಮನೆಯವರು ಮಿಥ್ಯಾವಾದಿಗಳು ಪಶುಗಳಗಡು!
ಅಡಿಗಡಿಗೆ ಕೋಪಿಸುವ ಸಾಯೆ ಸದೆಬಡಿವ ಕಾ
ಳ್ಗಿಡಿವ ಕರಕರಿಪ ಸೆಣಸುವ ತಪ್ಪ ಸಾಧಿಸುವ
ಕೆಡೆಯೊದೆವ ಮಾರಿಗಾಣಿವೆ ಸತ್ತು ಹುಟ್ಟುತಿಹರವನಿಪನ ಸತಿಪುತ್ರರು ‖ ೮-೨

ಆಕೆಯು ಇಂಥವರ ಮಧ್ಯದಲ್ಲಿದ್ದುಕೊಂಡು, ಭತ್ತ ಕುಟ್ಟಿ, ನೀರು ಹೊತ್ತು, ಹಾಕಿದ್ದನ್ನು ತಿಂದುಕೊಂಡಿರಬೇಕಾಗಿತ್ತು. ಇಷ್ಟು ಸಾಲ ದೆಂದು ಒಂದು ದಿನ ರೋಹಿತಾಶ್ವನು ಹುಲ್ಲು ಹುಳ್ಳಿಗಳನ್ನು ತರಲು ಕಾಡಿಗೆ ಹೋಗಿದ್ದಾಗ, ಅಲ್ಲಿ ಒಂದು ಹುತ್ತದ ಮೇಲೆ ಹುಲುಸಾಗಿ ಬೆಳೆದಿದ್ದ ಹುಲ್ಲನ್ನು ನೋಡಿ 'ಮನವುಬ್ಬಿ ನಾನಿದನೆಲ್ಲಮಂ ಗಳಗಳನೆ ಕೊಯ್ದು ಕೊಂಡೊಯ್ದಿತ್ತಡೆಮ್ಮೊಡೆಯ ಮುಳಿಯದಿಹನೆಂಬಾಸೆಯಿಂ' (ಪಾಪ! ಆ ಹುಡುಗನಿಗೂ ಒಡೆಯನ ಕಾಟ! ಅವನ ಕೋಪದಿಂದ ಪಾರಾಗಬೇಕೆಂಬ ಪ್ರಯತ್ನ!) ಹೋಗಿ, ಹಾವು ಕಚ್ಚಿ ಸತ್ತುಹೋದನು. ಪತಿಯು ಸತ್ಯವೇ ಕಾಪಾಡುವುದೆಂದು ಇದ್ದ ಸತಿಗೆ ಪುತ್ರಶೋಕ ಬೇರೆ ಒದಗಿತು. 'ಅವಳ ರನ್ನಕನ್ನಡಿ' ಒಡೆದುಹೋಯಿತು. ಆ ವರ್ತ ಮಾನ ತಿಳಿದಾಗ ಅರ್ಧರಾತ್ರಿಯ ಸಮಯ; ನೀನೇ ಎನ್ನುವರಿಲ್ಲ. ಆಗ ಅವಳು ಯಜಮಾನನ ಕಾಲಮೇಲೆ ಬಿದ್ದು ತನ್ನ ಮಗ ಹಾವು ಕಚ್ಚಿ ಸತ್ತನೆಂದು ಹೇಳಲು ಅವನು 'ಲೇಸಾಯ್ತು; ಮಡಿದರೆ ಮಡಿದಂ' ಎಂದುಬಿಟ್ಟನು.

ಚಂದ್ರಮತಿ—'ಬಂಟರನು ಕೊಟ್ಟಟಿಸಿಕೈ ತಂದೆ!'

ಯಜಮಾನ—‘ ನಡುವಿರುಳು ಬಂಟರುಂಟೇ? ನಿದ್ದೆಗೈಯಬೇಕೇಳು
ಕಾಡದಿರು.’

ಚಂದ್ರ—‘ ನರಿಗಳೆಳೆಯದ ಮುನ್ನ ದಹಿಸಬೇಡವೆ ತಂದೆ? ಕರುಣಿಸು’

ಯಜ—ದುರ್ಮರಣವಟ್ಟ ಶೂದ್ರನನು ಸಂಸ್ಕರಿಸುವವರಾವಲ್ಲ.’

ಚಂದ್ರ—‘ ಆನಾದಡಂ ಹೋಗಿ ಕಂಡು ಮಗನ ಉರಿಗಿತ್ತು ಬಪ್ಪೆನೇ?’

ಯಜ—‘ ಕೆಲಸಮಂ ಬಿಟ್ಟು ಹರಿಯದಿರ್ದದನ್ನೈದೆ ಗೆಯ್ದು ಹೋಗು!’

ಚಕ್ರವರ್ತಿನಿಯಾಗಿದ್ದವಳಿಗೆ ಎಂಥ ಗತಿ! ತನ್ನ ಮಗನ ಶವವನ್ನು ಒಪ್ಪಮಾಡುವುದಕ್ಕೂ ಸ್ವಾತಂತ್ರ್ಯವಿಲ್ಲ! ತನ್ನ ಕಷ್ಟಕಾಲದಲ್ಲಿ ಏಕಾವಲಂಬನವಾಗಿದ್ದ ಪ್ರಿಯಪುತ್ರನನ್ನು ಕಳೆದುಕೊಂಡು ಇರುವುದು ಹೇಗೆ? ಆಗಲೂ, ತನ್ನ ಚಿಂತೆಗಿಂತ ಹೆಚ್ಚಾಗಿ, ಹರಿಶ್ಚಂದ್ರನ ಚಿಂತೆ.

‘ಅತಿಲಜ್ಜೆಗೆಟ್ಟೆನ್ನರಾಳಾಗಿ ದುಡಿದು ಧಾ
ವತಿಗೊಂಡು ಧನವನಾರ್ಜಿಸಿ ಹರಿಶ್ಚಂದ್ರ ಭೂ
ಪತಿ ನಮ್ಮ ಬಿಡಿಸುವಾರ್ತದ ಮೋಹದಿಂ ಹಸಿವು ನಿದ್ದೆಯಾ
ತೊಱೆದು ಬಂದು |
ಸುತನ ಕರೆಯಂದಡೇನೆಂಬೆನಾವುದ ತೋಱಿ
ಪತಿಯ ಮುಳಿಸಂಕವನು ಮಱೆಯಿಸುವೆನು . . .

ಎಂಬ ಕೊರಗು. ಕೊನೆಗೆ ತಾನು ಎತ್ತಿ ಆಡಿಸಿದ ಭುಜದಮೇಲೆ ಹೆಣವನ್ನು ಹಾಕಿಕೊಂಡು, ಪುತ್ರಶೋಕಗ್ರಹಾವಿಷ್ಟಳಾಗಿ ದಾರಿಯ ಕಲ್ಲುಮುಳ್ಳುಗಳ ಮೇಲೂ ಜ್ಞಾನವಿಲ್ಲದೆ ಶ್ಮಶಾನಕ್ಕೆ ಬಂದಳು. ಹರಿಶ್ಚಂದ್ರನೂ ಸತ್ತ ಮಗನನ್ನು ನೋಡಿ ಬಹುವಾಗಿ ಶೋಕಿಸಿದನು. ಮಗ ಸತ್ತನೆಂದು ದುಃಖವಲ್ಲ; ‘ ಅರಿರಾಯರೊಳು ಕಾದಿ ಮಡಿದಾತನಲ್ಲ. . . ಬಡ ಹಾವು ಕಚ್ಚಿ ಮುನಿವರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವರೇ! . . . . ’ ಎಂದು. ತಾಯಿತಂದೆಗಳ ಗೋಳಾಟದಲ್ಲಿ ಬೆಳಗಾಗುತ್ತ ಬರಲು ಚಂದ್ರಮತಿಯು ಅದನ್ನು ತಿಳಿಸಿ ಮುಂದೇನು ಗತಿಯೆಂದು ಕೇಳಿದಳು. ಅವನು ‘ ತೆಱೆಯನಿಕ್ಕದೆ ಸುಡಲ್ಬಾರದು. ಉಳ್ಳೊಡೆ ಸುಡಲ್ಬಬಹುದು; ಇಲ್ಲದೊಡೆ ನಿನ್ನೊಡೆಯನಂ ಬೇಡಿ ತಾ; ಕಾಣದಿರೆ ಸುಡಲ್ ಬೇಡ ’ ಎಂದು ಖಂಡಿತವಾಗಿ ಹೇಳಿಬಿಟ್ಟನು. ಅದರಂತೆ

ಅವಳು ಊರಿಗೆ ಹಿಂದಿರುಗಿ ಬರುತ್ತಿರಲು ದಾರಿಯಲ್ಲಿ ಯಾರೋ ಘಾತುಕರು ಕಾಶೀರಾಜನ ಕುಮಾರನನ್ನು ಕೊಲ್ಲುತ್ತಿದ್ದರು. ಆ ಹುಡುಗನ ಕಿರಿಚಲನ್ನು ಕೇಳಿ ತನ್ನ ಮಗನದೆಂದು ಭ್ರಾಂತಿಪಟ್ಟು ಅಲ್ಲಿಗೆ ಹೋಗಲು ಇವಳೇ ಹತ್ಯಾಕಾರಿ ಎಂಬ ದೂರು ಹೊತ್ತು ಶಿಕ್ಷೆ ಪಡೆಯಬೇಕಾಯಿತು. ಈ ಅವಸ್ಥೆಯಲ್ಲಿ ನಿಜ ಹೇಳಿ ಬದುಕಿರಲು ಪ್ರಯತ್ನಪಡುವುದಕ್ಕಿಂತ ಸುಳ್ಳು ಹೇಳಿ ಅಪವಾದ ಹೊತ್ತು ಸಾಯುವುದೇ ಮೇಲೆಂದು, ಅವಳು ತಾನೇ ಕೊಲೆಮಾಡಿದೆನೆಂದಳು. ಅವಳನ್ನು ಸಂಹರಿಸುವ ಭಾರವು ವೀರಬಾಹುವಿನಿಂದ ಅವನ ಸೇವಕನಾದ ಹರಿಶ್ಚಂದ್ರನಿಗೆ ಬಂತು. ಅಪರಾಧಮಾಡಿ ತಪ್ಪಿಸಿಕೊಂಡವರುಂಟು; ಅಪರಾಧಕ್ಕೆ ಶಿಕ್ಷೆಯಾದವರುಂಟು; ಆದರೆ ಯಾವ ಅಪರಾಧವೂ ಇಲ್ಲದೆ ಧರ್ಮಮೂರ್ತಿಗಳಾಗಿದ್ದ ಇಂಥ ಗಂಡ ಹೆಂಡರಿಗೆ ಹೀಗೆ ಕಷ್ಟಪರಂಪರೆಗಳು ಬಂದು, ಅವು ಇಷ್ಟು ಘೋರರೂಪಿನಲ್ಲಿ ಪರಿಣಾಮಗೊಳ್ಳುವ ಕಥೆಯು ಪ್ರಪಂಚದ ಮತ್ತಾವ ಸಾಹಿತ್ಯದಲ್ಲಿಯೂ ಇರಲಾರದು! ಚಂದ್ರಮತಿಯು 'ಕಲಿ ಹರಿಶ್ಚಂದ್ರರಾಯಂ ಸತ್ಯವೆರಸಿ ಬಾಳಲಿ, ಮಗಂ ಮುಕ್ತನಾಗಲಿ; ರಾಜ್ಯದೊಡೆಯ ವಿಶ್ವಾಮಿತ್ರ ನಿತ್ಯನಾಗಲಿ, ಹರಕೆ, ಹೊಡೆಯೆಂದಳು.' ಹರಿಶ್ಚಂದ್ರನು 'ಹರಕೆಯಂ ಕೇಳಿ ಹವ್ವನೆ ಹಾರಿ . . . ಪತಿಯಾಜ್ಞೆಯುಳಿದಡೆ ಸಾಕೆನುತ' ಸತಿಯ ತಲೆಯ ಮೇಲೆ ಕತ್ತಿಯನ್ನು ಇಳಿಸಿದನು. ಆದರೆ ಆಕೆಯ ಕೊರಳ ಪ್ರದೇಶದಿಂದ ವಿಶ್ವನಾಥನು ಮೈದೋರಿ ಹರಿಶ್ಚಂದ್ರನನ್ನು ಅಪ್ಪಿಕೊಂಡು,

ಘನಸತ್ಯವೇ ಜೀವವೆಂದಿರ್ದ ನಿನ್ನ ಹೊಲೆ
ಯನ ಸೇವೆ ಗುರುಸೇವೆ ಹೊತ್ತ ಹೊಲೆವೇಷ ಪಾ
ವನ ಕೃಷ್ಣವೇಷ ಸುಡುಗಾಡ ರಕ್ಷಿಸುವಿರವು ತಾ ಯಜ್ಞರಕ್ಷೆಯಿರವು!
ಅನುದಿನಂ ಭುಂಜಿಸಿದ ಶವದ ಶಿರದಕ್ಕಿಯ
ಲ್ಲನಪೇಯ ಚಾಂದ್ರಾಯಣಂ ಪುತ್ರನಳಿವು ಜ
ಸ್ವಕಾಯದಳಿವಂಗನಾಹನನ ಮಾಯಾಹನನವಂಜಬೇಡ . . . !

ಎಂದು ಸಂತೈಸಿದನು. ವಸಿಷ್ಠ ವಿಶ್ವಾಮಿತ್ರರೂ ಬಂದರು. ವಿಶ್ವಾಮಿತ್ರನು

ತಾನು ಎಷ್ಟೋ ವರ್ಷ ಮಾಡಿದ ತಪಸ್ಸಿನಲ್ಲಿ ಅರ್ಧವನ್ನು ಹರಿಶ್ಚಂದ್ರ ನಿಗಾಗಿ ಧಾರೆಯೆರೆದು, ಅವನ ಸತಿಸುತರನ್ನು ಜೊತೆಗೊಳಿಸಿ ಅಯೋಧ್ಯೆ ಯಲ್ಲಿ ಪಟ್ಟಕಟ್ಟಿದನು. ಹೀಗೆ ಹರಿಶ್ಚಂದ್ರನು "ಹರನೆಂಬುದೇ ಸತ್ಯ; ಸತ್ಯವೆಂಬುದು ಹರನು, ಎರಡಿಲ್ಲ" ಎಂಬ ಶ್ರುತಿ ತತ್ವವನ್ನು ಸಾರಿದನು.

## ಹರಿಶ್ಚಂದ್ರೋಪಾಖ್ಯಾನದ ಇತಿಹಾಸ

ಹರಿಶ್ಚಂದ್ರೋಪಾಖ್ಯಾನವು ವೇದ ಪುರಾಣ ಸಾಹಿತ್ಯಗಳಲ್ಲಿ ಪ್ರಸಿದ್ಧವಾದ ಪುರಾತನ ಕಥೆಯಾಗಿದೆ. ಆದರೆ ವೈದಿಕ ಗ್ರಂಥಗಳಲ್ಲಿ ಮುಖ್ಯವಾಗಿ ಈ ಕಥೆಯ ಯಾಜ್ಞಿಕಾಂಶವೂ ಪೌರಾಣಿಕ ಗ್ರಂಥಗಳಲ್ಲಿ ಐತಿಹಾಸಿಕಾಂಶವೂ ಸಾಹಿತ್ಯ ಗ್ರಂಥಗಳಲ್ಲಿ ಧಾರ್ಮಿಕಾಂಶವೂ ಪ್ರತಿ ಪಾದಿತವಾಗಿವೆಯೆಂದು ಹೇಳಬಹುದು. ಇವೆಲ್ಲವೂ ಆಮೂಲಾಗ್ರ ವಾಗಿ, ಅಖಂಡವಾಗಿ, ವಿಸ್ತಾರವಾಗಿ ಯಾವ ಒಂದು ಕಡೆಯಲ್ಲಿಯೂ ದೊರೆಯುವುದಿಲ್ಲ.

ಹರಿಶ್ಚಂದ್ರನ ವೃತ್ತಾಂತ ಬರುವ ವೈದಿಕ ಗ್ರಂಥಗಳು ಮುಖ್ಯ ವಾಗಿ ಮೂರು :—

೧. ಐತರೇಯ ಬ್ರಾಹ್ಮಣ (ಪಂಚಿಕಾ ೭, ಅಧ್ಯಾಯ ೩.)
೨. ಸಾಂಖ್ಯಾಯನ ಶ್ರೌತಸೂತ್ರ (೧೫ ; ೧೭–೨೫.)
೩. ವೇದಾರ್ಥ ದೀಪಿಕೆ (ಋಗ್ವೇದ ಭಾಗ, ೧–೨೪.)

ಇವು ಪುರಾಣಗಳಿಗಿಂತಲೂ ಪ್ರಾಚೀನಗಳು. ಆದರೂ ಇವು ಗಳಲ್ಲಿ ಬರುವ ಹರಿಶ್ಚಂದ್ರ ಕಥಾಂಶಗಳಿಗಿಂತ ಹಿಂದಿನ ವೃತ್ತಾಂತವನ್ನು ಎಂದರೆ ಹರಿಶ್ಚಂದ್ರನ ತಂದೆತಾತಂದಿರ ಕಥೆಯನ್ನೂ ವಸಿಷ್ಠ ವಿಶ್ವಾ ಮಿತ್ರರಿಗೆ ಬೆಳೆದುಬಂದ ವೈಮನಸ್ಯವನ್ನೂ ಪುರಾಣಗಳೇ ತಿಳಿಸುವುದ ರಿಂದ ಅವುಗಳ ವಿಷಯವನ್ನು ಮೊದಲು ತೆಗೆದುಕೊಂಡಿದೆ.

ಪುರಾಣಗಳನ್ನು ಮುಖ್ಯವಾಗಿ ಪ್ರಾಚೀನ ಅರ್ವಾಚೀನ ಎಂಬು

ಎರಡು ಭಾಗ ಮಾಡಬಹುದು.* ಪ್ರಾಚೀನವಾದ ವಾಯು ಬ್ರಹ್ಮಾಂಡ ಬ್ರಹ್ಮಪುರಾಣ ಹರಿವಂಶಗಳಲ್ಲಿ ಈ ಕಥೆಯು ವಿಸ್ತಾರವಾಗಿಯೂ, ಲಿಂಗ ಶಿವಪುರಾಣಗಳಲ್ಲಿ ಸಂಕ್ಷಿಪ್ತವಾಗಿಯೂ ಬಂದಿದೆ. ಇವುಗಳೆಲ್ಲಕ್ಕೂ ಸಮ್ಮತವಾದ ಪಾಠದಿಂದ ಫಲಿಸುವ ಕಥೆಯನ್ನು ಹೀಗೆ ಹೇಳಬಹುದು (ಅನುಬಂಧ Iನ್ನು ನೋಡಿ):—

ಅಯೋಧ್ಯೆಯ ರಾಜನಾದ ತ್ರಯ್ಯಾರುಣನಿಗೆ ಸತ್ಯವ್ರತನೆಂಬ ಮಗನಿದ್ದನು. ಅವನು, ಅಯೋಧ್ಯಾಪುರವಾಸಿಯೊಬ್ಬನ ಮನೆಯಲ್ಲಿ ಮದುವೆ ನಡೆಯುತ್ತಿರಲು, ಕಾಮಮೋಹಗಳಿಂದ ಪ್ರೇರಿತನಾಗಿ ಆ ಮದುವೆಯ ಹುಡುಗಿಯನ್ನು ಎತ್ತಿಕೊಂಡು ಹೊರಟುಹೋದನು. ತಂದೆಗೆ ಸಿಟ್ಟು ಬಂದು ಈ ಅಧರ್ಮಾಚರಣೆ ಮಾಡಿದ ಮಗನನ್ನು ತ್ಯಾಗಮಾಡಿ, ಊರ ಹೊರಗೆ ಚಂಡಾಲರ ಜೊತೆಯಲ್ಲಿರುವಂತೆ ನೇಮಿಸಿದನು. ವಸಿಷ್ಠನು ಇದಕ್ಕೆ ಅಡ್ಡಿಮಾಡಲಿಲ್ಲ. ಇದಾದ ಕೆಲವು ಕಾಲದ ಮೇಲೆ ತ್ರಯ್ಯಾರುಣನು ಕಾಡಿಗೆ ಹೊರಟುಹೋದನು. ಅವನ ದೇಶದಲ್ಲಿ ಆ ಅಧರ್ಮದ ಫಲವಾಗಿ ದ್ವಾದಶ ವಾರ್ಷಿಕ ಕ್ಷಾಮವು ಪ್ರಾಪ್ತವಾಯಿತು.

ಇತ್ತ ವಿಶ್ವಾಮಿತ್ರನು ತಪಶ್ಚರ್ಯೆಗಾಗಿ ಹೊರಟು ತನ್ನ ಹೆಂಡತಿ ಮಕ್ಕಳನ್ನು ಅಯೋಧ್ಯೆಯ ಪ್ರಾಂತದಲ್ಲಿ ಬಿಟ್ಟಿದ್ದನು.† ಕ್ಷಾಮಕಾಲ

* ಬ್ರಹ್ಮಾಂಡ ವಾಯು ಮತ್ಸ್ಯಪುರಾಣಗಳು ಪ್ರಾಚೀನತಮಗಳು; ಬ್ರಹ್ಮವೈವರ್ತ ಶೈವ ವಾಮನ ಭಾಗವತ ಪುರಾಣಗಳು ಈಚಿನವು; ಮಿಕ್ಕವು ಈ ಎರಡು ಗುಂಪುಗಳಿಗೂ ಮಧ್ಯೆ ಬರುತ್ತವೆ. ಇವುಗಳಲ್ಲಿ ಮಾರ್ಕಂಡೇಯ ಬ್ರಹ್ಮಪುರಾಣಗಳು ಮೊದಲು ಬರುತ್ತವೆಂದು ಹೇಳಬಹುದು. ಪದ್ಮಪುರಾಣದ ಬಹುಭಾಗವು ಅರ್ವಾಚೀನ—ಎನ್‌ಸೈಕ್ಲೋಪೀಡಿಯ ಆಫ್ ರಿಲಿಜನ್ ಅಂಡ್ ಎಥಿಕ್ಸ್, ಸಂಪುಟ ೧೦, ಪುಟ ೪೫೫.

† ಈತನು ಕನ್ಯಾಕುಬ್ಜದ ರಾಜನಾದ ಗಾಧಿಯ ಮಗ. ಗಾಧಿಯ ತಂದೆ ಕುಶಿಕ, ತಾಯಿ ಪುರುಕುತ್ಸಿ—ಅಯೋಧ್ಯೆಯ ದೊರೆಯಾಗಿದ್ದ ಪುರುಕುತ್ಸರಾಜನ ಮನೆತನದಲ್ಲಿ ಹುಟ್ಟಿದವಳು. ವಿಶ್ವಾಮಿತ್ರನಿಗೆ ಮೊದಲಿದ್ದ ಹೆಸರು ವಿಶ್ವರಥ. ತಪಶ್ಚರ್ಯೆಯಿಂದ ಬ್ರಹ್ಮರ್ಷಿಯಾಗಿ ಆತನು ವಿಶ್ವಾಮಿತ್ರನೆಂಬ ಹೆಸರನ್ನು ಪಡೆದನು.

ದಲ್ಲಿ ಹೊಟ್ಟೆಗಿಲ್ಲದೆ ವಿಶ್ವಾಮಿತ್ರನ ಹೆಂಡತಿಯು ತನ್ನ ಮಗ ಗಾಲವನನ್ನು ಮಾರುವುದಕ್ಕೆ ತಂದಳು; ಮಿಕ್ಕವರಾದರೂ ಜೀವ ಹಿಡಿದುಕೊಂಡಿರಲಿ ಎಂಬುದು ಅವಳ ಆಸೆ. ಅದನ್ನು ಕಂಡು ಸತ್ಯವ್ರತನು ಅನುಕಂಪೆಯಿಂದಲೂ, ವಿಶ್ವಾಮಿತ್ರನನ್ನು ಸಂತೋಷಪಡಿಸುವುದಕ್ಕೋಸ್ಕರವೂ, ಗಾಲವನನ್ನು ಕರೆದುಕೊಂಡು ಬಂದು ವಿಶ್ವಾಮಿತ್ರನ ಸಂಸಾರವನ್ನು ತಾನೇ ರಕ್ಷಣ ಮಾಡುತ್ತಿದ್ದನು. ಮೃಗಗಳನ್ನು ಬೇಟೆಯಾಡಿ ತಂದು ಎಲ್ಲರಿಗೂ ಹೊಟ್ಟೆಗೆ ಹಾಕುತ್ತ ತಂದೆಯ ಆಜ್ಞೆಯಂತೆ ಹನ್ನೆರಡು ವರ್ಷ ದೀಕ್ಷೆಯಲ್ಲಿದ್ದನು.

ಅಯೋಧ್ಯೆಯನ್ನೂ ದೇಶಕೋಶ ಅಂತಃಪುರಗಳನ್ನೂ ವಸಿಷ್ಠನೇ ಕಾಪಾಡುತ್ತಿದ್ದನು. ಆದರೆ ಸತ್ಯವ್ರತನಿಗೆ ದಿನದಿನಕ್ಕೆ ವಸಿಷ್ಠನ ಮೇಲೆ ಕೋಪ ಹೆಚ್ಚಾಯಿತು. 'ಸಪ್ತಪದಿಯಾಗುವುದಕ್ಕಿಂತ ಮುಂಚೆ ಪಾಣಿಗ್ರಹಣ ಹೇಗೆ ಸಿದ್ಧವಾಗುತ್ತದೆ? ಈ ಧರ್ಮಸೂಕ್ಷ್ಮವನ್ನು ವಸಿಷ್ಠನಿಗೆ ಹೇಳಿಕೊಡಬೇಕೇ? ಅವನು ಮನಸ್ಸುಮಾಡಿದ್ದರೆ ನನ್ನನ್ನು ಬಿಡಿಸಿಕೊಳ್ಳಬಹುದಾಗಿತ್ತು. ಆದರೆ ಏನು ಕಾರಣದಿಂದಲೋ ಅವನು ನನ್ನನ್ನು ಬಿಡಿಸಿಕೊಳ್ಳಲಿಲ್ಲ' ಎಂದು ಸತ್ಯವ್ರತನಿಗೆ ಸಿಟ್ಟು. 'ತಂದೆಗೆ ಕೋಪವನ್ನುಂಟುಮಾಡಿದ ಆ ತಪ್ಪಿಗಾಗಿ ಈ ದ್ವಾದಶ ವಾರ್ಷಿಕ ಕ್ಷಾಮ ಬಂದಿದೆ. ಈ ಕಾಲದಲ್ಲಿ ದೀಕ್ಷೆಯಲ್ಲಿದ್ದು ಕಷ್ಟಪಟ್ಟರೆ ದೋಷ ನಿವಾರಣೆಯಾಗುತ್ತದೆ. ಆಮೇಲೆ (ಅವನಿಗೋ ಅವನ ಮಗನಿಗೋ) ಪಟ್ಟಾಭಿಷೇಕ ಮಾಡೋಣ' ಎಂದು ವಸಿಷ್ಠನು ಯೋಚಿಸಿದ್ದನು. ಅದು ಸತ್ಯವ್ರತನಿಗೆ ತಿಳಿಯದು. ಅಂತು ಹನ್ನೆರಡು ವರ್ಷ ವ್ರತದಲ್ಲಿರುತ್ತ, ಒಂದು ದಿನ ಮತ್ತಾವ ಮಾಂಸವೂ ದೊರಕದೆ ಹೋಗಲು ಸತ್ಯವ್ರತನು, ಕೋಪ ಮೋಹ ಆಯಾಸ ಹಸಿವು ಇವುಗಳಿಂದ ಪೀಡಿತನಾಗಿ, ದಸ್ಯುಧರ್ಮವನ್ನು ಅನುಸರಿಸಿ, ವಸಿಷ್ಠನ ಗೋವನ್ನು ಹಿಡಿದು ಕೊಂದು ತಾನೂ ವಿಶ್ವಾಮಿತ್ರನ ಕುಟುಂಬದವರೂ ಹೊಟ್ಟೆತುಂಬಿಕೊಂಡರು. ಇದನ್ನು ಕೇಳಿ ವಸಿಷ್ಠನು ಕೋಪಗೊಂಡು ಸತ್ಯವ್ರತನನ್ನು 'ತ್ರಿಶಂಕು' ವೆಂದು ಕರೆದನು. (ತ್ರಿಶಂಕು= ಮೂರು ಪಾಪಗಳನ್ನು ಮಾಡಿದವನು.)

ವಿಶ್ವಾಮಿತ್ರನು ತನ್ನ ತಪಸ್ಸನ್ನು ಮುಗಿಸಿಕೊಂಡು ಬಂದು ಸತ್ಯವ್ರತನು ಮಾಡಿದ ಉಪಕಾರಕ್ಕೆ ಸಂತೋಷಪಟ್ಟು ಅವನನ್ನು ರಾಜ್ಯದಲ್ಲಿ ಪ್ರತಿಷ್ಠಿಸಿ ವಸಿಷ್ಠನ ಎದುರಿಗೇ ಅವನಿಂದ ಯಾಗಮಾಡಿಸಿ ಅವನನ್ನು ಸ್ವರ್ಗಕ್ಕೆ ಏರಿಸಿದನು. (ಹರಿಶ್ಚಂದ್ರ ಕಾವ್ಯ, VIII ೩೯.)

ಈ ತ್ರಿಶಂಕುವಿನ ಮಗನೇ ಹರಿಶ್ಚಂದ್ರ; ಅವನ ಮಗ ರೋಹಿತ.

ರೋಹಿತನು ಹುಟ್ಟಿ ಬೆಳೆದ ವಿವರವನ್ನು ಐತರೇಯ ಬ್ರಾಹ್ಮಣದಿಂದ* ತಿಳಿಯಬಹುದು. ಅಲ್ಲಿನ ವೃತ್ತಾಂತವು, ಸಂಕ್ಷೇಪವಾಗಿ, ಹೀಗಿದೆ—(ಅನುಬಂಧ II ನ್ನು ನೋಡಿ).

† ಹರಿಶ್ಚಂದ್ರನಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಅವನು, ನಾರದರ ಮಾತಿನಂತೆ, ವರುಣನನ್ನು ಪ್ರಾರ್ಥಿಸಿ ತನಗೆ ಗಂಡು ಮಗುವಾದರೆ ಅದನ್ನು ವರುಣನಿಗೆ ಬಲಿಕೊಡುವುದಾಗಿ ಹರಕೆ ಕಟ್ಟಿಕೊಂಡನು. ಮಗುವಾಯಿತು. ಅವನಿಗೆ ರೋಹಿತನೆಂಬ ಹೆಸರಿಟ್ಟರು. ಆದರೆ, ಕೂಡಲೆ ಅವನನ್ನು ಹರಕೆಯಂತೆ ಬಲಿಕೊಡಲಿಲ್ಲ. ಹತ್ತು ದಿನ ಕಳೆಯಲಿ, ಹಲ್ಲು ಹುಟ್ಟಲಿ, ಹಲ್ಲು ಬೀಳಲಿ, ಬಿದ್ದ ಹಲ್ಲು ತಿರುಗಿ ಹುಟ್ಟಲಿ, ಅವನು ಬಿಲ್ಲನ್ನು ಹಿಡಿಯುವಂತಾಗಲಿ ಎಂದು ಕಾಲಕಳೆದನು. ಇಷ್ಟು ದೊಡ್ಡವನಾದ ಮೇಲೆ ಅವನನ್ನು ಹರಿಶ್ಚಂದ್ರನು ಬಲಿಕೊಡಬೇಕೆನ್ನಲು ರೋಹಿತನು ಒಪ್ಪದೆ ಕಾಡಿಗೆ ಓಡಿಹೋದನು.§ ಆದ್ದರಿಂದ ವರುಣನು ಹರಿಶ್ಚಂದ್ರನನ್ನೇ ಹಿಡಿದುಕೊಂಡನು. ಅವನಿಗೆ ಜಲೋದರ ರೋಗ ಬಂತು.

* ಐತರೇಯ ಬ್ರಾಹ್ಮಣಕ್ಕೂ ಸಾಂಖ್ಯಾಯನ ಶ್ರೌತಸೂತ್ರಕ್ಕೂ (Max Muller—History of Ancient Sanskrit Literature Appendix) ಈ ಭಾಗದಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ಇವೆರಡರ ವೃತ್ತಾಂತವನ್ನೇ ವೇದಾರ್ಥದೀಪಿಕೆಯು ಸಂಕ್ಷೇಪವಾಗಿ ಹೇಳಿದೆ.

† ಐತರೇಯ ಬ್ರಾಹ್ಮಣ, ಪಂಚಿಕಾ vii, ಅಧ್ಯಾಯ ೩, ಹ.ಕಾ. ಸಂಗ್ರಹ ೨, ೬೭.

§ ಹರಿಶ್ಚಂದ್ರನೇ ಕಾಡಿನಲ್ಲಿ ಮಗನನ್ನು ಬಿಟ್ಟುಬಿಟ್ಟನೆಂದು ಹರಿಶ್ಚಂದ್ರ ಕಾವ್ಯದಲ್ಲಿ ಹೇಳಿದೆ.

ಇತ್ತ ರೋಹಿತನು ಕಾಡಿನಲ್ಲಿ ಅಲೆಯುತ್ತ ಒಂದು ವರ್ಷವಾದ ಮೇಲೆ ತನ್ನ ತಂದೆಗೆ ರೋಗ ಬಂದ ಸಂಗತಿಯನ್ನು ತಿಳಿದು ಊರಿಗೆ ಹೊರಟನು. ಆದರೆ ಇಂದ್ರನು ಅವನನ್ನು ಕಂಡು ಇನ್ನೂ ಸಂಚಾರ ದಲ್ಲಿರುವಂತೆ ಪ್ರೇರಿಸಿದನು. ಮತ್ತೊಂದು ವರ್ಷದ ಮೇಲೆ ತಿರುಗಿ ಊರಿನ ಕಡೆಗೆ ಹೊರಡಲು ಮತ್ತೆ ಹಾಗೇ ಆಯಿತು. ಹೀಗೆ ಕಾಡಿನಲ್ಲಿ ಆರು ವರ್ಷ ಅಲೆಯುತ್ತಿದ್ದು, ಆಮೇಲೆ ಅಜೀಗರ್ತನೆಂಬ * ಋಷಿ ಯನ್ನು ಕಂಡನು. ಅವನಿಗೆ ಶುನಃಪುಚ್ಛ, ಶುನಶ್ಶೇಪ, ಶುನೋಲಾಂ ಗೂಲ ಎಂಬ ಮೂವರು ಮಕ್ಕಳಿದ್ದರು. ಅವರಲ್ಲಿ ಒಬ್ಬನನ್ನು ತನಗೆ ಮಾರಬೇಕೆಂದೂ ಪ್ರತಿಯಾಗಿ ತಾನು ನೂರು ಹಸುಗಳನ್ನು ಕೊಡುವೆ ನೆಂದೂ ರೋಹಿತನು ಕೇಳಿದನು. ಹಿರಿಯ ಮಗನನ್ನು ಕೊಡಲು ತಂದೆ ಒಪ್ಪಲಿಲ್ಲ; ಕಿರಿಯ ಮಗನನ್ನು ಕೊಡಲು ತಾಯಿ ಒಪ್ಪಲಿಲ್ಲ. ಉಳಿದವನು ನಿರ್ಭಾಗ್ಯ ಶುನಶ್ಶೇಪ. ಅವನನ್ನು ನೂರು ಹಸುಗಳಿಗೆ ಕೊಂಡು ತಂದು ರೋಹಿತನು ತನ್ನ ಬದಲಾಗಿ ತನ್ನ ತಂದೆಗೆ ಕೊಟ್ಟನು. ವರುಣನೂ ಒಪ್ಪಿಕೊಂಡನು. ಆಗ ನಡೆದ ಯಾಗದಲ್ಲಿ ಶುನಶ್ಶೇಪನೇ ಪಶುವಾದನು. ಈ ಯಾಗದಲ್ಲಿ ವಿಶ್ವಾಮಿತ್ರನು ಹೋತೃವೂ, ಜಮ ದಗ್ನಿಯು ಅಧ್ವರ್ಯುವೂ, ಆಯಾಸ್ಯನು ಉದ್ಗಾತೃವೂ, ವಸಿಷ್ಠನು ಬ್ರಹ್ಮನೂ ಆಗಿದ್ದರು. ಆದರೆ ಪಶುವಾದ ಶುನಶ್ಶೇಪನನ್ನು ಯೂಪ ಸ್ತಂಬಕ್ಕೆ ಬಂಧಿಸಲು ಯಾರೂ ಒಪ್ಪಲಿಲ್ಲ. ಆದ್ದರಿಂದ ಅವನನ್ನು ಮಾರಿದ ತಂದೆಯೇ ಇನ್ನೊಂದು ನೂರು ಹಸುಗಳನ್ನು ಕೊಟ್ಟರೆ ತಾನು ಬಂಧಿಸುವುದಾಗಿ ಮುಂದೆ ಬಂದನು. ಅವನನ್ನು ಕೊಲ್ಲುವುದಕ್ಕೂ ಹೀಗೇ ಆಯಿತು. ಮತ್ತೊಂದು ನೂರು ಹಸುಗಳನ್ನು ತೆಗೆದುಕೊಂಡು ಅಜೀಗರ್ತನೇ ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು ಕೊಲ್ಲುವುದಾಗಿ ಒಪ್ಪಿಕೊಂಡು, ಕತ್ತಿಯನ್ನು ಹರಿತಮಾಡಿ ಮುಂದುವರಿದನು. ಆಗ

* ರಾಮಾಯಣದಲ್ಲಿ ‘ ಋಚೀಕ ’ ಎಂದಿದೆ. ಋಚೀಕ ಎಂಬ ಶಬ್ದವು ಪ್ರಾಕೃತದಲ್ಲಿ ‘ ಅಜೀಗ ’ ಎಂದಾಗುತ್ತದೆ. ಆದ್ದರಿಂದ ಇವೆರಡು ಹೆಸರುಗಳೂ ಒಂದೇ ಆಗಿರಬಹುದು.

ಶುನಶ್ಶೇಪನು ಪ್ರಜಾಪತಿ, ಅಗ್ನಿ, ಸವಿತೃ, ವರುಣ, ವಿಶ್ವೇದೇವತೆಗಳು, ಇಂದ್ರ, ಉಷಸ್ಸು—ಈ ದೇವತೆಗಳನ್ನು ಪ್ರಾರ್ಥಿಸಿದನು. ಹೀಗೆ ಸ್ತೋತ್ರ ಮಾಡುತ್ತ ಮಾಡುತ್ತ ಒಂದುಕಡೆ ಅವನ ಕಟ್ಟುಗಳೂ ಸಡಿಲಿದುವು, ಮತ್ತೊಂದು ಕಡೆ ಹರಿಶ್ಚಂದ್ರನ ಹೊಟ್ಟೆಯೂ ಕೆಳಗಾಗುತ್ತ ಬಂದು ರೋಗ ವಾಸಿಯಾಯಿತು.

ಯಾಗ ಮುಗಿದು ಅವಭೃಥ ಸ್ನಾನವಾದ ಮೇಲೆ ಶುನಶ್ಶೇಪನು ವಿಶ್ವಾಮಿತ್ರನ ತೊಡೆಯ ಮೇಲೆ ಹೋಗಿ ಕುಳಿತುಬಿಟ್ಟನು. ಅದನ್ನು ನೋಡಿ ಅಜೀಗರ್ತನು ತನ್ನ ಮಗನನ್ನು ಕಳುಹಿಸಿಕೊಡಿರೆಂದು ವಿಶ್ವಾಮಿತ್ರನನ್ನು ಕೇಳಿದನು. ಆದರೆ ವಿಶ್ವಾಮಿತ್ರನು ಒಪ್ಪಲಿಲ್ಲ. "ದೇವತೆಗಳು ಇವನನ್ನು ನನಗೆ ಕೊಟ್ಟಿದ್ದಾರೆ; ಇವನು ನನ್ನ ಮಗ 'ದೇವರಾತ'" ಎಂದು ಉತ್ತರ ಕೊಟ್ಟನು. ಶುನಶ್ಶೇಪನು 'ಕತ್ತಿ ಹಿಡಿದು, ಶೂದ್ರನೂ ಮಾಡದ ಕೆಲಸವನ್ನು ಮಾಡಲು ಹೊರಟಿದ್ದೀಯೆ; ನನಗಿಂತ ಮುನ್ನೂರು ಹಸುಗಳೇ ನಿನಗೆ ಹೆಚ್ಚಾದುವಲ್ಲವೆ?' ಎಂದು ಮೂದಲಿಸಿದನು. ಆಗ ತಂದೆಯು ತಾನು ಮಾಡಿದ ಪಾಪಕರ್ಮಕ್ಕೆ ಅನುತಾಪಪಟ್ಟು 'ನೂರು ಹಸುಗಳನ್ನು ಕೊಟ್ಟುಬಿಡುತ್ತೇನೆ, ಬಾ' ಎಂದು ಮಗನನ್ನು ಕೇಳಿಕೊಂಡನು. ಆದರೆ ಶುನಶ್ಶೇಪನು ಒಪ್ಪದೆ 'ಒಂದು ಸಾರಿ ಪಾಪಕಾರ್ಯ ಮಾಡಿದನು ಮತ್ತೊಂದು ಸಾರಿಯೂ ಮಾಡಬಹುದು' ಎಂದು ಆಕ್ಷೇಪಿಸಿದನು. ವಿಶ್ವಾಮಿತ್ರನೂ ಅವನ ಮಾತನ್ನು ಅನುಮೋದಿಸಿ 'ನಿನ್ನನ್ನು ಕೊಲ್ಲುವುದಕ್ಕೆ ಬಂದಾಗ ಅವನು ಎಷ್ಟು ಭಯಂಕರನಾಗಿದ್ದನಪ್ಪ! ಪುನಃ ಅವನ ಮಗನಾಗಬೇಡ ಕಂಡೆಯಾ! ನಮ್ಮ ವಂಶಕ್ಕೆ ಬಂದುಬಿಡು; ನನ್ನ ಹಿರಿಯ ಮಗನಾಗು' ಎಂದು, ತನಗೆ ನೂರು ಜನ ಮಕ್ಕಳಿದ್ದರೂ, ಅವನನ್ನು ಅವರೆಲ್ಲರಿಗೂ ಜ್ಯೇಷ್ಠನಾಗಿ ಪರಿಗ್ರಹಿಸಿದನು.*

* ಈ ಭಾಗವು ಸ್ವಲ್ಪ ಈಚಿನದೆಂದು ಡಾ|| ಕೀತ್ ಅವರು ಅಭಿಪ್ರಾಯ ಪಡುತ್ತಾರೆ. (ಇಂಗ್ಲೆಂಡಿನ ರಾಯಲ್ ಏಷಿಯಾಟಿಕ್ ಸೊಸೈಟಿ ಪತ್ರಿಕೆ, ೧೯೧೧, ಪುಟ ೯೮೮.) ಆದರೆ ಪುರಾಣಗಳಿಗಿಂತಲೂ ಹಳೆಯದಾಗಿರಬೇಕೆಂದು ಅದರ ಭಾಷೆಯಿಂದಲೇ ಗೊತ್ತಾಗುತ್ತದೆ.

ಈ ಶುನಶ್ಶೇಪನ ನರಮೇಧವು ನಡೆದ ಮೇಲೆ ಹರಿಶ್ಚಂದ್ರನು ರಾಜಸೂಯ ಯಾಗಮಾಡಿ ವಿಶ್ವಾಮಿತ್ರನ ಕೈಗೆ ಸಿಕ್ಕಿ ನರಳಿದನೆಂದು ತೋರುತ್ತದೆ.* ಈ ಭಾಗವು, ಎಂದರೆ ಹರಿಶ್ಚಂದ್ರನು ಸತ್ಯಕ್ಕಾಗಿ ದೇಶಕೋಶಗಳನ್ನು ಕಳೆದುಕೊಂಡು ಕಾಶಿಗೆ ಹೋಗಿ ಕಷ್ಟಪಟ್ಟದ್ದು ಮೇಲೆ ಹೇಳಿದ ವಾಯುಪುರಾಣ ಮುಂತಾದವುಗಳಲ್ಲಿ ಕಂಡುಬರುವುದಿಲ್ಲ. ಅವುಗಳಿಗಿಂತ ಈಚಿನವುಗಳೆನಿಸಿದ ಕೆಲವು ಪುರಾಣಗಳಲ್ಲಿಯೂ ಚಂಡಕೌಶಿಕ ಮುಂತಾದ ಕೆಲವು ಸಾಹಿತ್ಯದ ಗ್ರಂಥಗಳಲ್ಲಿಯೂ ಪ್ರತಿಪಾದಿತವಾಗಿದೆ. ಈಚಿನ ಪುರಾಣಗಳಲ್ಲಿ, ಈ ದೃಷ್ಟಿಯಿಂದ ಮಾರ್ಕಂಡೇಯ ಪುರಾಣ ದೇವೀಭಾಗವತಗಳು ಮುಖ್ಯವಾಗಿವೆ. ದೇವೀಭಾಗವತದಲ್ಲಿ† ದೇವೀ ಪ್ರಾಶಸ್ತ್ಯವನ್ನು ಹೇಳುವ ಭಾಗವನ್ನು ಬಿಟ್ಟರೆ ಬಹುಮಟ್ಟಿಗೆ ಹರಿಶ್ಚಂದ್ರೋಪಾಖ್ಯಾನವು, ಅದರಲ್ಲಿಯೂ ಮಾರ್ಕಂಡೇಯದಲ್ಲಿಯೂ ಒಂದೇ ಎಂದು ಹೇಳಬಹುದು. ಇವೆರಡರಲ್ಲಿಯೂ ಹೊಲತಿಯರ ವೃತ್ತಾಂತವಿಲ್ಲ. ದೇವೀಭಾಗವತದಲ್ಲಿ ವಿಶ್ವಾಮಿತ್ರನು ವಶಮಾಡಿಕೊಳ್ಳಬೇಕೆಂದಿದ್ದ ಒಬ್ಬ ಸ್ತ್ರೀಯೂ, ಮಾರ್ಕಂಡೇಯದಲ್ಲಿ ಮೂವರು ವಿದ್ಯಾಧಿದೇವತೆಗಳೂ ಬರುತ್ತಾರೆ. (ಕೃಷ್ಣರಾಜವಾಣೀವಿಲಾಸ) ಭಾರತದ ಕನ್ನಡ ಟೀಕಿನಲ್ಲಿ ವನಪರ್ವದೊಳಗೆ

* ಐತರೇಯ ಬ್ರಾಹ್ಮಣದ ಪ್ರಕಾರ ರೋಹಿತಾಶ್ವನು ಕಾಡಿನಿಂದ ಹಿಂತಿರುಗಿ ಮನೆ ಬಂದಾಗ ಅವನಿಗೆ ಹದಿನೆಂಟು ಇಪ್ಪತ್ತು ವರ್ಷವಾದರೂ ಆಗಿರಬೇಕು. ಆದರೆ ಕಾವ್ಯದಲ್ಲಿ ಹರಿಶ್ಚಂದ್ರನು ರಾಜ್ಯವನ್ನು ಬಿಟ್ಟು ಕಾಶಿಗೆ ಹೋದಾಗ ಚಿಕ್ಕ ಹುಡುಗನಂತೆ ವರ್ಣಿತನಾಗಿದ್ದಾನೆ. ಈ ಅಂಶಗಳಿಗೆ ಸಾಮಂಜಸ್ಯವನ್ನು ಕಲ್ಪಿಸುವುದು ಕಷ್ಟ.

† ಶ್ರೀಮದ್ಭಾಗವತ ನವಮಸ್ಕಂಧ (ಏಳನೆಯ ಅಧ್ಯಾಯ) ದಲ್ಲಿಯೂ ದೇವೀಭಾಗವತ (ಏಳನೆಯ ಸ್ಕಂಧ) ದಲ್ಲಿಯೂ ತ್ರಯ್ಯಾರುಣನ ವೃತ್ತಾಂತದಿಂದ ಮೊದಲುಮಾಡಿಕೊಂಡು ಹರಿಶ್ಚಂದ್ರನಿಗೆ ಸಂಬಂಧಪಟ್ಟ ಕಥಾಂಶಗಳೆಲ್ಲಾ ಸಂಕ್ಷಿಪ್ತವಾಗಿ ಬಂದಿವೆ. ಶ್ರೀಮದ್ಭಾಗವತದಲ್ಲಿ ಹರಿಶ್ಚಂದ್ರನು ಸತ್ಯಕ್ಕಾಗಿ ಪಟ್ಟ ಶ್ರಮದ ವಿಸ್ತೃತ ವಿವರಣೆಯಿಲ್ಲ. ಅದು ಎರಡು ಮೂರು ವಾಕ್ಯಗಳಲ್ಲಿ ಮುಗಿದುಹೋಗಿದೆ.

ರಾಮೋಪಾಖ್ಯಾನಕ್ಕೂ ಸಾವಿತ್ರಿಯ ಉಪಾಖ್ಯಾನಕ್ಕೂ ಮಧ್ಯೆ ಹರಿಶ್ಚಂದ್ರನ ಉಪಾಖ್ಯಾನವೂ ವಿಸ್ತಾರವಾಗಿ ಪ್ರತಿಪಾದಿತವಾಗಿದೆ. ಆದರೆ ಸಂಸ್ಕೃತ ಭಾರತದ ಉತ್ತರ ದಕ್ಷಿಣ ಪಾಠವೊಂದರಲ್ಲೂ ಇದು ಈ ಭಾಗದಲ್ಲಿ ದೊರೆಯದಿರುವುದರಿಂದಲೂ ನಳೋಪಾಖ್ಯಾನದ ಮಧ್ಯೆ ಕೇವಲ ಸಂಕ್ಷಿಪ್ತವಾಗಿ ದೊರೆಯುವುದರಿಂದಲೂ ಟೀಕಿನಲ್ಲಿ ಕಂಡು ಬರುವ ಈ ಕಥೆಯು ಪ್ರಕ್ಷಿಪ್ತವೆಂದು ಹೇಳಬೇಕು. ಆದರೂ ರಾಘವಾಂಕನ ಹರಿಶ್ಚಂದ್ರ ಕಾವ್ಯಕ್ಕೆ ಗ್ರಂಥಸ್ಥವೋ ಕಂಠಸ್ಥವೋ ಆಗಿದ್ದ ಇಂಥ ಒಂದು ವಿಸ್ತೃತಪಾಠವೇ ಮೂಲವಾಗಿರುವಂತೆ ತೋರುತ್ತದೆ.*

ಮೇಲಿನ ವೈದಿಕ ಪೌರಾಣಿಕ ಗ್ರಂಥಗಳನ್ನು ನೋಡಿದರೆ ಹರಿಶ್ಚಂದ್ರನು, ಐತರೇಯ ಬ್ರಾಹ್ಮಣದ ಕಥೆಯಂತೆ, ಸತ್ಯಸಂಧನೇನಲ್ಲ; ಮಗನ ಮೇಲಣ ಅಭಿಮಾನದಿಂದ ವರುಣನನ್ನು ಮೋಸಗೊಳಿಸಲೆಳಸಿ, ರೋಗ ತಂದುಕೊಂಡು, ಜೀವಕ್ಕೆ ಜೀವಕೊಡುವುದಕ್ಕೆ ಹೋಗಿ, ಕೊನೆಗೆ ಯಾವ ನಷ್ಟಕ್ಕೂ ಗುರಿಯಾಗದೆ, ಗುರುಹಿರಿಯರ ಪ್ರಭಾವದಿಂದಲೂ ದೇವತೆಗಳ ಕೃಪೆಯಿಂದಲೂ, ತನ್ನನ್ನೂ ಮಗನನ್ನೂ ಉಳಿಸಿಕೊಂಡವನು. (ಇದು ಹರಿಶ್ಚಂದ್ರಕಾವ್ಯದಲ್ಲಿಯೂ ಅನುಷಂಗಿಕವಾಗಿ ಬಂದಿದೆ.– ಸಂಗ್ರಹ, ಅಧ್ಯಾಯ ೨ ಪದ್ಯ ೭–೮) ಪ್ರಾಚೀನ ಪುರಾಣಗಳಲ್ಲಿ 'ಸತ್ಯವ್ರತ'ನು ಹರಿಶ್ಚಂದ್ರನಲ್ಲ, ಅವನ ತಂದೆ; ಹರಿಶ್ಚಂದ್ರನ ಪ್ರಸಿದ್ಧಿಯೆಲ್ಲಾ ಅವನು ಮಾಡಿದ ರಾಜಸೂಯ ಯಾಗಕ್ಕೆ. (ಮಹಾಭಾರತ ಸಭಾ. xii, ೧೦-೫೫). ಅವನ ಸತ್ಯಸಂಧತೆಯು ಪ್ರಕಾಶಕ್ಕೆ ಬಂದಿರುವುದು ಮಾರ್ಕಂಡೇಯ ಮುಂತಾದ ಈಚಿನ ಪುರಾಣಗಳಲ್ಲಿ; ಮತ್ತು

---

* ಇದು ಯಾವುವೆಂದು ನಿರ್ಧಾರವಾಗಿ ಗೊತ್ತಾಗುವಂತಿಲ್ಲ. ಯಾವುದಾದರೂ ಒಂದು ಶೈವಪುರಾಣವಾಗಿರಬಹುದೆಂದು ಊಹಿಸುವುದು ಸ್ವಾಭಾವಿಕವಾಗಿದೆ. ಆದರೆ ಶಿವಪುರಾಣದಲ್ಲಿ ಈ ಭಾಗದ ವಿಸ್ತಾರವಿಲ್ಲ. ಸ್ಕಾಂದ ಪುರಾಣಾಂತರ್ಗತವೆಂದು ಹೇಳಿಕೊಳ್ಳುವ ಒಂದು ಸಂಸ್ಕೃತ "ಹರಿಶ್ಚಂದ್ರೋಪಾಖ್ಯಾನ"ವೇ (ಸತ್ಸಂಪ್ರದಾಯ ಕಲಾನಿಧಿ ಮುದ್ರಾಕ್ಷರ ಶಾಲಾ ಬೆಂಗಳೂರು, ೧೮೮೩) ಈ ಭಾಗವನ್ನು ಬಹುವಾಗಿ—ಅರವತ್ತು ಅಧ್ಯಾಯಗಳಲ್ಲಿ—ವಿಸ್ತರಿಸಿರುವ ಗ್ರಂಥ. ಆದರೆ ನಾವು ನೋಡಿರುವ ಸ್ಕಾಂದಪುರಾಣದಲ್ಲಿ (ವೆಂಕಟೇಶ್ವರ ಪ್ರೆಸ್, ಬೊಂಬಾಯಿ) ಇದು ಅಂತರ್ಗತವಾಗಿ ದೊರೆಯುವುದಿಲ್ಲ.

ವಿಶ್ವಾಮಿತ್ರನ ಮೂಲಕ. ಆದ್ದರಿಂದ ಇವುಗಳ ಆಧಾರದ ಮೇಲೆ ಹುಟ್ಟಿದ ಸಾಹಿತ್ಯ ಗ್ರಂಥಗಳಲ್ಲಿ ಹರಿಶ್ಚಂದ್ರ, ಅವನ ಸತ್ಯ, ಅದನ್ನು ಉಳಿಸಿಕೊಳ್ಳುವುದಕ್ಕೆ ಹೋಗಿ ಅವನು ಪಟ್ಟ ಕಷ್ಟ, ಆ ಕಷ್ಟಗಳಿಗೆ ಕಾರಣ ನಾದ ವಿಶ್ವಾಮಿತ್ರ, ಅವುಗಳಿಗೆ ಮೂಲವಾದ ಅವನ ಕೋಪ ಮುಂತಾ ದವುಗಳಿಗೆ ಪ್ರಾಧಾನ್ಯವಿದೆ. ಹರಿಶ್ಚಂದ್ರನ ಸತ್ಯಸಂಧತೆಯ ಘನತೆ ಪರಿಮಾಣಗಳನ್ನು ಉಜ್ವಲಮಾಡಿ ತೋರಿಸಬೇಕೆಂಬ ಉತ್ಸಾಹಕ್ಕೆ ಅನುರೂಪವಾಗಿ ಕಥಾವಿಸ್ತಾರ, ಹರಿಶ್ಚಂದ್ರನ ಕಷ್ಟ, ವಿಶ್ವಾಮಿತ್ರನ ಕ್ರೌರ್ಯ ಮುಂತಾದವು ಬೆಳೆಯುತ್ತ ಹೋಗಿವೆ. ಹರಿಶ್ಚಂದ್ರನು ರಾಜ್ಯ ವನ್ನು ಬಿಟ್ಟು, ವಿಶ್ವಾಮಿತ್ರನಿಗೆ ಕೊಡುತ್ತೇನೆಂದು ಒಪ್ಪಿದ ದಕ್ಷಿಣೆಯ ಸಂಪಾದನೆಗೋಸ್ಕರ ಕಾಶಿಗೆ ಹೋಗಿ ಅಲ್ಲಿ ತನ್ನ ಹೆಂಡತಿ ಮಕ್ಕಳನ್ನು ಒಬ್ಬ ಬ್ರಾಹ್ಮಣನಿಗೆ ಮಾರಿ ತನ್ನನ್ನು ಒಬ್ಬ ಚಂಡಾಲನಿಗೆ ಮಾರಿ ಕೊಂಡು ಕೊನೆಗೆ ಶ್ಮಶಾನದಲ್ಲಿ ಹೆಂಡತಿ ಮಕ್ಕಳೊಡನೆ ಸೇರಿದ್ದು ಎಲ್ಲಾ ಗ್ರಂಥಗಳಿಗೂ ಸಾಮಾನ್ಯಾಂಶವಾದರೂ, ವಿಶ್ವಾಮಿತ್ರನ ಕ್ರೌರ್ಯವನ್ನೂ ಹರಿಶ್ಚಂದ್ರನ ಕಷ್ಟವನ್ನೂ ವ್ಯಕ್ತಗೊಳಿಸುವ ಇತರ ಸಂಗತಿಗಳು ಮಾರ್ಕಂಡೇಯ ಪುರಾಣದಿಂದ ಹರಿಶ್ಚಂದ್ರ ಕಾವ್ಯದವರೆಗೆ, ಹರಿ ಶ್ಚಂದ್ರನ ಜಲೋದರದಂತೆಯೇ, ಕ್ರಮಕ್ರಮವಾಗಿ ಬೃಹದಾಕಾರವನ್ನು ತಾಳಿಕೊಂಡು ಬಂದಿವೆ. ಹೀಗೆ ಮಾರ್ಕಂಡೇಯ ಪುರಾಣದಲ್ಲಿ ರಾಜ ಸೂಯ ಯಾಗದ ಭೂರಿದಕ್ಷಿಣೆಯಾಗಿದ್ದದ್ದು, ಚಂಡಕೌಶಿಕದಲ್ಲಿ ಲಕ್ಷ ವರಹವಾಗಿ, ಹರಿಶ್ಚಂದ್ರ ಕಾವ್ಯದಲ್ಲಿ ಆನೆಯಮೇಲೆ ನಿಂತು ಕವಡೆ ಚಿಮ್ಮಿ ದರೆ ಆಗುವಷ್ಟು ಎತ್ತರದ ಧನರಾಶಿಯಾಗಿದೆ. ದೇವೀಭಾಗವತದಲ್ಲಿ ವಿಶ್ವಾ ಮಿತ್ರನಿಂದ ಕಾಮಿತಳಾಗಿದ್ದ ಒಬ್ಬಳು ಸುಂದರಿಯು * ಮಾರ್ಕಂಡೇಯ

ನಾರ್ಯುವಾಚ—

ರಾಜನ್ ಮಾಂ ಬಾಧತೇತ್ಯರ್ಥಂ ವಿಶ್ವಾಮಿತ್ರೋ ಮಹಾಮುನಿಃ
ತಪಃ ಕರೋತಿ ಯದ್ಘೋರಂ ಮದರ್ಥಂ ಕೌಶಿಕೋ ವನೇ ॥
ತೇನಾಹಂ ದುಃಖಿತಾ ರಾಜನ್ ವಿಷಯೇ ತವ ಸುವ್ರತ ।
ವಿದ್ಧಿ ಮಾಂ ಕಮನಾಂ ಕಾಂತಾಂ ಪೀಡಿತಾಂ ಮುನಿನಾ ಭೃಶಂ ॥
(ದೇವೀಭಾಗವತ, ಸ್ಕಂಧ vii, ಅಧ್ಯಾಯ ೧೯, ಶ್ಲೋ. ೭-೮)

ದಲ್ಲಿಯೂ ಚಂಡಕೌಶಿಕದಲ್ಲಿಯೂ ವಿದ್ಯಾಧಿದೇವತೆಗಳಾಗಿ ಹರಿಶ್ಚಂದ್ರನಿಂದ ಬಿಡಿಸಲ್ಪಟ್ಟು, ಈ ಕಾವ್ಯದಲ್ಲಿ '.ಗಾಣರಾಣಿ'ಯರಾದ ಹೊಲತಿಯರಾಗಿ ಹರಿಶ್ಚಂದ್ರನನ್ನು ಪೀಡಿಸುತ್ತಾರೆ; ಕೌಶಿಕನಿಗೆ ಸಹಾಯಕನಾಗಿ ಅವನಿಗಿಂತ ಕ್ರೂರನಾದ ಒಬ್ಬ ಶಿಷ್ಯ ಹುಟ್ಟಿಕೊಳ್ಳುತ್ತಾನೆ; ಚಂದ್ರಮತೀ ರೋಹಿತಾಶ್ವರನ್ನು ಕೊಂಡುಕೊಳ್ಳುವವನು ಮೊದಲು ಬ್ರಾಹ್ಮಣವೇಷದ ವಿಶ್ವಾಮಿತ್ರ; ಆಮೇಲೆ ಒಬ್ಬ ದಯಾವಂತನಾದ ಬ್ರಾಹ್ಮಣ; ಅವನು ಕ್ರಮೇಣ 'ಅತಿಕೋಪಿ'ಯಾಗಿ ಪರಿಣಮಿಸಿ, ಅವನ ಸುತ್ತ ಅವನಿಗೆ ಅನುರೂಪವಾದ ಒಂದು ನಿಷ್ಠುರ ಪ್ರಪಂಚವೇ ಏರ್ಪಡುತ್ತದೆ. (ಹ. ಕಾ. ಸಂಗ್ರಹ, ಲ-೨). ಕಾಶೀರಾಜನೂ ಅವನ ಮಗನೂ ನಿರ್ಮಿತರಾಗಿ ಪುತ್ರಶೋಕ ಸಂತಪ್ತೆಯಾದ ನಿರ್ಭಾಗ್ಯ ಚಂದ್ರಮತಿಯಮೇಲೆ ಶಿಶುಹತ್ಯೆಯ ದೋಷ ಹೊತ್ತು ಶ್ಮಶಾನದಲ್ಲಿ ಅವಳ ಗಂಡನಿಂದಲೇ ತಲೆ ಹೊಡಿಸುವ ಘೋರ ಸನ್ನಿವೇಶವು ಬರುತ್ತದೆ. (ಮಾರ್ಕಂಡೇಯ ದೇವೀಭಾಗವತಗಳಲ್ಲಿ ತಂದೆ ತಾಯಿಗಳು ಮಗನ ಶವದೊಡನೆ ಅಗ್ನಿ ಪ್ರವೇಶ ಮಾಡಬೇಕೆಂದು ಪ್ರಯತ್ನಮಾಡುವಾಗ ದೇವತೆಗಳು ಪ್ರತ್ಯಕ್ಷರಾಗಿ ಅವರನ್ನು ತಡೆಯುವರು.) ಇವೆಲ್ಲಕ್ಕಿಂತಲೂ ಮುಖ್ಯವಾದದ್ದು ವಿಶ್ವಾಮಿತ್ರ ಪಾತ್ರಪರಿವರ್ತನ. ಐತರೇಯ ಬ್ರಾಹ್ಮಣದಲ್ಲಿ ಕೌಶಿಕನು ಕಾರುಣ್ಯಮೂರ್ತಿ; ಅವನ ಸಹಾಯದಿಂದಲೇ ಶುನಶ್ಶೇಪನಿಗೆ ಆಶ್ರಯ ದೊರೆತದ್ದು. (ಅವನು ಆ ಹುಡುಗನಿಗೆ ಸೋದರಮಾವನೋ ಸೋದರಜ್ಜನೋ ಇರಬಹುದು: ಆದರೂ ಅವನ ಕರುಣವು ಕೇವಲ ಬಂಧು ಪಕ್ಷಪಾತವಲ್ಲ.) ಇಂಥ ರಾಜರ್ಷಿಯು, ಬ್ರಹ್ಮರ್ಷಿಯು, ಈ ಕಥೆಯ ಚರಮಾವತಾರದಲ್ಲಿ ರಾಕ್ಷಸಮೂರ್ತಿಯಾಗಿದ್ದಾನೆ. ಅವನ ಪ್ರಚಂಡ ಕೋಪದ ಮುಂದೆ ನಿಲ್ಲತಕ್ಕವರಿಲ್ಲ. ಅವನು ಕೇಳುವ ದಕ್ಷಿಣೆಗೆ ಮಿತಿಯಿಲ್ಲ, ಕೊಡುವ ಕಾಟಕ್ಕೆ ಕೊನೆಯಿಲ್ಲ. ಇದರಲ್ಲಿ ಅವನ ಉದ್ದೇಶವು ಒಳ್ಳೆಯದಾಗಿದ್ದಿತೆಂದೂ ಅವನು 'ಲೋಕದ ಕಣ್ಗೆ ಕಡುಮುಳಿದರಂತೆ ತೋಱಿಸಿ ಸತ್ಯಶುದ್ಧವಪ್ಪೆನ್ನಗಂ ಕಾಡಿನೋಡಿ ಕಡೆಯೊಳು ಹರಿಶ್ಚಂದ್ರರಾಯಂಗೆ ಗಣವೆರಸಿ ಮೃಡನನೆಳತಂದಿತ್ತು ಕೀರ್ತಿಯಂ ಮೂಜಗದ ಕಡೆಗೆ ಹರಹಿದ'ನೆಂದೂ (೯-೧೧) ಹೇಳಿರುವುದೇನೋ ನಿಜ. ಆದರೆ

ಹರಿಶ್ಚಂದ್ರನ ಸತ್ಯ ಸೌಜನ್ಯಗಳನ್ನು ಮೆಚ್ಚಿ ಅವನಿಗೂ ಅವನ ಮೂಲಕ ಲೋಕಕ್ಕೂ ಉಪಕಾರಮಾಡಬೇಕೆನ್ನುವ ಶುಭೋದ್ದೇಶವು ಕೊನೆಯ ವರೆಗೂ ಎಲ್ಲಿಯೂ ಸೂಚಿತವಾಗುವುದಿಲ್ಲ; ಈ ಉದ್ದೇಶವೇ ಮೊದಲಿನಿಂದಲೂ ಇರುವ ಪಕ್ಷಕ್ಕೆ ವಸಿಷ್ಠನೊಡನೆ ಇದಕ್ಕಾಗಿ ಹೂಡಿದ ವ್ಯಾಜ್ಯವು ಬರಿಯ ನಟನೆಯಾಗಿ, ಪಾಠಕರ ದೃಷ್ಟಿಯಿಂದಲಾದರೂ ಹರಿಶ್ಚಂದ್ರನ ಕಷ್ಟದ ತೀಕ್ಷ್ಣತೆಯು ಕಡಮೆಯಾಗಿ, ಈ ಕಥೆಯ ಕರುಣರಸದ ಬಣ್ಣವು ಕುಂದುತ್ತದೆ. ಗ್ರಂಥದ ಆಧಾರದ ಮೇಲೆ ಹೇಳುವುದಾದರೆ ವಿಶ್ವಾಮಿತ್ರನ ಕ್ಷಾತ್ರಗುಣ, ವಸಿಷ್ಠನ ಮೇಲಣ ವೈರ, ಹಟ ಇವೇ ಆತನು ಹರಿಶ್ಚಂದ್ರನಿಗೆ ಕೊಟ್ಟ ಕಾಟಕ್ಕೆ ಕಾರಣವೆಂದು ತೋರುತ್ತದೆ. 'ಶಿವಿದೊಡ್ಡೋಲಗದ ನಡುವೆ ತನ್ನಂ ಮೊದಲೊಳೋವಿ ನುಡಿಸದ ಕೋಪ ಒಂದು, ಆ ವಸಿಷ್ಠ ಮುನಿ ಯಾವುದಂ ಪೇಳ್ದಡದನಲ್ಲೆಂಬ ಭಾಷೆ ಎರಡು, ಅಖಿಳಜೀವಾವಳಿಯಲಿ ಭಾವಿಪಡೆ ಕುಂದನಲ್ಲದೆ ಲೇಸ ಕಾಣದಿಹ ಭಾವ' ಮೂರು, ಇವಿಷ್ಟೂ ವಿಶ್ವಾಮಿತ್ರನಲ್ಲಿ ಮುಪ್ಪುರಿಗೊಂಡು ಕುಡಿವರಿದು ಕಡುಕೋಪವಾವರಿಸಿ, ವ್ಯಾಜ್ಯಕ್ಕೆ ಆರಂಭವಾಗಿ ವಸಿಷ್ಠನು ತನ್ನನ್ನು 'ರಾಜರುಷಿಯೆಂದು ಕೆಟ್ಟಾಡಿತಕ್ಕಾ ಹರಿಶ್ಚಂದ್ರನ ನಸತ್ಯನಂ ಮಾಡಿಸುವೆ'ನೆಂದು ವಿಶ್ವಾಮಿತ್ರನು ಪ್ರತಿಜ್ಞೆ ಮಾಡಿದನು. ಅವನ ಈ ಪ್ರತಿಜ್ಞೆಯು ಹರಿಶ್ಚಂದ್ರನ ಸತ್ಯಭಂಗವಷ್ಟರಲ್ಲಿಯೇ ಮುಗಿಯುವಂತಿಲ್ಲ; ಅವನ ಜಾತ್ಯಭಿಮಾನವನ್ನು ಪುಡಿಗುಟ್ಟಲು ಅವನನ್ನು ಚಂಡಾಲ ಸ್ತ್ರೀಯರಿಗೆ ಗಂಟುಹಾಕಬೇಕೆಂದೂ ಚಂಡಾಲನಿಗೆ ದಾಸನಾಗಿ ಮಾಡಬೇಕೆಂದೂ ಅವನು ವಿಶ್ವಪ್ರಯತ್ನಮಾಡುವನು; ಕೆಲವು ಸನ್ನಿವೇಶಗಳಲ್ಲಿ, ಹರಿಶ್ಚಂದ್ರನು ಸುಳ್ಳು ಹೇಳದಿದ್ದರೆ ಹೋಗಲಿ, ಹೊಲತಿಯರನ್ನು ಮದುವೆಮಾಡಿಕೊಂಡುಬಿಡಲಿ ಎಂದು ವಿಶ್ವಾಮಿತ್ರನಿಗೆ ತವಕವಿರುವಂತೆ ತೋರುತ್ತದೆ. ಸತ್ಯದ ಘನತೆಯನ್ನು ಲೋಕಕ್ಕೆ ಎತ್ತಿ ತೋರಿಸುವ ಸದುದ್ದೇಶದಿಂದಾಗಲಿ ವಸಿಷ್ಠನ ಮೇಲಣ ಹಟ ಕೋಪಗಳಿಂದಾಗಲಿ, ಹರಿಶ್ಚಂದ್ರನಿಂದ ಆಡಿದ ಮಾತನ್ನು ತಪ್ಪಿಸಬೇಕೆಂಬ ಪ್ರಯತ್ನದಲ್ಲಿ ಈ ಚಂಡಾಲ ವೃತ್ತಾಂತಕ್ಕೆ ಔಚಿತ್ಯವಾಗಲಿ ಆವಶ್ಯಕತೆಯಾಗಲಿ ಇಲ್ಲ. ಹರಿಶ್ಚಂದ್ರನ ಕಥೆಯಲ್ಲಿ ಬರುವ ಈ

ಭಾಗಕ್ಕೆ ಅರ್ಥವೇನಿದ್ದೀತು ಎಂಬುದು ಹಿಂದೆ ಹೇಳಿದ (ಪುಟ ೧೫೪–೧೫೬) ಪ್ರಾಚೀನ ಪುರಾಣ ಕಥೆಯನ್ನು ತಾತ್ತ್ವಿಕ ದೃಷ್ಟಿಯಿಂದ ಪರಿಶೀಲಿಸಿದರೆ ತಿಳಿಯಬಹುದು. ಆಗ ಫಲಿತವಾಗುವುದೇನೆಂದರೆ*:–

## ಹರಿಶ್ಚಂದ್ರನ ಕಥೆಯಲ್ಲಿ ಚರಿತ್ರೆ

ವಸಿಷ್ಠ ವಿಶ್ವಾಮಿತ್ರರು ಪ್ರಾಚೀನ ಭರತಖಂಡದ ಚರಿತ್ರೆಯಲ್ಲಿದ್ದ ಇಬ್ಬರು ಪ್ರಬಲರಾದ ರಾಜನಿರ್ಮಾಣಕರು. ವಸಿಷ್ಠನು† ತ್ರಯ್ಯಾರುಣ ನಲ್ಲಿ ಮಂತ್ರಿಯಾಗಿದ್ದು ಸತ್ಯವ್ರತತ್ರಿಶಂಕುವು ಭ್ರಷ್ಟನಾದ ಮೇಲೆ ತಾನು ಹನ್ನೆರಡು ವರ್ಷ ರಾಜ್ಯಸೂತ್ರಗಳನ್ನು ಧರಿಸಿದ್ದನು. ಆಮೇಲೆ ವಿಶ್ವಾಮಿತ್ರನು ಪ್ರಬಲನಾಗಿ ತ್ರಿಶಂಕುವನ್ನೂ ಅವನ ಕಾಲಾನಂತರ ಹರಿಶ್ಚಂದ್ರನನ್ನೂ§ ರಾಜ್ಯದಲ್ಲಿ ಸ್ಥಾಪಿಸಿದನು. ತ್ರಿಶಂಕುವು ವ್ರತಾ

---

* ಪುರಾಣದೊಳಗೆ ಪ್ರಾಚೀನಚರಿತ್ರೆ ಅಡಗಿದೆಯೆಂದು ಈಗ ಪಾಶ್ಚಾತ್ಯ ವಿದ್ವಾಂಸರೂ ಒಪ್ಪಿಕೊಳ್ಳುತ್ತಿದ್ದಾರೆ. ಅವುಗಳನ್ನು ಈ ದೃಷ್ಟಿಯಿಂದ ಪರಿಶೀಲಿಸಿರುವವರಲ್ಲಿ ಎಫ್. ಇ. ಪಾರ್ಗಿಟರ್ ಎಂಬವರು ಮುಖ್ಯರು. ಅವರು ತಮ್ಮ *Ancient Indian Historical Tradition* ಎಂಬ ಗ್ರಂಥದಲ್ಲಿಯೂ ಇಂಗ್ಲೆಂಡಿನ ರಾಯಲ್ ಏಷ್ಯಾಟಿಕ್ ಸೊಸೈಟಿ ಪತ್ರಿಕೆಗೆ ತಾವು ಬರೆದ ಎರಡು ಲೇಖನಗಳಲ್ಲಿಯೂ (೧೯೧೩, ೧೯೧೭) ಈ ಉಪಾಖ್ಯಾನವನ್ನು ಚರಿತ್ರ ದೃಷ್ಟಿಯಿಂದ ವಿಮರ್ಶೆಮಾಡಿದ್ದಾರೆ.

† ವಸಿಷ್ಠ ಎಂಬುದು ಕುಲದ ಹೆಸರು. (ವಂಶಪಾರಂಪರ್ಯವಾಗಿ ಸೂರ್ಯವಂಶದ ರಾಜರಿಗೆಲ್ಲಾ ಒಬ್ಬನೇ ಪುರೋಹಿತನಾಗಿರಲಾರನು!) ಹರಿಶ್ಚಂದ್ರನ ಕಾಲದಲ್ಲಿದ್ದ ವಸಿಷ್ಠನಿಗೆ ದೇವರಾಜ ಅಥವಾ 'ದೇವರಾಜ ವಸಿಷ್ಠ' ಎಂದು ಹೆಸರು.

ಅವರ್ಷತಿ ಚ ಪರ್ಜನ್ಯೇ ಸರ್ವಭೂತಾನಿ ದೇವರಾಟ್ ।
ವಸಿಷ್ಠೋ ಜೀವಯಾಮಾಸ ಯೇನ ಯಾತೋಽಕ್ಷಯಂ ಜಗತ್ ॥
(ಮಹಾಭಾರತ, xiii, ಅಧ್ಯಾಯ ೧೩೭, ಶ್ಲೋ. ೬೪.)

'ದೇವರಾಜ' ಎಂದರೆ 'ಇಂದ್ರ' ಎಂದೂ ಅರ್ಥ. ಇದು ಬೆರೆತುಹೋಗಿ, ವಿಶ್ವಾಮಿತ್ರನ ತಪಸ್ಸಿನಲ್ಲಿ 'ಇಂದ್ರ' ನೊಡನೆ ಸ್ಪರ್ಧೆ, 'ಇಂದ್ರ' ಸಭೆಯಲ್ಲಿ ಹರಿಶ್ಚಂದ್ರನ ಸತ್ಯವಿಚಾರ, 'ಇಂದ್ರ'ನು ಬ್ರಾಹ್ಮಣನಾಗಿ ರೋಹಿತನನ್ನು ಊರಿಗೆ ಹೋಗಬೇಡ ಕಾಡಿನಲ್ಲಿ ತಿರುಗುತ್ತಿರು ಎಂದು ವಾರಣಮಾಡುವುದು—ಮುಂತಾದ ಪರಿವರ್ತನವಾಗಿದೆ ಎಂದು ಊಹಿಸಲ್ಪಟ್ಟಿದೆ.—ಪಾರ್ಗಿಟರ್.

§ ಐತರೇಯ ಬ್ರಾಹ್ಮಣದ ಪ್ರಕಾರ ಇವನ ಪೂರ್ತಿಯಾದ ಹೆಸರು "ಹರಿಶ್ಚಂದ್ರ ವೈಧಸ ಐಕ್ಷ್ವಾಕು." ಇಲ್ಲಿ 'ವೈಧಸ' ಎಂದರೆ—'ವೈವಸ್ವತ' ಎಂಬಂತೆ—ಸೂರ್ಯವಂಶದಲ್ಲಿ ಹುಟ್ಟಿದವನು ಎಂದು ಅರ್ಥವಿರುವಹಾಗೆ ಕಾಣುತ್ತದೆ. ಇವನ ಕಾಲ ಸುಮಾರು ಕ್ರಿ. ಪೂ. ೨೦೦೦ ಇದ್ದಿರಬಹುದು.

ಆರಣೆಯಲ್ಲಿದ್ದಾಗ ಹರಿಶ್ಚಂದ್ರನು ಚಿಕ್ಕ ವಯಸ್ಸಿನವನಾಗಿದ್ದು ಹನ್ನೆರಡುವರ್ಷ ವಸಿಷ್ಠನ ಶಿಕ್ಷಣದಲ್ಲಿದ್ದದ್ದರಿಂದ ಅವನು ಪಟ್ಟಕ್ಕೆ ಬಂದಮೇಲೆ ಪುನಃ ವಸಿಷ್ಠನು ಪ್ರಾಬಲ್ಯಕ್ಕೆ ಬಂದು ವಿಶ್ವಾಮಿತ್ರನು ಹುಟ್ಟುಬ್ರಾಹ್ಮಣನಲ್ಲವೆಂದೋ, ಮತ್ತಾವ ಕಾರಣದಿಂದಲೋ, ರಾಜಸೂಯಯಾಗದಲ್ಲಿ ದಕ್ಷಿಣೆ ಲಭಿಸದೆ ತೇಜೋವಧೆಯಾಗಿ ತಪಶ್ಚರ್ಯೆಗೆಂದು ಕಾಡಿಗೆ ಹೊರಟುಹೋದನು. ಅಲ್ಲಿಂದ ಮುಂದೆ ಹರಿಶ್ಚಂದ್ರನ ಮೇಲೆ ದ್ವೇಷಹುಟ್ಟಿ ವಿಶ್ವಾಮಿತ್ರನು ಅವನಿಗೆ ಕಿರುಕುಳಕೊಟ್ಟಹಾಗೆ ಕಾಣುತ್ತದೆ. "ನನ್ನ ಕಡೆಯ ರಾಜನಾದ 'ಸತ್ಯವ್ರತ' ತ್ರಿಶಂಕುವನ್ನು ಚಂಡಾಲನನ್ನಾಗಿಯೂ ದೇಶಭ್ರಷ್ಟನನ್ನಾಗಿಯೂ ಮಾಡಿದ್ದಕ್ಕೆ ಪ್ರತಿಯಾಗಿ ನಿನ್ನ ಕಡೆಯ ರಾಜನಾದ ಹರಿಶ್ಚಂದ್ರನನ್ನು 'ಅಸತ್ಯವ್ರತ' ನನ್ನಾಗಿಯೂ ರಾಜ್ಯ ಕಳೆದುಕೊಂಡು ದೇಶಭ್ರಷ್ಟನೂ ಚಂಡಾಲನೂ ಆಗುವಂತೆಯೂ ಮಾಡುತ್ತೇನೆ" ಎಂದು ವಿಶ್ವಾಮಿತ್ರನು ವಸಿಷ್ಠನ ಮೇಲೆ ಹಟತೊಟ್ಟಿರಬೇಕು. ಆದ್ದರಿಂದ ವಸಿಷ್ಠನು ತಪಸ್ಸಿಗೆ ಹೋಗಿದ್ದ ಕಾಲವನ್ನು ಕಾದುಕೊಂಡಿದ್ದು ಆಗ (ಮಾರ್ಕಂಡೇಯಪುರಾಣ, ಅಧ್ಯಾಯ ೯; ಹರಿಶ್ಚಂದ್ರ ಕಾವ್ಯಸಂಗ್ರಹ, ೩-೫) ಮಾಡಿದ ಪ್ರಯತ್ನದಿಂದ ರಾಜ್ಯವು ಹರಿಶ್ಚಂದ್ರನ ಕೈತಪ್ಪಿ ಕೆಲವು ಕಾಲ, ಹಿಂದೆ ವಸಿಷ್ಠನ ಕೈಯಲ್ಲಿದ್ದಂತೆ, ವಿಶ್ವಾಮಿತ್ರನ ಕೈಯಲ್ಲಿದ್ದು, ಕೊನೆಗೆ ಸರ್ವಸಮ್ಮತಿಯಿಂದ ಹರಿಶ್ಚಂದ್ರನಿಗೋ ರೋಹಿತಾಶ್ವನಿಗೋ ಬಂತೆಂದು ಊಹಿಸಬಹುದು.

ಇದನ್ನು ಒಪ್ಪಿದರೆ, ಹರಿಶ್ಚಂದ್ರನಿಂದ ಸುಳ್ಳು ಹೇಳಿಸಬೇಕೆಂದೂ, ಅವನಿಗೆ ಚಂಡಾಲ ಸಹವಾಸ ಮಾಡಿಸಬೇಕೆಂದೂ ವಿಶ್ವಾಮಿತ್ರನು ತೊಟ್ಟ ಹಟವು ನೈಸರ್ಗಿಕವಾಗಿ ಕಾಣುತ್ತದೆ.

## ವರ್ಣನೆ

ರಾಘವಾಂಕನು ತತ್ವವಿವೇಚನೆಮಾಡಿ ಚರಿತ್ರೆ ಬರೆಯಲು ಹೊರಟವನಲ್ಲ; ತನ್ನ ಕಾಲದಲ್ಲಿದ್ದ ಪೌರಾಣಿಕ ಕಥೆಯನ್ನು ತೆಗೆದುಕೊಂಡು ಅದನ್ನು ಕಾವ್ಯವಾಗಿ ಬರೆದವನು. ಆದ್ದರಿಂದ ಅವನ ಗ್ರಂಥದಲ್ಲಿ ಪೌರಾಣಿಕ ಕಥಾಂಶಗಳ ಪರಿಪಾಕವೂ ಅದಕ್ಕೆ ಕಾವ್ಯದ

ಮೆರುಗೂ ಕಂಡುಬರುತ್ತವೆ. ರಸವತ್ತಾದ ಕಥನಕ್ರಮ, ಸ್ಫುಟವಾದ ಪಾತ್ರ ಪ್ರದರ್ಶನ, ನೈಸರ್ಗಿಕವಾದ ಸಂಭಾಷಣೆಗಳು, ಭಾವಪ್ರಪಂಚ ಬಾಹ್ಯಪ್ರಪಂಚಗಳ ಖಚಿತವಾದ ವರ್ಣನೆಗಳು, ಜೀವನ ವಿಮರ್ಶೆ, ಭಾಷೆ, ಶೈಲಿ ಇವುಗಳಲ್ಲಿ ಒಂದು ಅತಿಶಯವೂ ವ್ಯಕ್ತಿತ್ವವೂ ಕಂಡು ಬರುತ್ತವೆ. ಕಥನರೀತಿ ಪಾತ್ರಪ್ರದರ್ಶನಕ್ರಮ ಸಂಭಾಷಣೆಗಳ ಸ್ವರೂಪಗಳನ್ನು ಈ ಹಿಂದೆಯೇ ವಿವರಿಸಿದೆ. ಇಲ್ಲಿ ವರ್ಣನೆಯ ರೀತಿಯನ್ನು ಒಂದೆರಡು ಉದಾಹರಣೆಗಳಿಂದ ವಿವರಿಸಬಹುದು.

ಇದು ವಸಿಷ್ಠನ ವರ್ಣನೆ :—

ತಿಳಿಗೊಳನ ಬಳಸಿ ನಳನಳಿಸಿ ಬೆಳೆದೆಳಮಾವು
ಗಳ ತಳದ ಮಲ್ಲಿಕಾಮಂಟಪದ ತಣ್ಣೆಳಲ
ತೆಳುಗಾಳಿಯೊಳು ಪುಣ್ಯವಪ್ಪ ಪುಳಿನಸ್ಥಳದ ಮೇಲಶೋಕೆಯ ತರುವಿನ ।
ತಳಿರ ತೊಂಗಲ ಗದ್ದುಗೆಯೊಳೋಲಗಂಗೊಟ್ಟು
ಬಳಸಿ ಹಿಂದೆಡಬಲದೊಳಿಪ್ಪ ಮುನಿಗಳ ಕೂಡೆ
ನಲವಿನಿಂ ನುಡಿವ ಪಶುಪತಿಯಂತಿರಿರ್ದ ಮುನಿನಾಥ ಕಣ್ಗೆಸೆದಿರ್ದನು ॥

ಹ. ಕಾ. ಸಂಗ್ರಹ, ೩-೩೧

ಇದರಲ್ಲಿ ವಸಿಷ್ಠನ ಸಾತ್ವಿಕ ವೃತ್ತಿಯೂ ಶಾಂತಿಪ್ರೀತಿಗಳೂ ಅವಕ್ಕೆ ತಕ್ಕ ಮೃದುವಾದ ತಂಪಾದ ಬಾಹ್ಯ ಸನ್ನಿವೇಶವೂ ಉಚಿತವಾದ ಲಲಿತಪದಪುಂಜಗಳಿಂದಲೇ ಚಿತ್ರವಾಗಿವೆ.

ಇದು ಬೆಂಕಿಗೆ ಸಿಕ್ಕಿ ಸಾಯುವವರ ವರ್ಣನೆ :—

ಕಡಗಿ ಕರ್ಬೊಗೆ ಸುತ್ತಿ ದಳ್ಳುರಿಗಳೆಳೆದು ಕೆಂ
ಗಿಡಿಗೆದಱ್ ಕೆಂಡಂಗಳೆಡಸಿ ಸುಡೆ ಮಿಡುಮಿಡನೆ
ಮಿಡುಕಿ ಬಾಯ್ಬಿಟ್ಟೊಱಲಿ ಕೆಡೆದೊಡಲು ಮಡಿದು
ಕೈಕಾಲ್ ಬೆಂದು ಸುಕ್ಕಿ ಸುಗಿದು........॥

(ಹ. ಕಾ. ಸಂಗ್ರಹ, ೭. ೬.)

ಇದು ಕಾಳ್ಗಿಚ್ಚಿನ ಮತ್ತು ಅದಕ್ಕೆ ಸಿಕ್ಕಿದವರ ಹಲವು ಅವಸ್ಥೆಗಳನ್ನು, ಕರುಣಭಯಾನಕಗಳಿಗೆ ಉಚಿತವಾದ ಶಬ್ದಗಳಿಂದ ವಿವರಿಸುವುದಾಗಿದೆ.

ಅರ್ಥಕ್ಕೆ ಅನುರೂಪವಾದ ಶಬ್ದಾಕ್ಷರ ಪ್ರಯೋಗವು ಸಾಹಿತ್ಯದಲ್ಲಿ ಒಂದು ಗುಣವೆಂದು ಎಲ್ಲರೂ ಒಪ್ಪಿದ್ದಾರೆ. ಈ ಗುಣವು ಗಂಗಾನದಿಯ ವರ್ಣನೆಯಲ್ಲಿ ಚೆನ್ನಾಗಿ ಕಂಡುಬರುತ್ತದೆ.

ಘುಳುಘುಳಿಸಿ ಕವಿವ ತೆರೆಗಳು ಹಳಚಿ ಕುದಿದು ಬೊ
ಬ್ಬುಳಿಗುಡಲು ಮರಳಿ ಮೆಱೆಹಂ ಮೆಱೆದು ಮುರಿದಿಳಿದು
ಪೊಳೆವ ಸುಳಿಗಳ ಬಳಗಮಂ ಬಳಸಿ ಭೋರ್ಗರೆದು ಬೊಬ್ಬಿಡುವ.ತಳ್ಳಿವೊನಲು।
ಸೆಳೆದು ಕೈಯಿಂ ಹೊಯ್ಲ್ಲ ಹೋರಟೆಯೊಳುಕ್ಕಿ ಮು
ಮ್ಮುಳಿಪ ನೊರೆಬುದುಬುದವನೊಡೆಗಲಸಿ ಕದಡಿ ಕಣ್ಗ
ಳವಟ್ಟ ಲಹರಿಗಳ ಲಗ್ಗೆಯಿಂದೆಸೆವ ನದಿಯೊಪ್ಪವನದೇವೊಗಳ್ವೆನು ॥

(ಹರಿಶ್ಚಂದ್ರ ಕಾವ್ಯ, X ೨೯)

ಇದರಲ್ಲಿರುವ ಮಾತುಗಳೆಲ್ಲ ನೀರು, ನೊರೆ, ಅಲೆ, ಸುಳಿ, ಸೆಳವು, ಹೊಳವು ಹೊನಲುಗಳನ್ನು ಪ್ರತಿಬಿಂಬಿಸುವಂತಿವೆ.

ಪಿಡಿದ ಸಂಬಳಿಗೋಲು ಕಾರೊಡಲು ಕೆಂಗಣ್ಣು
ಕುಡಿದು ಕೊಬ್ಬಿದ ಬಸುಱು ದಡದಡಿಸಿ ತರಹರಿಸು
ವಡಿಯ ಕೆದಱಿದ ತಲೆಯನಡಸಿ ಸುತ್ತಿದ ಮುಪ್ಪುರಿಯ
ಬಾರಿ ಕಡ್ಡಣಿಗೆಯ।
ಬಿಡದೆ ಥಱ್ರನೆ ತೇಗಿ ನೆರವಿಯಂ ಬಯ್ವ........॥

ಎಂಬ ಪದ್ಯವು (ಸಂಗ್ರಹ, ೭-೩೧) ನಾಲ್ಕೈದು ಸಾಲಿನಲ್ಲಿ "ಬಿಱು ನುಡಿಯ ಕಲಿವೀರಬಾಹುಕನ" ಘೋರಚಿತ್ರವನ್ನು ಕಣ್ಣಿಗೆ ಕಟ್ಟುತ್ತದೆ.

ಅರಿರಾಯರೊಳು ಕಾದಿ ಮಡಿದಾತನಲ್ಲ ಮುನಿ
ವರರ ಯಾಗವ ಕಾದು ಮಡಿದಾತನಲ್ಲ ದೇ
ಪರಿಗೆ ಹಿತವಾಗಿ ಮಡಿದವನಲ್ಲ ಮಾಂಸದಾನವ ಬೇಡಿದರ್ಗೊಡಲನು।
ಅರಿದರಿದು ಕೊಟ್ಟು ಮಡಿದವನಲ್ಲ ಹುಲ್ಲಿಯಂ
ತರಹೋಗಿ ಕಾಡೊಳಗೆ ಬಡಹಾವು ಕಚ್ಚಿ ಮುನಿ
ವರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವರೇ........॥

ಎಂಬುದು ಧೀರೋದಾತ್ತ ಕ್ಷತ್ರಿಯನ ಮನೋಭಾವವನ್ನು ನೈಸರ್ಗಿಕ ವಾಗಿ ವರ್ಣಿಸುತ್ತದೆ.

ವಿಸ್ತಾರವಾದ ವರ್ಣನೆಗಳಲ್ಲಿ ಬೇಟೆ ಮತ್ತು ಚಂದ್ರಮತಿಯ ಗೋಳಾಟಗಳನ್ನು ಹೇಳಬಹುದು. ಈ ವಿಧವಾದ ವರ್ಣನೆಗಳು ಈಚಿನ ಜಯನೃಪಕಾವ್ಯ, ಚೆನ್ನಬಸವ ಪುರಾಣ, ಜೈಮಿನಿಭಾರತ-ಇವುಗಳಲ್ಲಿಯೂ ಕಂಡುಬರುತ್ತವೆ. ವರ್ಣನೆಗಳಲ್ಲಿ ಹೇಗೋ, ಅಲಂಕಾರ ಕವಿಸಮಯ ಚಮತ್ಕಾರಗಳಲ್ಲಿಯೂ* ಹಾಗೇ ರಾಘವಾಂಕನು ತನ್ನ ತರುವಾಯ ಬಂದ ಷಟ್ಪದಿಕರ್ತರಿಗೆ ಮಾರ್ಗದರ್ಶಕನಾದನೆಂದು ತೋರುತ್ತದೆ.

## ನೀತಿ

ಪ್ರಾಚೀನ ಕವಿಗಳು ಸಾಮಾನ್ಯವಾಗಿ ಕಾವ್ಯರಮಣೀಯತೆಯೊಂದನ್ನೇ, ನೀತಿ ವಿರಹಿತವಾದ ರಸಪುಷ್ಟಿಯೊಂದನ್ನೇ, ತಮ್ಮ ದೃಷ್ಟಿಯಲ್ಲಿಟ್ಟುಕೊಂಡು ಕಾವ್ಯ ಬರೆಯಲು ಹೊರಡುವವರಲ್ಲ ; ಜೀವನದಲ್ಲಿ ಹೇಗೋ ಕಾವ್ಯದಲ್ಲಿಯೂ ಹಾಗೇ ಶ್ರೇಯಃಕಾಂಕ್ಷಿಗಳು; ಶ್ರೇಯಸ್ಸಿಗೆ ಅವಿರುದ್ಧವಲ್ಲದ ಸೌಖ್ಯವನ್ನು ಬಯಸತಕ್ಕವರು. ಧರ್ಮಾನುಗತವಾದ ಆನಂದವನ್ನು ಬೋಧಿಸತಕ್ಕವರು. ಆದ್ದರಿಂದಲೇ ರಾಘವಾಂಕನು, ಶಿವಭಕ್ತನೂ ಸತ್ಯಸಂಧನೂ ಆದ ಹರಿಶ್ಚಂದ್ರನ ಕಥೆಯನ್ನು ತನ್ನ ಕಾವ್ಯಕ್ಕೆ ವಸ್ತುವಾಗಿ ತೆಗೆದುಕೊಂಡಿದ್ದಾನೆ. ಆದರೂ 'ತುದಿಮೊದಲ್ತನಕ ಹೇಳಿದ ಕಾವ್ಯರಸಫಲಂಗಳನು ಸವಿಸುವುದು' ಅವನ ಮುಖ್ಯ

೧. ಶಬರಜಾಲಮಂ ಖಗಹೃದಯಶೂಲಮಂ ಮೃಗದ ಕಡೆಗಾಲಮಂ (೩-೧೪)

೨. ಚೆಂದದಾನಂದದಿಂ ಬಂದು ವಂದಿಸಿ ಮುಂದೆ ನಿಂದೆಂದಿನಂದದಿಂದಿಂದು ಮುದದಿಂದ. (೩-೨೭)

೩. ಗರಳಗೊರಳವಸರಳ ಸರಳಂಗೆ ಮುನಿವಂತೆ ಯಿರುಳ ತಿರುಳಿನ ಹೊರಳಿಗಾ ತರಣಿ ಕೆರಳ್ವಂತೆ........(೪-೧೦)

೪. ನವಭಂಗ ಧರಿತೆಯಾಗಿಯು ನತರ ಜನನಭಂಗವನಳಿವಳತ್ಯಭೋಗಮನೆಯಾಗಿಯು ಸೋಂಕಿದವರಣತ್ಯಾಧ್ಯಗಮನಂ ಮಾಳ್ಪಳ್.

(ಹರಿಶ್ಚಂದ್ರಕಾವ್ಯ, ೫. ೩೧) ಇತ್ಯಾದಿ.

ಉದ್ದೇಶವೇ ಹೊರತು ಧರ್ಮೋಪದೇಶಗಳನ್ನು ಕೊಡುವುದಲ್ಲ; ಆದ್ದರಿಂದಲೇ ಗ್ರಂಥದ ಮಧ್ಯೆ, ಅವಕಾಶವಿರುವ ಕಡೆಯಲ್ಲಿಯೂ ಕೂಡ, ಎಲ್ಲಿಯೂ ಪುರಾಣ ಕಾವ್ಯಗಳಲ್ಲಿ ಕಂಡುಬರುವಂತೆ ವಿಸ್ತಾರವಾದ ಧರ್ಮೋಪನ್ಯಾಸಗಳಿಲ್ಲ. ಅವೆಲ್ಲದರ ಸಾರವಾಗಿ ಅವನು ಸತ್ಯದ ಮಹಿಮೆಯನ್ನು ಎತ್ತಿ ಹಿಡಿದಿದ್ದಾನೆ. ಸತ್ಯವು ಪರಮಾತ್ಮ ಸ್ವರೂಪ; 'ಹರನೆಂಬುದೇ ಸತ್ಯ, ಸತ್ಯವೆಂಬುದು ಹರನು' ಎಂದು ಶ್ರುತಿ ಸಾರುತ್ತದೆ; ಆ ವಾಕ್ಯವನ್ನು 'ನಿರುತಮಾಡಿದ ವೇದಪ್ರಮಾಣ ಪುರುಷ' ಹರಿಶ್ಚಂದ್ರ. ಸತ್ಯ, ದಾನ, ಶಾಂತಿ, ಕ್ಷಮೆ ಮುಂತಾದ ಗುಣಗಳಿಂದ ತುಂಬಿದ ಆತನ ಪುಣ್ಯ ಕಥೆಯನ್ನು ಕೇಳಿ 'ಆತನ ಪೊಗಳ್ದು ಜನ ಬದುಕಬೇಕೆಂಬುದು' ಅವನ ಆಶಯ. ಸತ್ಯವು ಧರ್ಮದ ಸಾರ; ಅದರಿಂದ ಇಹವೂ ಉಂಟು ಪರವೂ ಉಂಟು; ಹುಸಿಯೇ ಹೊಲೆ; 'ಅತಿ ಹುಸಿದನತಿ ಹೊಲೆಯ, ಹುಸಿಯದಿಹ ಹೊಲೆಯನುನ್ನತಯತಿವರಂ.* ಹುಸಿದು ಮಾಡುವ ಮಹಾಯಜ್ಞಶತವೈದೆ ಪಂಚಪಾತಕ, ಸತ್ಯವೆರಸಿದ ನ್ಯಾಯವದು ಲಿಂಗಾರ್ಚನೆ; ಶ್ರುತಿಮತವಿದು' ಎಂದು ಪಾರ್ವತೀಪತಿಯ ಬಾಯಲ್ಲಿ ಹೇಳಿಸಿದ್ದಾನೆ. 'ಅನೃತವಱಿಯದ ಹೊಲೆಯನಂ ನೆನೆಯೆ ಪುಣ್ಯ.' ಸತ್ಯವಿಲ್ಲದ ಕುಲಾಚಾರವು ಸದಾಚಾರವಲ್ಲ. 'ಘನ ಸತ್ಯವೇ ಜೀವವೆಂದಿರ್ದ ಹೊಲೆಯನ ಸೇವೆ ಗುರುಸೇವೆ, ಹೊಲೆವೇಷ ಪಾವನ ಪುಣ್ಯವೇಷ........' ಎಂಥ ಉತ್ತಮಕುಲದಲ್ಲಿ ಹುಟ್ಟಿದರೂ ತ್ರಿಶಂಕುವಿನಂತೆ 'ಅವಗುಣಂಗಳ ಸಂಗದಿಂ ಕುಲಂ ಹಸಗೆಟ್ಟು' ಚಂಡಾಲನಾಗಬಹುದು. ಅವನ ಹೊಟ್ಟೆಯಲ್ಲಿ ಹುಟ್ಟಿದವನಾದರೂ ಹರಿಶ್ಚಂದ್ರನಂಥವನು ಗುಣಸಾಹಚರ್ಯದಿಂದ, ಕೆಚ್ಚಲ ಮಾಂಸದ ಮೂಲಕ ಬಂದ ಹಾಲಿನಹಾಗೂ, ಜೇನುನೊಣದ ಮೂಲಕ ಬಂದ ಮಧುವಿನಹಾಗೂ, ಸರ್ವಗ್ರಾಹ್ಯನೂ ಪೂಜ್ಯನೂ ಆಗುತ್ತಾನೆ.

* ಈ ಸಂದರ್ಭದಲ್ಲಿ 'ಹಿರಿಯ ಮಾಹೇಶ್ವರ'ನಾದ ಕಂಬಳಿಯ ನಾಗಿದೇವನ ವೃತ್ತಾಂತವು ಜ್ಞಾಪಕಕ್ಕೆ ಬರುತ್ತದೆ. (ಬಸವರಾಜದೇವರ ರಗಳೆ, ಪುಟ ೩೭ ; ಬಸವಪುರಾಣ, ಸಂಧಿ ೫೫.)

ಆದ್ದರಿಂದ ಗುಣದ ಮುಂದೆ ಜಾತಿಕುಲಗಳಲ್ಲ. ಬ್ರಹ್ಮಋಷಿಯಾಗ ಬೇಕಾದರೆ ಒಳಗೆ ನಿರ್ಮಲವಾಗಬೇಕು; ಶಾಂತಿದಾಂತಿಗಳು ಬೇಕು.* ಅದಿಲ್ಲದೆ ಅತಿ ಕೋಪಾದಿಗಳಿದ್ದರೆ ಅದೇ 'ಮುನಿಗೆ ಹೊಲೆ.' ಇದು ಪ್ರಸಂಗ ಬಂದಾಗ ಅಲ್ಲಲ್ಲಿ ಹರಿಶ್ಚಂದ್ರ ಕಾವ್ಯವು ಮಾಡಿರುವ ಗುಣ ಕರ್ಮ ಜಾತಿ ಕುಲಾದಿಗಳ ಪರಿಶೀಲನೆ. ಇದು ಸರ್ವಸಮ್ಮತವೂ ಉದಾರವೂ ಆದ ಅಭಿಪ್ರಾಯವಾಗಿದೆ. ರಾಘವಾಂಕನು ಬಸವಣ್ಣನವರ ಪಂಥಕ್ಕೆ ಸೇರಿದ್ದನೋ ಬಿಟ್ಟಿದ್ದನೋ, † ಅಂತಶ್ಶುದ್ಧಿ ಸತ್ಯಸದಾಚಾರಾದಿಗಳನ್ನು ಅವರ ಉಪದೇಶಗಳಿಂದ ಉಜ್ಜ್ವಲ ಮಾಡಿಕೊಂಡನೋ ಬಿಟ್ಟನೋ ಈಗ ನಿರ್ಧರಮಾಡಿ ಹೇಳುವುದು ಸಾಧ್ಯವಲ್ಲದಿದ್ದರೂ, ಪೂರ್ವೋಕ್ತ ಗುಣಕರ್ಮ ಪರಿಶೀಲನೆಯಿಂದ, ಅವನು ವಿಚಾರಪರಿಪ್ಲುತವಾಗಿದ್ದ, ಸತ್ಯಧರ್ಮಗಳ ತಿರುಳನ್ನು ಕಾಣಬೇಕೆಂದಿದ್ದ ಸಿದ್ಧರಾಮ ಅಲ್ಲಮ ಬಸವೇಶ್ವರ ಮುಂತಾದ ಧರ್ಮಜ್ಯೋತಿಗಳ ಕಾಲದಲ್ಲಿ, ಜಾತಿ ಕುಲಗಳನ್ನು ಆತ್ಮಗುಣಗಳ ದೃಷ್ಟಿಯಿಂದ ತೀರ್ಮಾನ ಮಾಡಬೇಕೆಂಬ ಆ ಕಾಲದ ಉದಾರ ವಾತಾವರಣದಲ್ಲಿ, ಇದ್ದನೆಂದು ಹೇಳಬಹುದು.

ತಾವು ಸರಿಯೆಂದು ನಂಬಿದ ಅಭಿಪ್ರಾಯವನ್ನು ಮನೋವಾಕ್ಕಾಯಗಳಿಂದ ಸಾಧಿಸುತ್ತ, ತಮ್ಮ ಧ್ಯೇಯಸಾಧನೆಗಾಗಿ ಪಡಬಾರದ ಕಷ್ಟ

* ವಸಿಷ್ಠನ ಗುಣಗಳನ್ನು ಹೋಲಿಸಿ:—ನೀತಿ, ಶಾಂತಿ, ಭೂತದಯೆ, ಸ್ವಾತಂತ್ರ್ಯ ವೃತ್ತಿ ಇತ್ಯಾದಿ. (ಹ. ಕಾ. ಸಂಗ್ರಹ, ೨,೨೨)

† If they (ಹರೀಶ್ವರ, ರಾಘವಾಂಕ, ಕೆರೆಯ ಪದ್ಮರಸ) wrote in the reign of Narasimha I (1141—1173), they must belong to about that time (1165); but then they could scarcely have received their inspiration from Basava, and their works must be evidence of a general revival of Saivism, of which Basava's work was only a part. It would be otherwise if they lived under Narasimha II (1220—35) or Narasimha III (1254—1291)—*A History of Kanarese Literature by E. P. Rice* *pp. 43—44*

ಗಳನ್ನೆಲ್ಲಾ ಪಟ್ಟು ಕೊನೆಗೆ ಜೀವವನ್ನೂ ತೆತ್ತವರು ಚರಿತ್ರೆಗೆ ಅಪರಿಚಿತರಲ್ಲ. ಹರಿಶ್ಚಂದ್ರನು ಅಂಥವನೊಬ್ಬ ಮಹಾಪುರುಷ. ಅವನು ಕೇವಲ ಕವಿಕಲ್ಪನೆ, ಐತಿಹಾಸಿಕ ವ್ಯಕ್ತಿಯೇನಲ್ಲ ಎಂದುಕೊಂಡರೂ ಅವನ ಧ್ಯೇಯ, ಅವನ ಆದರ್ಶ, ಇವು ಕುಸಿಯುವಹಾಗಿಲ್ಲ. ಒಂದು ಸತ್ಕಾರ್ಯವನ್ನು ಹಿಡಿದರೆ, ಅದು ಎಷ್ಟು ಉತ್ತಮವಾಗಿರಲಿ, ಅದನ್ನು ಕೈಕೊಂಡವನು ಎಷ್ಟು ಒಳ್ಳೆಯವನಾಗಿರಲಿ, ಅದನ್ನು ಸಾಧಿಸಬೇಕಾದರೆ ಕಷ್ಟಗಳು ಒದಗಬಹುದು. 'ಶ್ರೇಯಾಂಸಿ ಬಹು ವಿಘ್ನಾನಿ'. ಕಷ್ಟ ಯಾರಿಗೂ ತಪ್ಪದು. ಅದು ನಮ್ಮ ದುಷ್ಕರ್ಮದಿಂದ ಬರುತ್ತದೆಯೋ, ವಿಧಿಯಿಂದ ಒದಗುತ್ತದೆಯೋ ಅಂತು ಕಷ್ಟ ಬರುತ್ತದೆ : ಅನಿರೀಕ್ಷಿತವಾಗಿ ಬರುತ್ತದೆ: ಅದು ಬಂದಾಗ ನಿರಾಶೆಗೂ ಚಾಪಲ್ಯಕ್ಕೂ ಒಳಗಾಗದೆ ಧರ್ಮದಲ್ಲಿದ್ದರೆ, ಬೆಟ್ಟದ ಹಾಗೆ ಕವಿದದ್ದು ಮಂಜಿನಹಾಗೆ ಕರಗಿಹೋಗುತ್ತದೆ. ಆ ಕಷ್ಟದಿಂದ ಬರುವ ಶಿಕ್ಷಣಾನುಭವದಲ್ಲಿ ಮನುಷ್ಯನು ತನ್ನ ಲೋಪದೋಷಗಳನ್ನು ಕಳೆದುಕೊಂಡು ಪುಟಕ್ಕೆ ಹಾಕಿ ತೆಗೆದ ಚಿನ್ನದಂತಾಗುತ್ತಾನೆ. ಹರಿಶ್ಚಂದ್ರನ ಕಥೆಯು ಇದಕ್ಕೆ ಒಂದು ಉತ್ತಮವಾದ ಉದಾಹರಣೆ.

## ಶೈಲಿ

ಹರಿಶ್ಚಂದ್ರಕಾವ್ಯದ ಪ್ರೌಢಿಮೆಯನ್ನೂ ಅಲಂಕಾರ ಚಮತ್ಕಾರಗಳನ್ನೂ ನೋಡಿದರೆ, ರಾಘವಾಂಕನು ಉಪಯೋಗಿಸಿರುವ ಸಂಸ್ಕೃತ ಪದಗಳು ಬಹು ಸುಲಭವಾದವು ಮತ್ತು ಕೇವಲ ಸ್ವಲ್ಪ ಎಂದು ಹೇಳಬಹುದು. ಇಂಥ ಸಂದರ್ಭಗಳಲ್ಲಿ ಲಕ್ಷ್ಮೀಶ ಮುಂತಾದವರು ಹೆಚ್ಚು ಕಠಿನವಾದ ಮತ್ತು ಅನೇಕ ಶಬ್ದಗಳನ್ನು ಉಪಯೋಗಿಸಿರುವುದರಿಂದ ಅವರ ಗ್ರಂಥಗಳು ಇಷ್ಟು ಸುಲಭ ಗ್ರಾಹ್ಯವಾಗಿಲ್ಲ. ರಾಘವಾಂಕನಿಗೆ ಸಂಸ್ಕೃತದಮೇಲೆ ದ್ವೇಷವಿತ್ತೆಂದಾಗಲಿ, ಕನ್ನಡದಮೇಲೆ ಅತಿಯಾದ ಮಮತೆಯಿತ್ತೆಂದಾಗಲಿ ಹೇಳುವುದಿಲ್ಲ; ಆಗಿನ ಕಾಲದಲ್ಲೇ ಮತ ವಿಚಾರಗಳೂ ಸಾಹಿತ್ಯವೂ ಜನಸಾಮಾನ್ಯದಲ್ಲಿ ಒಳಹೊಕ್ಕು ಅವರಿಗೆ ಸುಗಮವಾದ ರೂಪದಲ್ಲಿ ಪ್ರವಹಿಸುತ್ತಿದ್ದುವು. ಇದು ಸ್ಪಷ್ಟವಾಗಿಯೂ ವಿಶೇಷವಾಗಿಯೂ ಕಂಡುಬರುವುದು ಆಗಿನ ಕಾಲದ 'ವಚನ'ಗಳಲ್ಲಿ.

ರಾಘವಾಂಕನ ಮೂರು ಕಾವ್ಯಗಳು ವಾರ್ಧಕಷಟ್ಪದಿಯಲ್ಲಿವೆ. 'ಅನುಭವ ಶಿಖಾಮಣಿ'ಯನ್ನು (೧೭೫೮) ಬರೆದ ನಾರಸಿಂಹನು ತನ್ನ ಗ್ರಂಥವನ್ನು ರಾಘವಾಂಕನ ಶರಷಟ್ಪದಿರೂಪವಾದ ಗ್ರಂಥದ ಆಧಾರದ ಮೇಲೆ ಬರೆದುದಾಗಿ ಹೇಳುತ್ತಾನೆ. ಆದ್ದರಿಂದ ರಾಘವಾಂಕನು ಮಿಕ್ಕಾದ ಷಟ್ಪದಿಗಳಲ್ಲಿ ಗ್ರಂಥವನ್ನು ಬರೆದಿದ್ದರೂ ಬರೆದಿರಬಹುದು.* ಅಂತು ವಾರ್ಧಕಷಟ್ಪದಿಯನ್ನು ಬರೆಯುವುದರಲ್ಲಿ ಅವನು ಪಳಗಿದ ಕೈ ಎಂದು ಹೇಳಬಹುದು. ಪ್ರಾಸಕ್ಕೋಸ್ಕರವಾಗಲಿ, ಪಾದಪೂರಣಕ್ಕಾಗಲಿ ಅವನು ಎಲ್ಲಿಯೂ ಕಷ್ಟಪಟ್ಟಿರುವಂತೆ ತೋರುವುದಿಲ್ಲ. ಮಾತುಗಳ ಹೊಂದಿಕೆಯೂ ಜೋಡಣೆಯೂ ತುಂಬ ಚೆನ್ನಾಗಿವೆ.

ಷಟ್ಪದಿಯು ಅಚ್ಚಕನ್ನಡ ವೃತ್ತ—ಎಂದರೆ ಸಂಸ್ಕೃತದಿಂದ ತೆಗೆದುಕೊಂಡದ್ದಲ್ಲ. ರಾಘವಾಂಕನು ಇದನ್ನು ಹಿಡಿದಿರುವುದೂ ಆಗಿನ ಕಾಲದ ಸಾಹಿತ್ಯದ—ವಿಶೇಷವಾಗಿ ವೀರಶೈವ ಸಾಹಿತ್ಯದ-ಸರಳತೆಯನ್ನೂ ಜನಪ್ರಿಯತೆಯನ್ನೂ ತೋರಿಸುತ್ತದೆ ಎಂದು ಹೇಳಬಹುದು. ಇವೊತ್ತಿಗೂ ಜನಪ್ರಿಯವಾದ ಎಷ್ಟೋ ಹಾಡುಗಳೂ ಪದ್ಯಗಳೂ ಯಕ್ಷಗಾನಗಳೂ ಷಟ್ಪದಿ, ಸಾಂಗತ್ಯ, ಚೌಪದಿ, ತ್ರಿಪದಿ ಮುಂತಾದ ಕನ್ನಡ ವೃತ್ತಗಳಲ್ಲಿಯೇ ಇವೆ.

ರಾಘವಾಂಕನಿಗಿಂತ ಹಿಂದೆ ಬರೆದ ಕನ್ನಡ ಷಟ್ಪದಿಗ್ರಂಥಗಳು ದೊರೆತಿಲ್ಲ. ಅದುವರೆಗೆ ಆದ್ಯಂತವಾಗಿ ಅಚ್ಚಕನ್ನಡದ ವೃತ್ತಗಳನ್ನೇ ಉಪಯೋಗಿಸಿ ಪ್ರೌಢಕಾವ್ಯಗಳನ್ನು ಬರೆಯುತ್ತಿರಲಿಲ್ಲವೆಂದು ತೋರುತ್ತದೆ. ಚಂಪೂಕಾವ್ಯಗಳಿಗಿದ್ದ ವಿದ್ವದ್ಗೌರವವು ಅವಕ್ಕೆ ಇನ್ನೂ ಬಂದಿದ್ದಿರಲಾರದು. ಆದ್ದರಿಂದ ಹರೀಶ್ವನು 'ರಗಳೆಯ ಕವಿ' ಎಂಬ ಹಾಸ್ಯಕ್ಕೆ ಗುರಿಯಾಗಿದ್ದರೂ ಇದ್ದಿರಬಹುದು. ಅವನು 'ವಸ್ತುಕ' 'ವರ್ಣಕ' ಈ ಎರಡು ವಿಧವಾದ ಕಾವ್ಯವನ್ನೂ ಬರೆದು ಪ್ರಸಿದ್ಧನಾದನು. ರಾಘವಾಂಕನು 'ಉಭಯಕವಿಕಮಲರವಿ'ಯಾದ ಪಂಡಿತನಾಗಿದ್ದರೂ,

---

* ಕವಿಚರಿತೆ, I, ಪು. ೨೪೪. ವೀರೇಶಚರಿತೆಯು 'ಉದ್ದಂಡ ಷಟ್ಪದಿ'ಯಲ್ಲಿದೆ.

ಸಂಸ್ಕೃತ ಶಬ್ದಸಂಪತ್ತಿನಲ್ಲಿ ಹರೀಶ್ವರನಿಗೇನೂ ಕಡಮೆಯಿಲ್ಲದವನಾಗಿದ್ದರೂ, ತನ್ನ ಗ್ರಂಥಗಳನ್ನೆಲ್ಲಾ ಷಟ್ಪದಿಯಲ್ಲಿ 'ವರ್ಣಕ' ಕಾವ್ಯವಾಗಿ ಬರೆದಿರುವಂತೆ ತೋರುತ್ತದೆ. ಅವನು ಕನ್ನಡಿಗರಲ್ಲಿ ಬಳಕೆಯಾಗಿರುವ ಮಾತು ಕಥೆ, ಸಾಮತಿ, ಸಾದೃಶ್ಯಗಳನ್ನು ವಿಶೇಷವಾಗಿ ಉಪಯೋಗಿಸುತ್ತಾನೆ.* ಆದರೂ ಅವನಲ್ಲಿ ಚಂಪೂಕಾರರ ಮಾತಿನ ಬಿಗಿಯೂ ಸೌಷ್ಠವ ನಿಷ್ಕೃಷ್ಟತೆಗಳೂ ಕಂಡುಬರುತ್ತವೆಯೇ ಹೊರತು ಷಟ್ಪದಿಕಾರರ ಶೈಲಿಯಲ್ಲಿ ಪರಿಚಿತವಾದ ವಿಶೃಂಖಲತೆಯೂ ಸ್ವಾಚ್ಛಂದ್ಯವೂ ಕಂಡುಬರುವುದಿಲ್ಲ.

ರಾಘವಾಂಕನು ಷಟ್ಪದಿಯಲ್ಲಿಯೇ ತನ್ನ ಗ್ರಂಥಗಳನ್ನೆಲ್ಲಾ ಬರೆದು ಅವುಗಳಿಗೆ ಹೆಚ್ಚು ಪ್ರಾಶಸ್ತ್ಯಪ್ರಸಾರಗಳನ್ನು ತಂದದ್ದರಿಂದ 'ಈತನೇ ಅವುಗಳನ್ನು ನಿರ್ಮಿಸಿದವನು' ಎಂದು ಪ್ರತೀತಿ ಬಂದಿರುವಂತೆ ಕಾಣುತ್ತದೆ. ಆದರೆ ರಾಘವಾಂಕನು ಷಟ್ಪದಿಯನ್ನು 'ನಿರ್ಮಿಸಿದ'ನೆಂದು ಹೇಳುವುದಕ್ಕೆ ಸರಿಯಾದ ಆಧಾರವಿಲ್ಲ. ಸಾಂಗತ್ಯ, ತ್ರಿಪದಿ, ಚೌಪದಿ, ಮುಂತಾದವುಗಳಂತೆ ಷಟ್ಪದಿಯೂ ಅಚ್ಚಗನ್ನಡದ ಹಾಡುವೃತ್ತವಾಗಿದ್ದು ಬಹಳ ಹಿಂದಿನಿಂದಲೂ ಕನ್ನಡಿಗರಲ್ಲಿ ರೂಢವಾಗಿದ್ದಂತೆ ತೋರುತ್ತದೆ. ಆದರೆ ಅದು ರಾಘವಾಂಕನ ಕಾಲದವರೆಗೆ, ವಿಶೇಷವಾಗಿ ಪ್ರೌಢಕಾವ್ಯದಲ್ಲಿ, ಪ್ರಚಾರಕ್ಕೆ ಬಂದಿರಲಾರದು. ಈ ಕಾಲಕ್ಕೆ ಹಿಂದೆ ಇರುವ ಚಂಪೂಗ್ರಂಥ ಪ್ರಚುರತೆಯನ್ನು ನೋಡಿದರೆ ಹೀಗೆನ್ನಿಸುತ್ತದೆ. ಅಂಥ ಷಟ್ಪದಿಗ್ರಂಥಗಳಿದ್ದರೆ ಅವು ಇದುವರೆಗೆ ಸಿಕ್ಕಿಲ್ಲ.

ಷಟ್ಪದಿಯು ರಾಘವಾಂಕನ ಕಾಲಕ್ಕಿಂತ ಹಿಂದೆಯೇ ಕನ್ನಡದಲ್ಲಿ ಹುಟ್ಟಿ ಬೆಳೆದಿತ್ತು ಎಂಬುದಕ್ಕೆ ನಾಗವರ್ಮನ ಛಂದೋಂಬುಧಿಯೇ (ಸು. ೯೯೦) ಸಾಕ್ಷಿಯಾಗಿದೆ. ಆದರಲ್ಲಿ ಅವನು

* ತೂಕದ ಕೋಲ ತೊಲೆಯಾದಳು (೮–೪೮), ಸೀಗೆಯೊಳಗಣ ಬಾಳೆಯಾದುದು (೮–೧೦), ಕಡುಹಸಿದು ಕಸುಗಾಯನಗಿದ ಗಿಡಗಳ ಬಳಗದಂತೆ (೬-೪), ಹೇರನೊಪ್ಪಿಸಿದವಂಗೆಲ್ಲಿಯದು ಸುಂಕ ? (೫–೨೮), ತುಂಬಿದ ಬಂಡಿಗೆ ಮೊರಂ ದಿಮ್ಮಿತೇ ? (ಹ. ಕಾ. ೮–೨೬), ನಾಡ ಮದ್ದಂ ತಿಂದು ಕುತ್ತ ಕೆಡದಿರ ಬಹುದೆ ? (೬–೪೭), ಇತ್ಯಾದಿ.

" ಮದನವತಿಯಕ್ಕರಂ ಜಾ
ಪದಿ ಗೀತಿಕೆ ಯೇಳೆ ತಿವದಿಯುತ್ಸಾಹಂ ಷ ।
ಟ್ಪದಿಯಕ್ಕರಿಕೆ ಕರಂ ಚೆ
ಲ್ವಾದವಿದ ಛಂದೋವತಂಸಮುಬ್ಬದಳಾಕ್ಷೀ ॥

ಎಂದು ಕನ್ನಡ ವೃತ್ತಗಳ ಹೆಸರನ್ನೆಲ್ಲಾ ಹೇಳಿ ಅವುಗಳಿಗೆ ಲಕ್ಷಣವನ್ನೂ ಉದಾಹರಣೆಗಳನ್ನೂ ಕೊಟ್ಟಿದ್ದಾನೆ. ಈ ಪದ್ಯವು ಪ್ರಕ್ಷಿಪ್ತವೆಂದು ಹೇಳಲು ಸರಿಯಾದ ಪ್ರಮಾಣವಿಲ್ಲ. ನಾಗವರ್ಮನ ಕಾಲಕ್ಕೆ ಇದ್ದದ್ದು ಶರಷಟ್ಪದಿಯೊಂದೇ ಎಂದೂ, ಮೇಲಣ ಪದ್ಯದಲ್ಲಿ ' ಷಟ್ಪದಿ ' ಎಂದರೆ ಶರಷಟ್ಪದಿಯೊಂದೇ ಅರ್ಥವೆಂದೂ, ಕೆಲವರು ಅಭಿಪ್ರಾಯಪಡುತ್ತಾರೆ. (ಕರ್ಣಾಟಕ ಕಾವ್ಯಕಲಾನಿಧಿಯಲ್ಲಿ ಪ್ರಕಾಶಿತವಾದ ' ಛಂದೋಂಬುಧಿ' ಯ ಟಿಪ್ಪಣಿ, ಪುಟ ೩೩.) ಇದೂ, ಮಿಕ್ಕ ಷಟ್ಪದಿಗಳಿದ್ದಿದ್ದರೆ ಅವೂ, ಆಗ ಎಷ್ಟರ ಮಟ್ಟಿಗೆ ಪ್ರೌಢ ಕವಿಗಳಿಂದ ಸಾಹಿತ್ಯದಲ್ಲಿ ಪ್ರಯುಕ್ತವಾಗಿ ಲಕ್ಷಣ ಗ್ರಂಥಕಾರರಿಂದ ಪರಿಗೃಹೀತವಾಗಿದ್ದುವೋ ತಿಳಿಯದು. ಗ್ರಂಥಸ್ಥವಾಗಿರುವ ಪ್ರಯೋಗಗಳನ್ನೇ ಉದಹರಿಸುವುದು ಲಾಕ್ಷಣಿಕರ ಪದ್ಧತಿ. ಆದ್ದರಿಂದ ಮಿಕ್ಕ ಷಟ್ಪದಿಗಳು ನಾಗವರ್ಮನಿಗಿಂತ ಹಿಂದೆ ಹಾಡುಹಸೆಗಳಲ್ಲಿ ಮಾತ್ರ ಇದ್ದಿರಬಹುದು; ಅಥವಾ ಹನ್ನೆರಡು ಹದಿಮೂರನೆಯ ಶತಮಾನಗಳಲ್ಲಿ ' ವರ್ಣಕ ' ಕಾವ್ಯಗಳು ಪ್ರಚಾರಕ್ಕೆ ಬಂದ ಹಾಗೆಲ್ಲಾ ಹುಟ್ಟಿ ಬೆಳೆದು ಬಂದಿದ್ದರೂ ಬಂದಿರಬಹುದು. ಹೀಗೆ ಅವು ಹುಟ್ಟಿ ಬೆಳೆಯುವುದಕ್ಕೆ ಆಗ ಕೆಲವು ಆನುಕೂಲ್ಯಗಳೂ ಇದ್ದುವು. ಶರಷಟ್ಪದಿಯ ಮೇಲ್ಪಂಕ್ತಿ ಇತ್ತು; ಸಣ್ಣ ಪಾದದ ಒಂದೂವರೆಯಷ್ಟನ್ನೂ ಒಂದು ಗುರುವನ್ನೂ ಸೇರಿಸಿ ಒಂದು ದೊಡ್ಡ ಪಾದವನ್ನು ಮಾಡುವ ಪದ್ಧತಿ ಕಂದದಲ್ಲಿ ಇತ್ತು; ಪ್ರತಿಪಾದಕ್ಕೂ ನಾಲ್ಕು ನಾಲ್ಕು ಮಾತ್ರಾಗಣಗಳನ್ನು ಉಪಯೋಗಿಸಿ ರಚಿತವಾದ ರಗಳೆಗಳಿದ್ದುವು; ಪಾದಕ್ಕೆ ಇಪ್ಪತ್ತು ಮಾತ್ರೆಗಳುಳ್ಳ ಇಂಥ ಲಲಿತ ರಗಳೆಯನ್ನು ಹರಿಹರನು ' ಬಸವರಾಜದೇವ ರಗಳೆ 'ಯಲ್ಲಿ ಆಗಲೇ ಪೂರ್ಣಸ್ಥಲಗಳಲ್ಲಿ ಧಾರಾಳವಾಗಿ ಉಪಯೋಗಿಸಿದ್ದನು. ಇದಕ್ಕೂ ವಾರ್ಧಕ ಷಟ್ಪದಿಗೂ ಬಹಳ ದೂರವಿಲ್ಲ. (ಇದೇ ಈಗ ಅಂತ್ಯಪ್ರಾಸವಿಲ್ಲದೆ ' ಸರಳರಗಳೆ '

ಯೆಂದು 'ಯಮನ ಸೋಲು', 'ನಾಗರಿಕ' ಮುಂತಾದ ಕಾವ್ಯಗಳಲ್ಲಿ ಉಪಯೋಗಿಸಲ್ಪಡುತ್ತಿದೆ.) ಹರಿಹರನು ಟಕಾರಪ್ರಯೋಗದಲ್ಲಿ ಧೈರ್ಯ ಮಾಡಿದಂತೆ ಛಂದೋಮಾರ್ಗದಲ್ಲಿಯೂ ಧೈರ್ಯಮಾಡಿ, ಹಿಂದೆ ಪ್ರಾಸಂಗಿಕವಾಗಿ ಉಪಯೋಗದಲ್ಲಿದ್ದ ರಗಳೆಗೆ ಪ್ರಾಧಾನ್ಯವನ್ನು ಕೊಟ್ಟಮೇಲೆ, ಅವನ ಶಿಷ್ಯನಾದ ರಾಘವಾಂಕನು ಅಲ್ಲಿಂದ ಮುಂದಕ್ಕೆ ಮತ್ತೊಂದು ಹೆಜ್ಜೆಯಿಟ್ಟು ವಾರ್ಧಕ ಷಟ್ಪದಿಯನ್ನು ಕಲ್ಪಿಸಿಕೊಂಡಿದ್ದರೂ ಕಲ್ಪಿಸಿಕೊಂಡಿರಬಹುದು. (ಒಂದೊಂದು ಪದ್ಯದಿಂದ ಆಯಾ ಸಂಧಿಯ ಕಥಾಸಾರಾಂಶವನ್ನು ತಿಳಿಸುವ ಪದ್ಧತಿಯನ್ನೂ ಹರಿಹರನು ತನ್ನ ರಗಳೆಯ ಕಾವ್ಯದಲ್ಲಿ ಆಗಲೇ ತಂದಿದ್ದನು.) ಆದರೆ 'ಹರಿಶ್ಚಂದ್ರ ಕಾವ್ಯ'ದ ವಾರ್ಧಕಷಟ್ಪದಿಯು ಅನುಭವವಿಲ್ಲದವನ ಕೈಗೆ ಸಿಕ್ಕಿದ ಹೊಸ ಪ್ರಯೋಗವೆನ್ನಿಸುವುದಿಲ್ಲ. ಇದಿಷ್ಟರಿಂದಲೇ ಅವನ ಹಿಂದೆ ಇದು ಉಪಯೋಗದಲ್ಲಿತ್ತೆಂದು ಹೇಳಲೂ ಆಗದು. ಏಕೆಂದರೆ, ಛಂದಸ್ಸಿನ ತಾನವನ್ನೂ ದಾಟಿಯನ್ನೂ ಮನಗಂಡ ಭಾಷಾನಿಪುಣನು ಯಾವ ಹೊಸ ವೃತ್ತವನ್ನಾದರೂ ಹಳೆಯದರಷ್ಟೇ ಚೆನ್ನಾಗಿ ಬರೆಯುವನು.

ಹೀಗೆ ರಾಘವಾಂಕನು ಷಟ್ಪದಿನಿರ್ಮಾಪಕನೆಂದು ಹೇಳಲಾಗದಿದ್ದರೂ, ಷಟ್ಪದಿಸಂಪ್ರದಾಯ ಸ್ಥಾಪಕನೆಂದು ಹೇಳಬಹುದು. ಚಂಪೂ ಸಂಪ್ರದಾಯಕ್ಕೆ ಪಂಪಾದಿಯಾದ ಜೈನಕವಿಗಳು ಹೇಗೆ ಸ್ಥಾಪಕರಾದರೋ ಹಾಗೇ ಷಟ್ಪದಿ ಸಂಪ್ರದಾಯಕ್ಕೆ, ಅದರಲ್ಲಿಯೂ ವಾರ್ಧಕ ಷಟ್ಪದಿಯ ಸಂಪ್ರದಾಯಕ್ಕೆ, ರಾಘವಾಂಕಾದಿಯಾದ ವೀರಶೈವ ಕವಿಗಳು ಸ್ಥಾಪಕರಾದರೆಂದು ಹೇಳಬಹುದು. ಆದ್ದರಿಂದಲೇ ಇಲ್ಲಿಂದ ಮುಂದೆ ಬಂದ ಚೆನ್ನಬಸವಪುರಾಣ, ಜೈಮಿನಿಭಾರತ ಮುಂತಾದ ಪ್ರಸಿದ್ಧ ವಾರ್ಧಕ ಷಟ್ಪದಿಗ್ರಂಥಗಳೆಲ್ಲಾ ಭಾಷೆ ಶೈಲಿ ವರ್ಣನೆ ಅಲಂಕಾರ ಚಮತ್ಕಾರಗಳಲ್ಲಿ 'ಹರಿಶ್ಚಂದ್ರ ಚರಿತ್ರೆ'ಯನ್ನೇ ಹೋಲುತ್ತವೆ. ಚಂಪುಗಳ ಭಾಷೆ ಓಜಸ್ವಿಯಾದ ಸಂಸ್ಕೃತವನ್ನೂ ಬಿಕ್ಕಟ್ಟಾದ ಹಳಗನ್ನಡವನ್ನೂ ಬೆರಸಿ ಎರಕಹೊಯ್ದಂತಿರುತ್ತದೆ. ಷಟ್ಪದಿಗಳಲ್ಲಿ ಈ ಶೈಲಿ ಅಲ್ಲಲ್ಲಿ ಬಂದರೂ ಒಟ್ಟಿನಮೇಲೆ ಅರಳಿದ ಹೂಗೊಂಚಲಿನಲ್ಲಿರುವಂಥ ವಿಕಾಸ ಲಘುತ್ವ

ಮೃದುತ್ವಗಳೇ ಹೆಚ್ಚು. ಇದನ್ನು ಪಡೆಯಲು ಷಟ್ಪದಿಕರ್ತರು ಹಳಗನ್ನಡದಿಂದ ಮೊದಲುಮಾಡಿಕೊಂಡು ಹೊಸಗನ್ನಡದವರೆಗೆ ಪ್ರತಿಯೊಂದು ಕಾಲದ ರೂಪಗಳನ್ನೂ ಉಪಯೋಗಿಸುತ್ತಾರೆ. ಈ ಭಾಷಾಪದ್ಧತಿಯು 'ಹರಿಶ್ಚಂದ್ರ ಕಾವ್ಯ'ದಲ್ಲಿಯೇ ಕಂಡುಬರುತ್ತದೆ. ರಾಘವಾಂಕನು ತನ್ನ ಗುರುವನ್ನನುಸರಿಸಿ (ಗಿರಿಜಾಕಲ್ಯಾಣ. I, ೩೨) ಱ ೞ ಭೇದವನ್ನು ಬಿಟ್ಟಿದ್ದಾನೆ. ಪ್ರಾಸಸ್ಥಾನಗಳಲ್ಲಿ ಇವು ಬೆರೆದೇ ಬರುತ್ತವೆ. ಹರಿಶ್ಚಂದ್ರ (ಪುಟ ೨), ದೈವವ (೩), ಮಧ್ಯದೊಳು (೪), ದೇವರ್ಕು (೧೧೨), ಕಣ್ಣಲಿ (೯೬), ಸಾವಡಂ (೩), ಇರ್ದನು (೫), ಕಲಿತಂ (೬), ಕಾಣೆ (೧೦), ಸಾಧಿಸುವ (೨೭), ಹೇಳಿಗೆ (೪), ಬಿದ್ದು (೩೨), ಒಮ್ಮೆ (೬), ಕಲು (೭), ಹೊದ್ದು (೮), ಬಪ್ಪ (೧೦೪), ಇಹ (೧೦೨) ಮುಂತಾದ ಶಬ್ದ ರೂಪಗಳನ್ನೂ ಅಂಥವು ಎಷ್ಟು ಹೆಚ್ಚಾಗಿ ಬರುತ್ತವೆಂಬುದನ್ನೂ ನೋಡಿದರೆ ರಾಘವಾಂಕನು ಹಳಗನ್ನಡದ ರೂಪಗಳ ಜೊತೆಗೆ ನಡುಗನ್ನಡ ಹೊಸಗನ್ನಡ ರೂಪಗಳನ್ನು ವಿಶೇಷವಾಗಿ ಉಪಯೋಗಿಸುತ್ತಾನೆಂಬುದು ಗೊತ್ತಾಗುತ್ತದೆ. ಪ್ರೌಢಕವಿಗಳು ಹೀಗೆ ಹೊಸ ರೂಪಗಳು, ಹೊಸ ಪ್ರಯೋಗಗಳು, ಹೊಸ ರೂಢಿಗಳು ಮುಂತಾದವುಗಳನ್ನು ಹೆಚ್ಚು ಸ್ವಾತಂತ್ರ್ಯದಿಂದ ಪ್ರಚಾರಕ್ಕೆ ತಂದ ಹಾಗೆಲ್ಲಾ ಭಾಷೆಯು ಚಿಗುರಿ ಹಬ್ಬಿ ಬೆಳೆಯುತ್ತದೆ. ಷಟ್ಪದಿಕಾರರಿಗೆ ಇದಕ್ಕಾಗಿ ಬರುವ ಕೀರ್ತಿಯಲ್ಲಿ ಒಂದು ದೊಡ್ಡ ಭಾಗವು ಈ ಸಂಪ್ರದಾಯಕ್ಕೆ ಮೂಲಕರ್ತರಲ್ಲಿ ಒಬ್ಬನಾದ ರಾಘವಾಂಕನಿಗೆ ಸಲ್ಲತಕ್ಕದ್ದಾಗಿದೆ.

## ಉಪಸಂಹಾರ

ಹರಿಶ್ಚಂದ್ರನ ಕಥೆ ಬಹಳ ಹಳೆಯದಾದರೂ ರಾಘವಾಂಕನಿಗಿಂತ ಹಿಂದೆ ಈ ವಿಷಯವನ್ನು ಪ್ರತಿಪಾದಿಸಿ ಬರೆದ ಸಂಸ್ಕೃತ ಕನ್ನಡಕಾವ್ಯಗಳು ಬಹು ಅಪರೂಪ; ಅವನಿಗಿಂತ ಹಿಂದೆ ಕನ್ನಡದಲ್ಲಿ ಬರೆದವರು ಪ್ರಾಯಿಕವಾಗಿ ಜೈನರು; ಅವರು ತೀರ್ಥಂಕರಪುರಾಣಗಳನ್ನೇ ವಿಶೇಷವಾಗಿ ಬರೆದರು; ಸಂಸ್ಕೃತಸಾಹಿತ್ಯದಲ್ಲಿಯೂ ಈ ಕಥೆಯುಳ್ಳ ಪ್ರಸಿದ್ಧ ಕಾವ್ಯವೆಂದರೆ 'ಚಂಡಕೌಶಿಕನಾಟಕ' (೧೦ನೆಯ ಶತಮಾನ) ಒಂದೇ. ಇದು ಕಥೆಯಲ್ಲಿ ಮಾರ್ಕಂಡೇಯ ಪುರಾಣವನ್ನು ಹೋಲು

ತ್ತದೆ; ಇಲ್ಲಿ ವಸಿಷ್ಠ ವಿಶ್ವಾಮಿತ್ರರ ವ್ಯಾಜ್ಯವಿಲ್ಲ. 'ದುರ್ವಿಲಂಘ್ಯವಾದ ಪೂರ್ವ ಕರ್ಮ ಪರಿಪಾಕ'ದಿಂದ ಹರಿಶ್ಚಂದ್ರನಿಗೆ ಕಷ್ಟ ಪ್ರಾಪ್ತವಾಗುತ್ತದೆಂದೂ ಪ್ರಚಂಡಕೋಪಿಯಾದ ವಿಶ್ವಾಮಿತ್ರನು ಅದಕ್ಕೆ ನಿಮಿತ್ತ ಮಾತ್ರನಾಗುತ್ತಾನೆಂದೂ ಸೂಚಿತವಾಗಿದೆ. ಅದನ್ನು ಓದುತ್ತಓದುತ್ತ, ಈ ಅವನ ಮುಂಗೋಪವೇ ಅವನ ಜೀವಮಾನದ ಸೋಲಿಗೆಲ್ಲಾ ಕಾರಣವೆನ್ನಿಸುತ್ತದೆ. ಒಟ್ಟಿನಮೇಲೆ ಆ ನಾಟಕದಲ್ಲಿ 'ಚಂಡಕೌಶಿಕ'ನಿಗೇ ಪ್ರಾಶಸ್ತ್ಯ. ಹರಿಶ್ಚಂದ್ರನ ಸತ್ಯ ಧರ್ಮ ಶೀಲಗಳು ಆಶ್ಚರ್ಯಕರವಾಗಿ ಅವನಲ್ಲಿ ಗೌರವವನ್ನುಂಟುಮಾಡುವಂತಿದ್ದರೂ ಅಂಥ ಧರ್ಮವಂತನನ್ನೂ ಕೈಯಲ್ಲಿ ಹಿಡಿದು ಹಿಸುಕಿಬಿಡುವಂತಿರುವ ವಿಧಿರೂಪನಾದ ಆ 'ಚಂಡಕೌಶಿಕ' ನನ್ನು ಚಿತ್ರಿಸಬೇಕೆಂಬುದು ಕವಿಯ ಆಶಯ. ಅಂತು ಕೌಶಿಕನ ದೃಷ್ಟಿಯಿಂದ ನೋಡಲಿ, ಹರಿಶ್ಚಂದ್ರನ ದೃಷ್ಟಿಯಿಂದ ನೋಡಲಿ, ಈ ಕಥೆಯು ಪಾಶ್ಚಾತ್ಯ ಜಾತಿಯ ರುದ್ರನಾಟಕಕ್ಕೆ ಉತ್ತಮವಾದ ವಸ್ತು. ಶೋಕ ವೀರ ವೈರಾಗ್ಯಗಳನ್ನು ಪ್ರತಿಪಾದಿಸುವದಕ್ಕೆ ಇದರಲ್ಲಿ ಬೇಕಾದಷ್ಟು ಅವಕಾಶವಿದೆ. ಇಂಥ ಜನರಂಜಕವೂ ಲೋಕಪೂಜ್ಯವೂ ಆದ ಕಥೆಯನ್ನು ತೆಗೆದುಕೊಂಡು, ಅದನ್ನು ವೀರ ಕರುಣ ಪರಿಪೂರ್ಣವಾಗಿ, ಆದರೆ ಸುಗಮವಾದ ಷಟ್ಪದಿಕಾವ್ಯವಾಗಿ, ಬರೆದಿರುವ ಕೀರ್ತಿಯು 'ರಾಘವಾಂಕ ಪಂಡಿತ'ನದು. ಆತನ ಮೇಲ್ಪಂಕ್ತಿಯನ್ನು ಕಥಾನುಸರಣದಲ್ಲಲ್ಲದಿದ್ದರೆ ಕಾವ್ಯಪದ್ಧತಿಯಲ್ಲಾದರೂ ಈಚಿನ ಷಟ್ಪದಿಕಾವ್ಯಕರ್ತರು ಅನುವರ್ತಿಸಿಕೊಂಡು ಬಂದಿದ್ದಾರೆ *

* ಹರಿಶ್ಚಂದ್ರಕಾವ್ಯ ಸಂಗ್ರಹದ ಉಪೋದ್ಘಾತ, ೧೯೪೪. (ಮೊದಲನೆಯ ಮುದ್ರಣ, ೧೯೩೧.)

# ಅನುಬಂಧ

## ೧. ಸತ್ಯವ್ರತ ತ್ರಿಶಂಕುವಿನ ಕಥೆ

### ಹರಿವಂಶ, ಬ್ರಹ್ಮ, ಶಿವ ಪುರಾಣಗಳು–ವಾಯು, ಬ್ರಹ್ಮಾಂಡ, ಲಿಂಗ ಪುರಾಣಗಳು

ತಸ್ಯ ಸತ್ಯವ್ರತೋ ನಾಮ ಕುಮಾರೋಽಭೂನ್ಮಹಾಬಲಃ ।
ಪಾಣಿಗ್ರಹಣಮಂತ್ರಾಣಾಂ    ತೇನ ಭಾರ್ಯಾ ವಿದರ್ಭಸ್ಯ
ವಿಘ್ನಂ ಚಕ್ರೇ ಸ ದುರ್ಮತಿಃ ॥    ಹೃತಾ ಹತ್ವಾ ದಿವೌಕಸಃ ॥
ಯೇನ ಭಾರ್ಯಾ ಹೃತಾ ಪೂರ್ವಂ    ಪಾಣಿಗ್ರಹಣಮಂತ್ರೇಷು
ಕೃತೋದ್ವಾಹಾ ಪರಸ್ಯ ವೈ ।    ಸಪ್ತಾಮಪ್ರಾಪಿತೇಷ್ವಿಹ ।
ಬಾಲ್ಯಾತ್ ಕಾಮಾಚ್ಚ ಮೋಹಾಚ್ಚ    ಕಾಮಾದ್ಬಲಾಚ್ಚ ಮೋಹಾಚ್ಚ
ಸಂಹರ್ಷಾಚ್ಚಾಪಲೇನ ಚ ॥    ಸಂಹರ್ಷೇಣ ಬಲೇನ ಚ ॥
ಜಹಾರ ಕನ್ಯಾಂ ಕಾಮಾಚ್ಚ    ಭಾವಿನೋಽರ್ಥಸ್ಯ ಚ ಬಲಾತ್
ಕಸ್ಯಚಿತ್ಪುರವಾಸಿನಃ ।    ತತ್ಕೃತಂ ತೇನ ಧೀಮತಾ ।    ೫
ತಮಧರ್ಮೇಣ ಸಂಯುಕ್ತಂ ರಾಜಾ ತ್ರಯ್ಯಾರುಣೋಽತ್ಯಜತ್ ॥
ಅಪಧ್ವಂಸೇತಿ ಬಹುಶೋ ವದನ್ ಕ್ರೋಧಸಮನ್ವಿತಃ ।
ಪಿತರಂ ಸೋಽಬ್ರವೀತ್ ತ್ಯಕ್ತಃ ಕ್ವ ಗಚ್ಛಾಮೀತಿ ವೈ ಮುಹುಃ ॥
ಪಿತಾ ಚೈನಮಥೋವಾಚ ಶ್ವಪಾಕೈಸ್ಸಹ ವರ್ತಯ ।
ನಾಹಂ ಪುತ್ರೇಣ ಪುತ್ರಾರ್ಥೀ ತ್ವಯಾದ್ಯ ಕುಲಪಾಂಸನ ॥    ೧೦
ಇತ್ಯುಕ್ತಸ್ಸ ನಿರಾಕ್ರಾಮನ್ನಗರಾದ್ವಚನಾತ್ ಪಿತುಃ ।
ನ ಚೈನಂ ವಾರಯಾಮಾಸ ವಸಿಷ್ಠೋ ಭಗವಾನ್ ಋಷಿಃ ॥
ಸ ತು ಸತ್ಯವ್ರತೋ ಧೀಮಾನ್ ಶ್ವಪಾಕಾವಸಥಾಂತಿಕೇ ।
ಪಿತ್ರಾ ತ್ಯಕ್ತೋಽವಸದ್ವೀರಃ ಪಿತಾ ಚಾಸ್ಯ ವನಂ ಯಯೌ ॥
ತಸ್ಮಿಂಸ್ತು ವಿಷಯೇ ತಸ್ಯ ನಾವರ್ಷತ್ ಪಾಕಶಾಸನಃ ।
ಸಮಾ ದ್ವಾದಶ ಸಂಪೂರ್ಣಾಸ್ತೇನಾಧರ್ಮೇಣ ವೈ ತದಾ ॥
ದಾರಾಂಸ್ತು ತಸ್ಯ ವಿಷಯೇ ವಿಶ್ವಾಮಿತ್ರೋ ಮಹಾತಪಾಃ ।
ಸಂನ್ಯಸ್ಯ ಸಾಗರಾನೂಪೇ ಚಚಾರ ವಿಪುಲಂ ತಪಃ ॥
ತಸ್ಯ ಪತ್ನೀ ಗಲೇ ಬದ್ಧ್ವಾ ಮಧ್ಯಮಂ ಪುತ್ರಮೌರಸಂ ।
ಶೇಷಸ್ಯ ಭರಣಾರ್ಥಾಯ ವ್ಯಕ್ರೀಣಾದ್ಗೋಶತೇನ ವೈ ॥    ೧೦

ತಂ ತು ಬದ್ಧಂ ಗಳೇ ದೃಷ್ಟ್ವಾ ವಿಕ್ರಯಾರ್ಥಂ ನರೋತ್ತಮಃ ।
ಮಹರ್ಷಿಪುತ್ರಂ ಧರ್ಮಾತ್ಮಾ ಮೋಕ್ಷಯಾಮಾಸ ಸುವ್ರತಃ ॥
ಸತ್ಯವ್ರತೋ ಮಹಾಬಾಹುರ್ಭರಣಂ ತಸ್ಯ ಚಾಕರೋತ್ ।
ವಿಶ್ವಾಮಿತ್ರಸ್ಯ ತುಷ್ಟ್ಯರ್ಥಂ ಅನುಕಂಪಾರ್ಥಮೇವ ಚ ॥
ಸೋಽಭವದ್ಗಾಲವೋ ನಾಮ ಗಳೇ ಬಂಧಾನ್ಮಹಾತಪಾಃ ।
ಮಹರ್ಷಿಃ ಕೌಶಿಕೋ ಧೀಮಾಂಸ್ತೇನ ವೀರೇಣ ಮೋಕ್ಷಿತಃ ॥
ಸತ್ಯವ್ರತಸ್ತು ಭಕ್ತ್ಯಾ ಚ ಕೃಪಯಾ ಚ ಪ್ರತಿಜ್ಞಯಾ ।
ವಿಶ್ವಾಮಿತ್ರ ಕಳತ್ರಂ ಚ ಬಭಾರ ವಿನಯೇ ಸ್ಥಿತಃ ॥
ಹತ್ವಾ ಮೃಗಾನ್ ವರಾಹಾಂಶ್ಚ ಮಹಿಷಾಂಶ್ಚ ವನೇಚರಾನ್ ।
ವಿಶ್ವಾಮಿತ್ರಾಶ್ರಮಾಭ್ಯಾಸೇ ತನ್ಮಾಂಸಮನಯತ್ ತತಃ ॥
ಉಪಾಂಶುವ್ರತಮಾಸ್ಥಾಯ ದೀಕ್ಷಾಂ ದ್ವಾದಶವಾರ್ಷಿಕೀಂ ।
ಪಿತುರ್ನಿಯೋಗಾದಭಜನ್ನೃಪೇ ತು ವನಮಾಸ್ಥಿತೇ ॥
ಅಯೋಧ್ಯಾಂ ಚೈವ ರಾಷ್ಟ್ರಂ ಚ ತಥೈವಾಂತಃಪುರಂ ಮುನಿಃ ।
ಯಾಜ್ಯೋಪಾಧ್ಯಾಯಸಂಯೋಗಾತ್ ವಸಿಷ್ಠಃ ಪರ್ಯರಕ್ಷತ ॥
ಸತ್ಯವ್ರತಸ್ತು ಬಾಲ್ಯಾತ್ತು ಭಾವಿನೋಽರ್ಥಸ್ಯ ವೈ ಬಲಾತ್ ।
ವಸಿಷ್ಠೇಽಭ್ಯಧಿಕಂ ಮನ್ಯುಂ ಧಾರಯಾಮಾಸ ನಿತ್ಯದಾ ॥
ಪಿತ್ರಾ ಹಿ ತಂ ತದಾ ರಾಷ್ಟ್ರಾತ್ ಪರಿತ್ಯಕ್ತಂ ಸ್ವಮಾತ್ಮಜಂ ।
ನ ವಾರಯಾಮಾಸ ಮುನಿರ್ವಸಿಷ್ಠಃ ಕಾರಣೇನ ವೈ ॥
ಪಾಣಿಗ್ರಹಣಮಂತ್ರಾಣಾಂ ನಿಷ್ಠಾ ಸ್ಯಾತ್ ಸಪ್ತಮೇ ಪದೇ ।

| | |
|---|---|
| ಜಾನನ್ ಧರ್ಮಾನ್ವಸಿಷ್ಠಸ್ತು | ಜಾನನ್ ಧರ್ಮಾನ್ವಸಿಷ್ಠಸ್ತು |
| ನ ಮಾಂ ತ್ರಾತೀತಿ ಭೋ ದ್ವಿಜಾಃ | ನ ಚ ಮಂತ್ರಾನಿಹೇಚ್ಛತಿ ॥ |

ಇತಿ ಸತ್ಯವ್ರತೋ ರೋಷಂ ವಸಿಷ್ಠೇ ಮನಸಾಕರೋತ್ ।
ಗುಣಬುದ್ಧ್ಯಾ ತು ಭಗವಾನ್ ವಸಿಷ್ಠಃ ಕೃತವಾಂಸ್ತದಾ ॥
ನ ತು ಸತ್ಯವ್ರತಸ್ತಸ್ಯ ತಮುಪಾಂಶುಮಬುಧ್ಯತ ।
ತಸ್ಮಿನ್ನಪರಿತೋಷೋ ಯಃ ಪಿತುರಾಸೀನ್ಮಹಾತ್ಮನಃ ॥
ತೇನ ದ್ವಾದಶವರ್ಷಾಣಿ ನಾವರ್ಷತ್ ಪಾಕಶಾಸನಃ ।
ತೇನ ತ್ವಿದಾನೀಂ ವಹತಾ ದೀಕ್ಷಾಂ ತಾಂ ದುರ್ವಹಾಂ ಭುವಿ ॥

ಕುಲಸ್ಯ ನಿಷ್ಕೃತಿಸ್ತಸ್ಯ ಕೃತಾ ಸಾ ವೈ ಭವೇದಿತಿ ।
ನ ತಂ ವಸಿಷ್ಠೋ ಭಗವಾನ್ ಪಿತ್ರಾ ತ್ಯಕ್ತಂ ನ್ಯವಾರಯತ್ ॥
ಅಭಿಷೇಕ್ಷ್ಯಮ್ಯಹಂ ಪುತ್ರಂ   ಅಭಿಷೇಕ್ಷ್ಯಮ್ಯಹಂ ರಾಜ್ಯೇ
ಅಸ್ಯೇತ್ಯೇವಂಮತಿರ್ಮುನಿಃ   ಪಶ್ಚಾದೇನಮಿತಿ ಪ್ರಭುಃ ।
ಸ ತು ದ್ವಾದಶವರ್ಷಾಣಿ ದೀಕ್ಷಾಂ ತಾಮುದ್ವಹನ್ ಬಲೀ ॥

ಅವಿದ್ಯಮಾನೇ ಮಾಂಸೇ ತು ವಸಿಷ್ಠಸ್ಯ ಮಹಾತ್ಮನಃ ।
ಸರ್ವಕಾಮದುಘಾಂ ದೋಗ್ಧ್ರೀಂ ಸ ದದರ್ಶ ನೃಪಾತ್ಮಜಃ ॥
ತಾಂ ವೈ ಕ್ರೋಧಾಚ್ಚ ಮೋಹಾಚ್ಚ ಶ್ರಮಾಚ್ಚೈವ ಕ್ಷುಧಾನ್ವಿತಃ ।
ದಸ್ಯುಧರ್ಮಗತೋ ರಾಜಾ ಜಘಾನ ಬಲಿನಾಂ ವರಃ ॥
ಸ ತನ್ಮಾಂಸಂ ಸ್ವಯಂ ಚೈವ ವಿಶ್ವಾಮಿತ್ರಸ್ಯ ಚಾತ್ಮಜಾನ್ ।

ಭೋಜಯಾಮಾಸ ತಚ್ಛ್ರುತ್ವಾ ವಸಿಷ್ಠೋಽಪ್ಯಸ್ಯ ಚುಕ್ರುಧೇ ॥
ಪ್ರೋವಾಚ ಚೈವ ಭಗವಾನ್ ವಸಿಷ್ಠಸ್ತಂ ನೃಪಾತ್ಮಜಂ ।
ಪಾತಯೇಯಮಹಂ ಕ್ರೂರ ತವ ಶಂಕುಂ ಅಯೋಮಯಂ ॥
ಯದಿ ತೇ ದ್ವಾವಿಮೌ ಶಂಕೂ   ಯದಿ ತೇ ತ್ರೀಣಿ ಶಂಕೂನಿ
ನ ಸ್ಯಾತಾಂ ವೈ ಕೃತೌ ಪುನಃ ।   ನ ಸ್ಯುರ್ಹಿ ಪುರುಷಾಧಮ ॥
ಪಿತುಶ್ಚಾಪರಿತೋಷೇಣ ಗುರೋರ್ದೋಗ್ಧ್ರೀವಧೇನ ಚ ।

ಅಪ್ರೋಕ್ಷಿತೋಪಯೋಗಾಚ್ಚ ತ್ರಿವಿಧಸ್ತೇ ವ್ಯತಿಕ್ರಮಃ ॥
ಏವಂ ಸ ತ್ರೀಣಿ ಶಂಕೂನಿ ದೃಷ್ಟ್ವಾ ತಸ್ಯ ಮಹಾತಪಾಃ ।
ತ್ರಿಶಂಕುರಿತಿ ಹೋವಾಚ ತ್ರಿಶಂಕುಸ್ತೇನ ಸ ಸ್ಮೃತಃ ॥
ವಿಶ್ವಾಮಿತ್ರಸ್ತು ದಾರಾಣಾಂ ಆಗತೋ ಭರಣೇ ಕೃತೇ ।
ತತಸ್ತಸ್ಮೈ ವರಂ ಪ್ರಾದಾತ್ ಮುನಿಃ ಪ್ರೀತಸ್ತ್ರಿಶಂಕವೇ ।

ಛಂದ್ಯಮಾನೋ ವರೇಣಾಥ ವರಂ ವವ್ರೇ ನೃಪಾತ್ಮಜಃ ।
ಅನಾವೃಷ್ಟಿಭಯೇ ತಸ್ಮಿನ್ ಗತೇ ದ್ವಾದಶವಾರ್ಷಿಕೇ ॥
ಪಿತ್ರ್ಯೇಽಭಿಷಿಚ್ಯ ರಾಜ್ಯೇ ತು ಯಾಜಯಾಮಾಸ ತಂ ಮುನಿಃ ।
ಮಿಷತಾಂ ದೇವತಾನಾಂ ಚ ವಸಿಷ್ಠಸ್ಯ ಚ ಕೌಶಿಕಃ ॥
ಸಶರೀರಂ ತದಾ ತಂ ವೈ ದಿವಮಾರೋಪಯತ್ ಪ್ರಭುಃ ।

ಮಿಷತಸ್ತು ವಸಿಷ್ಠಸ್ಯ ತದದ್ಭುತಮಿವಾಭವತ್ ॥
ಅತ್ರಾಪ್ಯುದಾಹರಂತೀಮೌ ಶ್ಲೋಕೌ ಪೌರಾಣಿಕಾ ಜನಾಃ ।
ವಿಶ್ವಾಮಿತ್ರಪ್ರಸಾದೇನ ತ್ರಿಶಂಕುರ್ದಿವಿ ರಾಜತೇ ॥
ದೇವೈಸ್ಸಾರ್ಧಂ ಮಹಾತೇಜ್ಾನುಗ್ರಹಾತ್ ತಸ್ಯ ಧೀಮತಃ ।

---

## ೨. ಶುನಶ್ಶೇಪನ ಕಥೆ

( ಐತರೇಯಬ್ರಾಹ್ಮಣ ; ಪಂಚಿಕಾ ೭, ಅಧ್ಯಾಯ ೩ )

ಖಂಡ ೧

ಹರಿಶ್ಚಂದ್ರೋ ಹ ವೈಧಸ ಐಕ್ಷ್ವಾಕೋ ರಾಜಾಪುತ್ರ ಆಸ. ತಸ್ಯ ಹ ಶತಂ ಜಾಯಾ ಬಭೂವುಃ. ತಾಸು ಪುತ್ರಂ ನ ಲೇಭೇ. ತಸ್ಯ ಹ ಪರ್ವತ ನಾರದೌ ಗೃಹ ಊಷತುಃ. ಸ ಹ ನಾರದಂ ಪಪ್ರಚ್ಛ:—

ಯಂ ನ್ವಿಮಂ ಪುತ್ರಮಿಚ್ಛಂತಿ ಯೇ ವಿಜಾನಂತಿ ಯೇ ಚ ನ ।
ಕಿಂ ಸ್ವಿತ್ಪುತ್ರೇಣ ವಿಂದತೇ ತನ್ಮ ಆಚಕ್ಷ್ವ ನಾರದ ॥

ಇತಿ. ಸ ಏಕಯಾ ಪೃಷ್ಟೋ ದಶಭಿಃ ಪ್ರತ್ಯುವಾಚ :—

ಋಣಮಸ್ಮಿನ್ ಸಂನಯತ್ಯಮೃತತ್ವಂ ಚ ಗಚ್ಛತಿ ।
ಪಿತಾ ಪುತ್ರಸ್ಯ ಜಾತಸ್ಯ ಪಶ್ಯೇಚ್ಚೇಜ್ಜೀವತೋ ಮುಖಂ ॥
ಯಾವಂತಃ ಪೃಥಿವ್ಯಾಂ ಭೋಗಾ ಯಾವಂತೋ ಜಾತವೇದಸಿ ।
ಯಾವಂತೋ ಅಪ್ಸು ಪ್ರಾಣಿನಾಂ ಭೂಯಾನ್ಪುತ್ರೇ ಪಿತುಸ್ತತಃ ॥
ಶಶ್ವತ್ಪುತ್ರೇಣ ಪಿತರೋಽತ್ಯಾಯನ್ ಬಹುಲಂ ತಮಃ ।
ಆತ್ಮಾಹಿ ಜಜ್ಞ ಆತ್ಮನಃ ಸ ಇರಾವತ್ಯತಿತಾರಿಣೀ ॥
ಕಿಂ ನು ಮಲಂ ಕಿಮಜಿನಂ ಕಿಮು ಶ್ಮಶ್ರೂಣಿ ಕಿಂ ತಪಃ ।
ಪುತ್ರಂ ಬ್ರಹ್ಮಾಣ ಇಚ್ಛಧ್ವಂ ಸ ವೈ ಲೋಕೋಽವದಾವದಃ ॥
ಅನ್ನಂ ಹ ಪ್ರಾಣಃ ಶರಣಂ ಹ ವಾಸೋ
ರೂಪಂ ಹಿರಣ್ಯಂ ಪಶವೋ ವಿವಾಹಾಃ ।
ಸಖಾ ಹ ಜಾಯಾ ಕೃಪಣಂ ಹ ದುಹಿತಾ
ಜ್ಯೋತಿರ್ಹ ಪುತ್ರಃ ಪರಮೇ ವ್ಯೋಮನ್ ॥
ಪತಿರ್ಜಾಯಾಂ ಪ್ರವಿಶತಿ ಗರ್ಭೋ ಭೂತ್ವಾ ಸ ಮಾತರಂ ।
ತಸ್ಯಾಂ ಪುನರ್ನವೋ ಭೂತ್ವಾ ದಶಮೇ ಮಾಸಿ ಜಾಯತೇ ॥

ತಜ್ಜಾಯಾ ಜಾಯಾ ಭವತಿ ಯದಸ್ಯಾಂ ಜಾಯತೇ ಪುನಃ ।
ಆಭೂತಿರೇಷಾ ಭೂತಿರ್ಬೀಜಮೇತನ್ನಿಧೀಯತೇ ॥
ದೇವಾಶ್ಚೈತಾಮೃಷಯಶ್ಚ ತೇಜಃ ಸಮಭರನ್ಮಹತ್ ।
ದೇವಾ ಮನುಷ್ಯಾನಬ್ರುವನ್ನೇಷಾ ವೋ ಜನನೀ ಪುನಃ ॥
ನಾಪುತ್ರಸ್ಯ ಲೋಕೋಽಸ್ತೀತಿ ತತ್ಸರ್ವೇ ಪಶವೋ ವಿದುಃ ।
ತಸ್ಮಾತ್ತು ಪುತ್ರೋ ಮಾತರಂ ಸ್ವಸಾರಂ ಚಾಧಿರೋಹತಿ ॥
ಏಷ ಪಂಥಾ ಉರುಗಾಯಃ ಸುಶೇವೋ
ಯಂ ಪುತ್ರಿಣ ಆಕ್ರಮಂತೇ ವಿಶೋಕಾಃ ।
ತಂ ಪಶ್ಯಂತಿ ಪಶವೋ ವಯಾಂಸಿ ಚ
ತಸ್ಮಾತ್ತೇ ಮಾತ್ರಾಪಿ ಮಿಥುನೀಭವಂತಿ ॥

ಇತಿ ಹಾಸ್ಮಾ ಆಖ್ಯಾಯ.

ಖಂಡ ೨

ಅಥೈನಮುವಾಚ ವರುಣಂ ರಾಜಾನಮುಪಧಾವ ಪುತ್ರೋ ಮೇ ಜಾಯತಾಂ ತೇನ ತ್ವಾ ಯಜಾ ಇತಿ. ತಥೇತಿ ಸ ವರುಣಂ ರಾಜಾನಮುಪಸಸಾರ ಪುತ್ರೋ ಮೇ ಜಾಯತಾಂ ತೇನ ತ್ವಾ ಯಜಾ ಇತಿ, ತಥೇತಿ. ತಸ್ಯ ಹ ಪುತ್ರೋ ಜಜ್ಞೇ ರೋಹಿತೋ ನಾಮ. ತಂ ಹೋವಾಚಾಜನಿ ತೇ ವೈ ಪುತ್ರೋ ಯಜಸ್ವ ಮಾಽನೇನೇತಿ. ಸ ಹೋವಾಚ ಯದಾ ವೈ ಪಶುರ್ನಿರ್ದಶೋ ಭವತ್ಯಥ ಸ ಮೇಧ್ಯೋ ಭವತಿ. ನಿರ್ದಶೋಽನ್ವಸ್ತ್ವಥ ತ್ವಾ ಯಜಾ ಇತಿ, ತಥೇತಿ. ಸ ಹ ನಿರ್ದಶ ಆಸ. ತಂ ಹೋವಾಚ ನಿರ್ದಶೋಽನ್ವಭೂದ್ಯಜಸ್ವ ಮಾಽನೇನೇತಿ. ಸ ಹೋವಾಚ ಯದಾ ವೈ ಪಶೋರ್ದಂತಾ ಜಾಯಂತೇಽಥ ಸ ಮೇಧ್ಯೋ ಭವತಿ, ದಂತಾಽನ್ವಸ್ಯ ಜಾಯಂತಾಮಥ ತ್ವಾ ಯಜಾ ಇತಿ, ತಥೇತಿ. ತಸ್ಯ ಹ ದಂತಾ ಜಜ್ಞಿರೇ. ತಂ ಹೋವಾಚಾಜ್ಞತ ವಾ ಅಸ್ಯ ದಂತಾ ಯಜಸ್ವ ಮಾಽನೇನೇತಿ. ಸ ಹೋವಾಚ ಯದಾ ವೈ ಪಶೋರ್ದಂತಾಃ ಪದ್ಯಂತೇಽಥ ಸ ಮೇಧ್ಯೋ ಭವತಿ, ದಂತಾಽನ್ವಸ್ಯ ಪದ್ಯಂತಾಮಥ ತ್ವಾ ಯಜಾ ಇತಿ, ತಥೇತಿ. ತಸ್ಯ ಹ ದಂತಾಃ ಪೇದಿರೇ. ತಂ ಹೋ

ವಾಚಾಪತ್ಸತ ವಾ ಅಸ್ಯ ದಂತಾ ಯಜಸ್ವ ಮಾಽನೇನೇತಿ. ಸ ಹೋವಾಚ ಯದಾ ವೈ ಪಶೋರ್ದಂತಾಃ ಪುನರ್ಜಾಯಂತೇಽಥ ಸ ಮೇಧ್ಯೋ ಭವತಿ ದಂತಾನ್ವಸ್ಯ ಪುನರ್ಜಾಯಂತಾಮಥ ತ್ವಾ ಯಜಾ ಇತಿ, ತಥೇತಿ. ತಸ್ಯ ಹ ದಂತಾಃ ಪುನರ್ಜಜ್ಞಿರೇ. ತಂ ಹೋವಾಚಾಜ್ಞಾತ ವಾ ಅಸ್ಯ ಪುನರ್ದಂತಾ ಯಜಸ್ವ ಮಾಽನೇನೇತಿ. ಸ ಹೋವಾಚ ಯದಾ ವೈ ಕ್ಷತ್ರಿಯಃ ಸಾನ್ನಾಹುಕೋ ಭವತ್ಯಥ ಸ ಮೇಧ್ಯೋ ಭವತಿ, ಸನ್ನಾಹಂ ನು ಪ್ರಾಪ್ನೋತ್ವಥ ತ್ವಾ ಯಜಾ ಇತಿ, ತಥೇತಿ. ಸ ಹ ಸನ್ನಾಹಂ ಪ್ರಾಪತ್ತಂ ಹೋವಾಚ ಸನ್ನಾಹಂ ನು ಪ್ರಾಪ್ನೋದ್ಯಜಸ್ವ ಮಾಽನೇನೇತಿ. ಸ ತಥೇತ್ಯುಕ್ತ್ವಾ ಪುತ್ರಮಾಮಂತ್ರಯಾಮಾಸ, ತತಾಯಂ ವೈ ಮಹ್ಯಂ ತ್ವಾಮದದಾದ್ಧಂತ ತ್ವಯಾಹಮಿಮಂ ಯಜಾ ಇತಿ. ಸ ಹ ನೇತ್ಯುಕ್ತ್ವಾ ಧನುರಾದಾಯಾರಣ್ಯಮುಪಾತಸ್ಥೌ. ಸ ಸಂವತ್ಸರಮರಣ್ಯೇ ಚಚಾರ.

ಖಂಡ ೩

ಅಥ ಹೈಕ್ಷ್ವಾಕಂ ವರುಣೋ ಜಗ್ರಾಹ; ತಸ್ಯ ಹೋದರಂ ಜಜ್ಞೇ. ತದು ಹ ರೋಹಿತಃ ಶುಶ್ರಾವ. ಸೋಽರಣ್ಯಾದ್ ಗ್ರಾಮಮೇಯಾಯ; ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ :—

ನಾನಾಶ್ರಾಂತಾಯ ಶ್ರೀರಸ್ತೀತಿ ರೋಹಿತ ಶುಶ್ರುಮ ।
ಪಾಪೋ ನೃಷದ್ವರೋ ಜನ ಇಂದ್ರ ಇಚ್ಚರತಃ ಸಖಾ ॥

ಚರೈವೇತಿ. ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ದ್ವಿತೀಯಂ ಸಂವತ್ಸರಮರಣ್ಯೇ ಚಚಾರ. ಸೋಽರಣ್ಯಾದ್ ಗ್ರಾಮಮೇಯಾಯ; ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ :—

ಪುಷ್ಪಿಣ್ಯೌ ಚರತೋ ಜಂಘೇ ಭೂಷ್ಣುರಾತ್ಮಾ ಫಲಗ್ರಹಿಃ ।
ಶೇರೇಽಸ್ಯ ಸರ್ವೇ ಪಾಪ್ಮಾನಃ ಶ್ರಮೇಣ ಪ್ರಪಥೇ ಹತಾಃ ॥

ಚರೈವೇತಿ. ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ತೃತೀಯಂ ಸಂವತ್ಸರಮರಣ್ಯೇ ಚಚಾರ. ಸೋಽರಣ್ಯಾದ್ ಗ್ರಾಮಮೇಯಾಯ. ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ :—

ಆಸ್ತೇ ಭಗ ಆಸೀನಸ್ಯೋರ್ಧ್ವಸ್ತಿಷ್ಠತಿ ತಿಷ್ಠತಃ ।
ಶೇತೇ ನಿಪದ್ಯಮಾನಸ್ಯ ಚರಾತಿ ಚರತೋ ಭಗಃ ॥

ಚರೈವೇತಿ. ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ಚತುರ್ಥಂ ಸಂವತ್ಸರಮರಣ್ಯೇ ಚಚಾರ. ಸೋಽರಣ್ಯಾದ್ ಗ್ರಾಮಮೇಯಾಯ ; ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ :—

ಕಲಿಃ ಶಯಾನೋ ಭವತಿ ಸಂಜಿಹಾನಸ್ತು ದ್ವಾಪರಃ ।
ಉತ್ತಿಷ್ಠಂಸ್ತ್ರೇತಾ ಭವತಿ ಕೃತಂ ಸಂಪದ್ಯತೇ ಚರನ್ ॥

ಚರೈವೇತಿ. ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ಪಂಚಮಂ ಸಂವತ್ಸರಮರಣ್ಯೇ ಚಚಾರ. ಸೋಽರಣ್ಯಾದ್ ಗ್ರಾಮಮೇಯಾಯ. ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ :—

ಚರನ್ ವೈ ಮಧು ವಿಂದತಿ ಚರನ್ ಸ್ವಾದುಮುದುಂಬರಂ ।
ಸೂರ್ಯಸ್ಯ ಪಶ್ಯ ಶ್ರೇಮಾಣಂ ಯೋ ನ ತಂದ್ರಯತೇ ಚರನ್ ॥

ಚರೈವೇತಿ. ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ಷಷ್ಠಂ ಸಂವತ್ಸರಮರಣ್ಯೇ ಚಚಾರ. ಸೋಽಜೀಗರ್ತಂ ಸೌಯವಸಿಮೃಷಿಮಶನಯಾ ಪರೀತಮರಣ್ಯ ಉಪೇಯಾಯ. ತಸ್ಯ ಹ ತ್ರಯಃ ಪುತ್ರಾ ಆಸುಃ, ಶುನಃಪುಚ್ಛಃ ಶುನಃಶೇಪಃ ಶುನೋಲಾಂಗೂಲ ಇತಿ. ತಂ ಹೋವಾಚ ಋಷೇಽಹಂ ತೇ ಶತಂ ದದಾಮ್ಯಹಮೇಷಾಮೇಕೇನಾತ್ಮಾನಂ ನಿಷ್ಕ್ರೀಣಾ ಇತಿ. ಸ ಜ್ಯೇಷ್ಠಂ ಪುತ್ರಂ ನಿಗೃಹ್ಣಾನ ಉವಾಚ ನನ್ವಿಮಮಿತಿ, ನೋ ಏವೇಮಮಿತಿ ಕನಿಷ್ಠಂ ಮಾತಾ. ತೌ ಹ ಮಧ್ಯಮೇ ಸಂಪಾದಯಾಂಚಕ್ರತುಃ ಶುನಃಶೇಪೇ. ತಸ್ಯ ಹ ಶತಂ ದತ್ವಾ ಸ ತಮಾದಾಯ ಸೋಽರಣ್ಯಾದ್ ಗ್ರಾಮಮೇಯಾಯ. ಸ ಪಿತರಮೇತ್ಯೋವಾಚ, ತತ ಹಂತಾಹಮನೇನಾತ್ಮಾನಂ ನಿಷ್ಕ್ರೀಣಾ ಇತಿ. ಸ ವರುಣಂ ರಾಜಾನಮುಪಸಸಾರಾನೇನ ತ್ವಾ ಯಜಾ ಇತಿ, ತಥೇತಿ. ಭೂಯಾನ್ವೈ ಬ್ರಾಹ್ಮಣಃ ಕ್ಷತ್ರಿಯಾದಿತಿ ವರುಣ ಉವಾಚ. ತಸ್ಮಾ ಏತಂ ರಾಜಸೂಯಂ ಯಜ್ಞಕ್ರತುಂ ಪ್ರೋವಾಚ. ತಮೇತಮಭಿಷೇಚನೀಯೇ ಪುರುಷಂ ಪಶುಮಾಲೇಭೇ.

## ಖಂಡ ೪

ತಸ್ಯ ಹ ವಿಶ್ವಾಮಿತ್ರೋ ಹೋತಾಸೀಜ್ಜಮದಗ್ನಿರಧ್ವರ್ಯುರ್ವಸಿಷ್ಠೋ ಬ್ರಹ್ಮಾಯಾಸ್ಯ ಉದ್ಗಾತಾ ತಸ್ಮಾ ಉಪಾಕೃತಾಯ

ನಿಯೋಕ್ತಾರಂ ನ ವಿವಿದುಃ. ಸ ಹೋವಾಚಾಜೀಗರ್ತಃ ಸೌಯವಸಿ ರ್ಮಹ್ಯಮಪರಂ ಶತಂ ದತ್ತಾಹಮೇನಂ ನಿಯೋಕ್ಷ್ಯಾಮೀತಿ. ತಸ್ಮಾ ಅಪರಂ ಶತಂ ದದುಸ್ತಂ ಸ ನಿನಿಯೋಜ. ತಸ್ಮಾ ಉಪಾಕೃತಾಯ ನಿಯುಕ್ತಾಯಾಪ್ರೀತಾಯ ಪರ್ಯಗ್ನಿಕೃತಾಯ ವಿಶಸಿತಾರಂ ನ ವಿವಿದುಃ. ಸ ಹೋವಾಚಾಜೀಗರ್ತಃ ಸೌಯವಸಿರ್ಮಹ್ಯಮಪರಂ ಶತಂ ದತ್ತಾಹಮೇನಂ ವಿಶಸಿಷ್ಯಾಮೀತಿ. ತಸ್ಮಾ ಅಪರಂ ಶತಂ ದದುಃ. ಸೋಽಸಿಂ ನಿಃಶಾನ ಏಯಾಯ. ಅಥ ಹ ಶುನಃಶೇಪ ಈಕ್ಷಾಂಚಕ್ರೇಽ ಮಾನುಷಮಿವ ವೈ ಮಾ ವಿಶಸಿಷ್ಯಂತಿ, ಹಂತಾಹಂ ದೇವತಾ ಉಪಧಾವಾಮೀತಿ. ಸ ಪ್ರಜಾಪತಿಮೇವ ಪ್ರಥಮಂ ದೇವತಾನಾಮು ಪಸಸಾರ, ಕಸ್ಯ ನೂನಂ ಕತಮಸ್ಯಾಮೃತಾನಾಮಿತ್ಯೇತಯರ್ಚಾ. ತಂ ಪ್ರಜಾಪತಿರುವಾಚಾಗ್ನಿ ರ್ವೈ ನೇದಿಷ್ಠಸ್ತಮೇವೋಪಧಾವೇತಿ. ಸೋಽಗ್ನಿಮುಪಸಸಾರ, ಅಗ್ನೇರ್ವಯಂ ಪ್ರಥಮಸ್ಯಾಮೃತಾನಾಮಿತ್ಯೇ ತಯರ್ಚಾ. ತಮಗ್ನಿರುವಾಚ ಸವಿತಾ ವೈ ಪ್ರಸವಾನಾಮೀಶೇ, ತಮೇವೋಪಧಾವೇತಿ. ಸ ಸವಿತಾರ ಮುಪಸಸಾರ, ಅಭಿ ತ್ವಾ ದೇವ ಸವಿತರಿತ್ಯೇನ ತೃಚೇನ. ತಂ ಸವಿತೋವಾಚ, ವರುಣಾಯ ವೈ ರಾಜ್ಞೇ ನಿಯುಕ್ತೋಽಸಿ ತಮೇವೋಪಧಾವೇತಿ. ಸ ವರುಣಂ ರಾಜಾನಮುಪ ಸಸಾರಾತ ಉತ್ತರಾಭಿರೇಕತ್ರಿಂಶತಾ. ತಂ ವರುಣ ಉವಾಚಾಗ್ನಿ ರ್ವೈ ದೇವಾನಾಂ ಮುಖಂ ಸುಹೃದಯತಮಸ್ತನ್ನು ಸ್ತುಹ್ಯಥ ತ್ವೋತ್ಸ್ರ ಕ್ಷ್ಯಾಮ ಇತಿ. ಸೋಗ್ನಿಂ ತುಷ್ಟಾವಾತ ಉತ್ತರಾಭಿರ್ದ್ವಾವಿಂಶತ್ಯಾ. ತಮಗ್ನಿರುವಾಚ ವಿಶ್ವಾನ್ನು ದೇವಾನ್ ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ. ಸ ವಿಶ್ವಾನ್ ದೇವಾಂಸ್ತುಷ್ಟಾವ, ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ಇತ್ಯೇತಯರ್ಚಾ. ತಂ ವಿಶ್ವೇದೇವಾ ಊಚುರಿಂದ್ರೋ ವೈ ದೇವಾನಾಮೋಜಿಷ್ಠೋ ಬಲಿಷ್ಠಃ ಸಹಿಷ್ಠಃ ಸತ್ತಮಃ ಪಾರಯಿಷ್ಣು ತಮಸ್ತನ್ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ. ಸ ಇಂದ್ರಂ ತುಷ್ಟಾವ, ಯಚ್ಚಿದ್ಧಿ ಸತ್ಯ ಸೋಮಪಾ ಇತಿ ಚೈತೇನ ಸೂಕ್ತೇನೋತ್ತರಸ್ಯ ಪಂಚ ದಶಭಿಸ್ತಸ್ಮಾ ಇಂದ್ರಃ ಸ್ತೂಯಮಾನಃ ಪ್ರೀತೋ ಮನಸಾ ಹಿರಣ್ಯ ರಥಂ ದದೌ. ತಮೇತಯಾ ಪ್ರತೀಯಾಯ ಶಶ್ವದಿಂದ್ರ ಇತಿ. ತಮಿಂದ್ರ

ಉವಾಚಾಶ್ವಿನೌ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ. ಸೋಽಶ್ವಿನೌ ತುಷ್ಟಾವಾತ ಉತ್ತರೇಣ ತೃಚೇನ. ತಮಶ್ವಿನಾವೂಚತುರುಷಸಂ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ. ಸ ಉಷಸಂ ತುಷ್ಟಾವಾತ ಉತ್ತರೇಣ ತೃಚೇನ. ತಸ್ಯ ಹ ಸ್ಮರ್ಚ್ಯೃಚ್ಯುಕ್ತಾಯಾಂ ವಿಪಾಶೋ ಮುಮುಚೇ, ಕನೀಯ ಐಕ್ಷ್ವಾಕಸ್ಯೋದರಂ ಭವತ್ಯುತ್ತಮಸ್ಯಾಮೇವ ಚ್ಯೃಕ್ತಾಯಾಂ ವಿಪಾಶೋ ಮುಮುಚೇಽಗದ ಐಕ್ಷ್ವಾಕ ಆಸ ।

ಖಂಡ ೫

ತಮೃತ್ವಿಜ ಊಚುಸ್ತ್ವಮೇವ ನೋಽಸ್ಯಾಹ್ನಃ ಸಂಸ್ಥಾಮಧಿಗಚ್ಛೇತ್ಯಥ ಹೈತಂ ಶುನಃಶೇಪೋಽಂಜಃಸವಂ ದದರ್ಶ ತಮೇತಾಭಿಶ್ಚತಸೃಭಿರಭಿಸುಷಾವ, ಯಚ್ಚಿದ್ಧಿತ್ವಂ ಗೃಹೇ ಗೃಹ ಇತ್ಯಥೈನಂ ದ್ರೋಣಕಲಶಮಭ್ಯವನಿನಾಯ, ಉಚ್ಛಿಷ್ಟಂ ಚಮ್ವೋರ್ಭರೇತ್ಯೇತಯರ್ಚಾ. ಅಥ ಹಾಸ್ಮಿನ್ನನ್ವಾರಬ್ಧೇ ಪೂರ್ವಾಭಿಶ್ಚತಸೃಭಿಃ ಸ ಸ್ವಾಹಾಕಾರಾಭಿರ್ಜುಹವಾಂಚಕಾರ. ಅಥೈನಮವಭೃಥಮಭ್ಯವನಿನಾಯ ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನಿತ್ಯೇತಾಭ್ಯಾಮಥೈನಮತ ಊರ್ಧ್ವಮಗ್ನಿಮಾಹವನೀಯಮುಪಸ್ಥಾಪಯಾಂಚಕಾರ, ಶುನಶ್ಚಿಚ್ಛೇಪಂ ನಿದಿತಂ ಸಹಸ್ರಾದಿತ್ಯಥ ಹ ಶುನಃಶೇಪೋ ವಿಶ್ವಾಮಿತ್ರಸ್ಯಾಂಕಮಾಸಸಾದ. ಸ ಹೋವಾಚಾಜೀಗರ್ತಃ ಸೌಯವಸಿರ್ಋಷೇ ಪುನರ್ಮೇ ಪುತ್ರಂ ದೇಹೀತಿ. ನೇತಿ ಹೋವಾಚ ವಿಶ್ವಾಮಿತ್ರೋ ದೇವಾ ವಾ ಇಮಂ ಮಹ್ಯಮರಾಸತೇತಿ. ಸ ಹ ದೇವರಾತೋ ವೈಶ್ವಾಮಿತ್ರ ಆಸ. ತಸ್ಯೈತೇ ಕಾಪಿಲೇಯಬಾಭ್ರವಾಃ. ಸ ಹೋವಾಚಾಜೀಗರ್ತಃ ಸೌಯವಸಿಸ್ತ್ವಂ ವೇಹಿ ವಿಹ್ವಯಾವಹಾ ಇತಿ. ಸ ಹೋವಾಚಾಜೀಗರ್ತಃ ಸೌಯವಸಿಃ :—

ಆಂಗಿರಸೋ ಜನ್ಮನಾಸ್ಯಾಜೀಗರ್ತಿಃ ಶ್ರುತಃ ಕವಿಃ ।
ಋಷೇ ಪೈತಾಮಹಾತ್ತಂತೋರ್ಮಾಽಪಗಾಃ ಪುನರೇಹಿ ಮಾಂ ॥

ಇತಿ. ಸ ಹೋವಾಚ ಶುನಃಶೇಪಃ :—

ಅದರ್ಶುಸ್ತ್ವಾ ಶಾಸಹಸ್ತಂ ನ ಯಚ್ಛೂದ್ರೇಷ್ವಲಪ್ಸತ ।
ಗವಾಂ ತ್ರೀಣಿ ಶತಾನಿ ತ್ವಮವೃಣೀಥಾ ಮದಂಗಿರಃ ॥

ಇತಿ. ಸ ಹೋವಾಚಾಜೀಗರ್ತಃ ಸೌಯವಸಿಃ :—

ತದ್ವೈ ಮಾ ತಾತ ತಪತಿ ಪಾಪಂ ಕರ್ಮ ಮಯಾ ಕೃತಂ ।
ತದಹಂ ನಿಹ್ನವೇ ತುಭ್ಯಂ ಪ್ರತಿಯಂತು ಶತಾ ಗವಾಂ ॥

ಇತಿ. ಸ ಹೋವಾಚ ಶುನಃಶೇಪಃ :—

ಯಸ್ಸಕೃತ್ ಪಾಪಕಂ ಕುರ್ಯಾತ್ ಕುರ್ಯಾದೇನತ್ತತೋಽಪರಂ ।
ನಾಪಾಗಾಃ ಶೌದ್ರಾನ್ನ್ಯಾಯಾದಸಂಧೇಯಂ ತ್ವಯಾ ಕೃತಂ ॥

ಇತಿ. ಅಸಂಧೇಯಮಿತಿ ಹ ವಿಶ್ವಾಮಿತ್ರ ಉಪಪಪಾದ.

ಸ ಹೋವಾಚ ವಿಶ್ವಾಮಿತ್ರಃ :—

ಭೀಮ ಏವ ಸೌಯವಸಿಃ ಶಾಸೇನ ವಿಶಿಶಾಸಿಷುಃ ।
ಅಸ್ಥಾನ್ನೈತಸ್ಯ ಪುತ್ರೋ ಭೂರ್ಮಮೈವೋಪೇಹಿ ಪುತ್ರತಾಂ ॥

ಇತಿ. ಸ ಹೋವಾಚ ಶುನಃಶೇಪಃ :—

ಸ ವೈ ಯಥಾ ನೋ ಜ್ಞಪಯಾ ರಾಜಪುತ್ರ ತಥಾ ವದ ।
ಯಥೈವಾಂಗಿರಸಃ ಸನ್ನುಪೇಯಾಂ ತವ ಪುತ್ರತಾಂ ॥

ಇತಿ. ಸ ಹೋವಾಚ ವಿಶ್ವಾಮಿತ್ರಃ :—

ಜ್ಯೇಷ್ಠೋ ಮೇ ತ್ವಂ ಪುತ್ರಾಣಾಂ ಸ್ಯಾಸ್ತವ ಶ್ರೇಷ್ಠಾ ಪ್ರಜಾ ಸ್ಯಾತ್ ।
ಉಪೇಯಾ ದೈವಂ ಮೇ ದಾಯಂ ತೇನ ವೈ ತ್ವೋಪಮಂತ್ರಯ ॥

ಇತಿ. ಸ ಹೋವಾಚ ಶುನಃಶೇಪಃ :—

ಸಂಜ್ಞಾನಾನೇಷು ವೈ ಬ್ರೂಯಾತ್ ಸೌಹಾರ್ದ್ಯಾಯ ಮೇ ಶ್ರಿಯೈ ।
ಯಥಾಽಹಂ ಭರತಋಷಭೋಪೇಯಾಂ ತವ ಪುತ್ರತಾಂ ॥

ಇತಿ. ಅಥ ಹ ವಿಶ್ವಾಮಿತ್ರಃ ಪುತ್ರಾನಾಮಂತ್ರಯಾಮಾಸ:—

ಮಧುಚ್ಛಂದಾಃ ಶೃಣೋತನ ಋಷಭೋ ರೇಣುರಷ್ಟಕಃ ।
ಯೇ ಕೇ ಚ ಭ್ರಾತರಃ ಸ್ಥ ನಾಸ್ಮೈ ಜ್ಯೈಷ್ಠ್ಯಾಯ ಕಲ್ಪಧ್ವಂ ॥

ಇತಿ.

# ಮಲ್ಲಿಕಾರ್ಜುನ—ಒಂದು ಊಹೆ

೧

ಕಳೆದ ಏಪ್ರಿಲ್ ತಿಂಗಳು ಶೃಂಗೇರಿಗೆ ಹೋಗಿದ್ದು, ಆ ಊರಿನ ಪೇಟೆಯಿಂದ ದೇವಸ್ಥಾನದ ಕಡೆಗೆ ಬರುತ್ತಿದ್ದೆ. ನನ್ನ ಗುರುತಿನವರೊಬ್ಬರು ಎದುರಿಗೆ ಸಿಕ್ಕಿ 'ಏನು, ಬೆಟ್ಟಕ್ಕೆ ಹೋಗಿದ್ದಿರಾ?' ಎಂದು ಕೇಳಿದರು. ನಾನು 'ಇಲ್ಲ' ಎಂದು ಉತ್ತರ ಕೊಟ್ಟೆ. 'ನಿಮ್ಮ ಬಿಡಾರಕ್ಕೆ ಆಗಲೇ ಬಂದಿದ್ದೆ. ನೀವು ಬೆಟ್ಟಕ್ಕೆ ಹೋದಿರೆಂದು ಹೇಳಿದರಲ್ಲಾ ಮತ್ತೆ!' ಎಂದರು ಅವರು. 'ಹೌದು. ಮಲ್ಲಿಕಾರ್ಜುನ ದೇವಸ್ಥಾನಕ್ಕೆ ಹೋಗಿದ್ದೆ' ಎಂದೆ ನಾನು.

ಮಲ್ಲಿಕಾರ್ಜುನ ದೇವಸ್ಥಾನವು ಊರೊಳಗೆ ಒಂದು ಸಣ್ಣ ಗುಡ್ಡದ ಮೇಲೆ ಇದೆ: ಇದನ್ನು ಅಲ್ಲಿ 'ಬೆಟ್ಟ' ವೆನ್ನುತ್ತಾರೆ. ಬೆಟ್ಟವೆಂಬ ಹೆಸರಿಗೆ ಅಧಿಕಾರಿಯಾಗುವ ಔನ್ನತ್ಯ ಅದರಲ್ಲಿ ಇರಲಿಲ್ಲವೆಂದೋ, ಶೃಂಗೇರಿಯಲ್ಲಿ ಬೆಟ್ಟವೆಂದರೆ ತುಂಗಾ ನದಿಯ ಆಚೆಗೆ ಇರುವ ಶೃಂಗಧಾರಿಯಾದ ಉತ್ತುಂಗಪರ್ವತವೇ ಸರಿ ಎಂಬ ಪೂರ್ವಭಾವನೆಯಿಂದಲೋ ಅವರು 'ಬೆಟ್ಟ' ವೆಂದಾಗ ಮಲ್ಲಿಕಾರ್ಜುನ ದೇವಸ್ಥಾನವಿರುವ ಗುಡ್ಡವೇ ಅದಕ್ಕೆ ಅರ್ಥವಾಗಿರಬೇಕೆಂದು ಮೊದಲು ನನ್ನ ಮನಸ್ಸಿಗೆ ಹೊಳೆಯಲಿಲ್ಲ. ಮೈಸೂರಿನಲ್ಲಿ ಚಾಮುಂಡಿ ಬೆಟ್ಟವನ್ನೂ, ಚಿಕ್ಕಮಗಳೂರಿನಲ್ಲಿ ಚಂದ್ರದ್ರೋಣಪರ್ವತವನ್ನೂ ಸುಮ್ಮನೆ ಬೆಟ್ಟವೆಂಬ ಬಿಡಿ ಹೆಸರಿನಿಂದ ಕರೆಯುವಂತೆ ಇಲ್ಲಿಯವರೂ ಇದನ್ನು ಕರೆಯುತ್ತಾರೆಂದುಕೊಂಡೆ.

ಶೃಂಗೇರಿ ಈಗ ಪ್ರಸಿದ್ಧವಾಗಿರುವುದು ಅದರ ಮಠ, ವಿದ್ಯಾಶಂಕರ ದೇವಸ್ಥಾನ, ಶಾರದಾದೇವಸ್ಥಾನಗಳಿಗೆ. ಇವುಗಳಲ್ಲಿ ವಿದ್ಯಾಶಂಕರ ದೇವಸ್ಥಾನವೂ, ಶಾರದಾ ವಿಗ್ರಹವೂ ಹದಿನಾಲ್ಕನೆಯ ಶತಮಾನದವು; ಆದರೆ ಮಠವು ಹಿಂದಿನದು—ಶಂಕರಾಚಾರ್ಯರಿಂದ (ಎಂಟನೆಯ ಶತಮಾನದಲ್ಲಿ) ಸ್ಥಾಪಿತವಾದದ್ದು. ಅದಕ್ಕಿಂತಲೂ ಹಿಂದೆ ಶೃಂಗೇರಿಗೆ ಪ್ರಾಧಾನ್ಯವಿದ್ದದ್ದು ಏತರಿಂದ? ಅದು ಕಾಂಚಿ, ಬದರಿ, ಕಾಶಿ, ಜಗ

ನ್ನಾಥಗಳಿಗೆ ಸಮಾನವೆಂದು ಶಂಕರಾಚಾರ್ಯರು ಏಕೆ ಭಾವಿಸಿದರು? ಅದನ್ನು ಅಂಥ ಧರ್ಮಕ್ಷೇತ್ರವಾಗಿ ಮಾಡಿದ್ದ ದೇವತೆ ಯಾವುದು? ಪ್ರಾಯಶಃ ಇಲ್ಲಿಯ ಮಲ್ಲಿಕಾರ್ಜುನಲಿಂಗವೇ. ಇದರಲ್ಲಿ ವಿಭಾಂಡಕ ಋಷಿಗಳು ಐಕ್ಯವಾದರೆಂದೂ, ಈ ಬೆಟ್ಟದ ಮೇಲೆ ಅವರ ಆಶ್ರಮ ವಿತ್ತೆಂದೂ, ಅಲ್ಲಿ ಋಷ್ಯಶೃಂಗರು ಹುಟ್ಟಿದರೆಂದೂ, ಆದ್ದರಿಂದ ಮಲ್ಲಿಕಾರ್ಜುನ ಬೆಟ್ಟಕ್ಕೆ ಶೃಂಗಗಿರಿ ಎಂದು ಹೆಸರಾಗಿ ಆ ಹೆಸರೇ ಅದರ ಬುಡದಲ್ಲಿರುವ ಊರಿಗೆ ಬಂತೆಂದೂ ಹೇಳುತ್ತಾರೆ.

ಶೃಂಗಗಿರಿ (ಶೃಂಗೇರಿ) ಎಂಬ ಹೆಸರು ಹೇಗಾದರೂ ಹುಟ್ಟಿ ಬಂದಿರಲಿ, ಈ ಊರಿನ ಮಲ್ಲಿಕಾರ್ಜುನಲಿಂಗವು ಶಂಕರಾಚಾರ್ಯರಿಗಿಂತ ಹಿಂದೆಯೇ ಪ್ರಸಿದ್ಧವಾಗಿದ್ದಿರಬೇಕು; ಆದರಿಂದ ಶೃಂಗೇರಿಯು ಪ್ರಸಿದ್ಧವಾದ ಶೈವ ಕ್ಷೇತ್ರವಾಗಿದ್ದಿರಬೇಕು.

ಮಲ್ಲಿಕಾರ್ಜುನಲಿಂಗವು "ಬೆಟ್ಟ" ದ ಮೇಲಿರುವುದು ಶೃಂಗೇರಿಯಲ್ಲಿ ಮಾತ್ರವಲ್ಲ—ಮುಡುಕುತೊರೆ ಮುಂತಾದ ಹಲವು ಕಡೆಗಳಲ್ಲಿ. ಬೆಟ್ಟವೇ ಬಹುಮಟ್ಟಿಗೆ ಅದರ ಆವಾಸಸ್ಥಾನ. "ಗಿರಿ" ಮಲ್ಲಿಕಾರ್ಜುನವೆಂದೇ ಅದಕ್ಕೆ ಹೆಸರು.

ದಕ್ಷಿಣ ದೇಶದಲ್ಲೆಲ್ಲಾ ಅತ್ಯಂತ ಪ್ರಸಿದ್ಧವಾದ ಮಲ್ಲಿಕಾರ್ಜುನ ಲಿಂಗವೆಂದರೆ ಶ್ರೀಶೈಲದಲ್ಲಿರುವುದು. ಇದು ಬಹಳ ಪುರಾತನವಾದದ್ದೆಂದೂ, ಭರತಖಂಡದ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದೆಂದೂ, ಮಿಕ್ಕ ಮಲ್ಲಿಕಾರ್ಜುನಗಳೆಲ್ಲವೂ ಅಲ್ಲಿಂದ ತಂದು ಹುಟ್ಟಿಹಾಕಿಕೊಂಡವೆಂದೂ ನಂಬಿಕೆ. ಕನ್ನಡ ಸಾಹಿತ್ಯದಲ್ಲಿ ಶ್ರೀಶೈಲಕ್ಕೂ ಅಲ್ಲಿಯ ಮಲ್ಲಿಕಾರ್ಜುನಕ್ಕೂ ಬಹು ಪ್ರಾಶಸ್ತ್ಯವಿದೆ. ಸಿದ್ಧರಾಮ, ಅಲ್ಲಮ, ಮಹಾದೇವಿಯಕ್ಕ ಮುಂತಾದ ವೀರಶೈವ ವಿಭೂತಿ ವ್ಯಕ್ತಿಗಳನೇಕರು ಮಲ್ಲಿಕಾರ್ಜುನನ ಭಕ್ತರು. ಅವರಿಗಿಂತ ನೂರಾರು ವರ್ಷ ಹಿಂದೆ ಇದ್ದ ಶಂಕರಾಚಾರ್ಯರು, ತಿರುಜ್ಞಾನಸಂಬಂದರ್, ತಿರುನಾವುಕ್ಕರಸರ್, ಸುಂದರಮೂರ್ತಿ ನಾಯನಾರ್ ಮುಂತಾದವರೂ ಶ್ರೀಶೈಲಕ್ಕೆ ಯಾತ್ರೆ ಹೋಗಿ ಅಲ್ಲಿಯ ಮಲ್ಲಿಕಾರ್ಜುನನನ್ನು ಸ್ತುತಿಸಿದ್ದಾರೆ.

ಹೀಗೆ ಶ್ರೀಶೈಲವು ಸುಮಾರು ೧೨೦೦ ವರ್ಷಗಳ ಕೆಳಗೇ ದ್ರಾವಿ

ಡರಿಗೆ ಪವಿತ್ರವೆನಿಸಿದ ಪ್ರಸಿದ್ಧ ಶಿವಕ್ಷೇತ್ರವಾಗಿತ್ತು ; ಅದರ ಮಲ್ಲಿಕಾರ್ಜುನ ಭ್ರಮರಾಂಬೆಯರೂ ಪ್ರಸಿದ್ಧರಾಗಿದ್ದರು. ಅದಕ್ಕೂ ಎಷ್ಟು ಹಿಂದಿನಿಂದ ಇದು ಕ್ಷೇತ್ರವೆನಿಸಿಕೊಂಡಿತ್ತೋ. ಇಲ್ಲಿಪ್ಪ ಲಿಂಗವನ್ನು ಯಾರು ಪ್ರತಿಷ್ಠಿಸಿದರೋ ತಿಳಿಯದು ; ಅಂತು ಇದು ಅತ್ಯಂತ ಪ್ರಾಚೀನವೆಂಬುದೇನೋ ನಿಜ.

ಹಿಂದೆ ಈ ಕ್ಷೇತ್ರದಲ್ಲಿ "ಶಿಲಾದಮುನಿ ಎಂಬ ಋಷಿಯು ತಪಸ್ಸು ಮಾಡುತ್ತಿದ್ದನೆಂದೂ, ಒಂದು ದಿನ ಇವನು ಪತ್ನೀಸಮೇತನಾಗಿ ಸಂಧ್ಯಾಕಾಲ ಆನಂದದಿಂದ ಕಾಲ ಕಳೆಯುತ್ತಿದ್ದಾಗ ಎರಡು ಗೊರವಂಕ ಪಕ್ಷಿಗಳ ಮರಿಗಳನ್ನು ನೋಡಿ. ತನಗೂ ಸಂತಾನವಾಗಬೇಕೆಂಬ ಆಶೆಯುಂಟಾಯಿತೆಂದೂ, ಕೆಲವು ಕಾಲ ಈ ಪರ್ವತದಲ್ಲಿ ತಪಸ್ಸನ್ನಾಚರಿಸಿದ ಮೇಲೆ ಈಶ್ವರಾನುಗ್ರಹವಾಗಿ ಪರ್ವತ ಮತ್ತು ನಂದಿ ಎಂಬ ಇಬ್ಬರು ಮಕ್ಕಳು ಹುಟ್ಟಿದರೆಂದೂ, ಈ ಪೈಕಿ, ಹಿರಿಯ ಮಗನಾದ ಪರ್ವತನು ಶಿವನನ್ನು ಕುರಿತು ತಪಸ್ಸು ಮಾಡಿ ಈ ಪರ್ವತದಲ್ಲಿಯೇ ಶಿವನು ನೆಲಸಿರಬೇಕೆಂಬ ವರವನ್ನು ಪಡೆದನೆಂದೂ, ಅಂದಿನಿಂದಲೂ ಶಿವನು ಈ ಪರ್ವತದ ಮೇಲೆ ಲಿಂಗರೂಪವಾಗಿ ನೆಲಸಿದನೆಂದೂ ಆದ್ದರಿಂದ ಈ ಲಿಂಗಕ್ಕೆ ಪರ್ವತಲಿಂಗವೆಂಬ ಹೆಸರು ಬಂದಿತೆಂದೂ ಹೇಳುತ್ತಾರೆ. ಇನ್ನೂ ಒಂದು ಕಥೆ ಇದೆ. ವಸುಮತಿ ಎಂಬ ಋಷಿಕನ್ಯೆಯು ಈ ಕ್ಷೇತ್ರಕ್ಕೆ ಬಂದು, ಪರ್ವತಲಿಂಗವನ್ನು ಧ್ಯಾನಿಸಿ ತಪಸ್ಸನ್ನಾಚರಿಸಿದಳೆಂದೂ, ಈಶ್ವರನು ಪ್ರತ್ಯಕ್ಷನಾಗಿ ಆಕೆಗೆ ಶ್ರೀದೇವಿ ಎಂಬ ಹೆಸರು ಕೊಟ್ಟನೆಂದೂ, ಈ ಪರ್ವತವನ್ನೂ ಕೂಡ ಆಕೆಯ ಹೆಸರಿನಿಂದ ಪವಿತ್ರಗೊಳಿಸಲು ಆ ಲಿಂಗವನ್ನು ಶ್ರೀಶೈಲಲಿಂಗವೆಂಬುದಾಗಿ ಕರೆಯಬೇಕೆಂದು ಹೇಳಿದನೆಂದೂ ಹೇಳುತ್ತಾರೆ.

ಭಾರತೀಯ ಇತಿಹಾಸದಲ್ಲಿ ಮೌರ್ಯ ವಂಶಸ್ಥಾಪಕನೆಂದು ಪ್ರಸಿದ್ಧನಾದ ಚಂದ್ರಗುಪ್ತ ಚಕ್ರವರ್ತಿಯು ಶ್ರೀಶೈಲಕ್ಕೆ ಬಂದಿದ್ದನೆಂದೂ ಇವನ ಮಗಳಾದ ಚಂದ್ರಾವತಿಯು ಇಲ್ಲಿ ಲಿಂಗವನ್ನು ಮಲ್ಲಿಗೆ ಹುವಿನಿಂದ ಪೂಜೆ ಮಾಡಿದ್ದರಿಂದ ಈ ಲಿಂಗಕ್ಕೆ 'ಮಲ್ಲಿಕಾರ್ಜುನ' ಲಿಂಗವೆಂಬ ಹೆಸರು ಬಂದಿತೆಂದೂ, ಈಕೆಯು ಈ ಮಹಾ ಕ್ಷೇತ್ರದಲ್ಲಿ ಈಶ್ವರ

ನನ್ನು ಕುರಿತು ತಪಸ್ಸು ಮಾಡಿದಳೆಂದೂ, ಕಡೆಗೆ ಪರಶಿವನು ಇವಳಿಗೆ ಪ್ರತ್ಯಕ್ಷನಾದನೆಂದೂ, ಈಕೆಯು ಇಲ್ಲಿನ ಅಂಬೆಯಾದ ಭ್ರಮರಾಂಬೆ ಯಲ್ಲಿ ಐಕ್ಯವಾಗಿ ಹೋದಳೆಂದೂ ಮತ್ತೊಂದು ಕಥೆ ಇದೆ.''*

ಶ್ರೀಶೈಲ, ಮಲ್ಲಿಕಾರ್ಜುನ, ಭ್ರಮರಾಂಬಾ ಎಂಬಿವು ಸಂಸ್ಕೃತ ಶಬ್ದಗಳು. ಮೇಲೆ ಹೇಳಿದ ಕಥೆಗಳೂ ಇವುಗಳಿಗೆ ಸಂಸ್ಕೃತ ವ್ಯುತ್ಪತ್ತಿ ಯನ್ನೇ ಹೇಳುತ್ತವೆ. ಇದನ್ನು ಒಪ್ಪಿದರೆ ಸಂಸ್ಕೃತವನ್ನು ಆಡುವ ಅಥವಾ ಅರಿತ ಜನರು ದಕ್ಷಿಣ ದೇಶಕ್ಕೆ ಬಂದಮೇಲೆ ಇಲ್ಲಿನ ದೇವರೂ ದೇವಸ್ಥಾನವೂ ಹುಟ್ಟಿ ಇದು ಕ್ಷೇತ್ರವಾಗಿ ಪರಿಣಮಿಸಿದಂತೆ ಆಗುತ್ತದೆ. ಆದರೆ ಇದು ನಿಜವೇ? ಶ್ರೀಶೈಲ ಎಂಬ ಪದ ಸಂಸ್ಕೃತವಾದರೂ ಅದು ಹೇಳುವ ವಸ್ತು—ಬೆಟ್ಟ—ಸಂಸ್ಕೃತಜನರು ದಕ್ಷಿಣ ದೇಶಕ್ಕೆ ಬರುವು ದಕ್ಕೆ ಹಿಂದೆಯೇ ಇತ್ತು. ಆಗ ಅದನ್ನು ಜನರು ಏನೆಂದು ಕರೆಯುತ್ತಿ ದ್ದರು? ಆಗ ಅಲ್ಲಿ ದೇವರನ್ನು ಪೂಜಿಸುತ್ತಿದ್ದರೇ ಇಲ್ಲವೇ? ಇದ್ದರೆ ಅದಕ್ಕೆ ಏನು ಹೆಸರಿದ್ದಿರಬೇಕು?

ಭವ್ಯವಾದ ಪರ್ವತ, ಸುಂದರವಾದ ನದಿ, ರಮ್ಯವಾದ ವನ—ಇವು ಗಳಲ್ಲಿ ದೇವರನ್ನು ಕಂಡು ಪೂಜಿಸುವುದು ಇಂದಿನ ಪದ್ಧತಿಯೇನಲ್ಲ, ನಮ್ಮ ಜನರೊಬ್ಬರ ಸಂಪ್ರದಾಯವೊಂದೇ ಅಲ್ಲ. ಅದು ಮನುಷ್ಯ ಜಾತಿಗೇ ಬಂದ ಪ್ರವೃತ್ತಿಯಾಗಿ ಕಾಣುತ್ತದೆ. ಆದ್ದರಿಂದಲೇ ದೇಶಾಂತರ ಗಳಲ್ಲಿಯೂ ಹಿಂದಿನ ಸಂಸ್ಕೃತಿಯಲ್ಲಿ ಗಿರಿ ನದಿ ಗಹ್ವರಗಳಿಗೆ ಒಂದಲ್ಲ ಒಂದು ವಿಧವಾದ ಪೂಜ್ಯತೆ ಇದೆ.

ಈ ವಿಧವಾದ ಪ್ರಕೃತಿಪೂಜೆಗೆ ನಮ್ಮ ದೇಶ ಎತ್ತಿದ ಕೈ. ಇದನ್ನು ಆರ್ಯರು ಕಲಿಸಿಕೊಟ್ಟರೆಂದು ಭಾವಿಸಬೇಕಾಗಿಲ್ಲ. ಬಹುಶಃ ಯಾಜ್ಞಿಕವಲ್ಲದ, ಭಕ್ತಿ ಪ್ರಧಾನವಾದ, ಸೌಮ್ಯ ಪೂಜಾವಿಧಾನವು ದ್ರಾವಿಡರದು: ಶಿವಪೂಜೆ—ಲಿಂಗಪೂಜೆ—ಯಂತೂ ಅವರದೇ ಆಗಿ ಕಾಣುತ್ತದೆ. ಆದ್ದರಿಂದಲೇ ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತ ಜನ್ಯ ವಾದ, ಪ್ರಾಕೃತಜನ್ಯವಾದ, ಸಾಹಿತ್ಯ ಸ್ವಲ್ಪ ಕಾಲ ನಡೆದು ಬಂದ ಮೇಲೆ, ಹನ್ನೆರಡನೆಯ ಶತಮಾನದಲ್ಲಿ ದ್ರಾವಿಡ ಸಾಹಿತ್ಯದ ಮೂಲ

* 'ತಾಯಿನಾಡು' ೪–೫–೧೯೪೦.

ಲಕ್ಷಣಗಳು ಕಾಣುವುದರ ಜೊತೆಗೆ ಶಿವಭಕ್ತಿಯೂ ಹೊರಹೊಮ್ಮಿತು— ಇಷ್ಟಲಿಂಗಕ್ಕೆ ಪ್ರಾಧಾನ್ಯ ಬಂತು. ಅದಕ್ಕೆ ಮುಂಚೆ ತೀರ್ಥಕ್ಷೇತ್ರಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿದ್ದು 'ಬೆಟ್ಟದ ಲಿಂಗ' ಕ್ಕೆ ಹೆಚ್ಚಾಗಿ ಪೂಜೆಯು ಸಲ್ಲುತ್ತಿದ್ದಿರಬೇಕು. ಇಂಥ ಪರ್ವತ ಲಿಂಗಗಳಲ್ಲಿ ಶ್ರೀಶೈಲದ ಮಲ್ಲಿಕಾರ್ಜುನವು ಪ್ರಸಿದ್ಧವಾಗಿದ್ದದ್ದರಿಂದಲೇ ಅದಕ್ಕೆ ಪ್ರಾಶಸ್ತ್ಯವು ಉಳಿದುಬಂತು. ಪುರಾಣ ಕಾಲದಲ್ಲಿ ಸಂಸ್ಕೃತ ಜನರು ದಕ್ಷಿಣ ದೇಶಕ್ಕೆ ಬಂದು ಈ ಕ್ಷೇತ್ರಕ್ಕೆ ಇದ್ದ ಪ್ರಾಶಸ್ತ್ಯವನ್ನು ಒಪ್ಪಿಕೊಂಡು ಆ ದೇವರ ಮಹಿಮೆಯನ್ನು ಒಪ್ಪಿಕೊಂಡು, ತಮ್ಮ ಸಂಸ್ಕೃತಿಯನ್ನು ಹರಡಿರಬೇಕು. ಇದು ಹಿಂದಿನಿಂದಲೂ ಆರ್ಯಸಂಸ್ಕೃತಿಗೆ ನಡೆದು ಬಂದದ್ದೇ —ತನಗಿಂತ ಭಿನ್ನವಾದದ್ದನ್ನು ಒಪ್ಪಿಕೊಂಡು ಅದೂ ತನ್ನದೆಂದು ಹೇಳಿ ತನ್ನೊಳಗೆ ಸೇರಿಸಿಕೊಳ್ಳುವುದು ; ತಾನೂ ಉಳಿದು ಇತರರನ್ನೂ ಉಳಿಸಿಕೊಳ್ಳುವುದು, ಬಲಿತುಕೊಳ್ಳುವುದು.—ಕಂಡದ್ದನ್ನು ಗೆದ್ದು ಧ್ವಂಸಮಾಡಿ, ನಿರ್ನಾಮಮಾಡಿ, ತಾನೂ ನಿರ್ನಾಮವಾಗುವುದಲ್ಲ.

ಶ್ರೀಶೈಲ, ಮಲ್ಲಿಕಾರ್ಜುನ, ಎಂಬ ಹೆಸರುಗಳು ಬರಲು ಕಾರಣವೆಂದು ಉಕ್ತವಾದ ಮೇಲಣ ಕಥೆಗಳು ಕಲ್ಪಿತ ಕಥೆಗಳಾಗಿ ಕಾಣುತ್ತವೆ. ಶ್ರೀಶೈಲಕ್ಕೆ ಶಿಲಾದಋಷಿ ಮೂಲವಾಗಬೇಕಾಗಿಲ್ಲ ; ಶಿಲೆಯೇ ಸಾಕು. ಶಿಲಾದಋಷಿ ಬಂದರೆ ಅದು ಶೈಲಾದವಾಗಬೇಕಾದೀತು. ಚಂದ್ರಗುಪ್ತನು ದಕ್ಷಿಣ ದೇಶಕ್ಕೆ ಬಂದಿದ್ದನೆಂಬುದಕ್ಕೆ ಹಲವು ಕಡೆ ಆಧಾರಗಳು ದೊರೆಯುತ್ತಿದ್ದರೂ ಅವನ ಮಗಳೂ ಇಲ್ಲಿಗೆ ಬಂದಿದ್ದಳು, ಶ್ರೀಶೈಲದಲ್ಲಿ ಶಿವದೇವರನ್ನು ಮಲ್ಲಿಗೆ ಹೂವಿನಿಂದ ಪೂಜಿಸಿದ್ದಳು ಆದ್ದರಿಂದ ಅದಕ್ಕೆ ಮಲ್ಲಿಕಾರ್ಜುನ ಎಂದು ಹೆಸರು ಬಂತು ಎಂದು ಹೇಳುವುದು ಕ್ಲಿಷ್ಟಕಲ್ಪನೆಯಾಗುತ್ತದೆ. ಅದೂ ಆಗಲಿ ; 'ಮಲ್ಲಿಕಾ' ಶಬ್ದಕ್ಕೆ ಉಪಪತ್ತಿ ಬಂತೆನ್ನೋಣ. ಮಲ್ಲಿಗೆ ಇದ್ದ ಕಡೆ ಭ್ರಮರ ಇರುವುದು ಎಂದೂ ಒಪ್ಪೋಣ. ಆದರೆ 'ಅರ್ಜುನ' ಎಲ್ಲಿಂದ ಬಂದ? ಮಲ್ಲಿಗೆ ಹೂವಿಗೂ ಅರ್ಜುನನಿಗೂ * ಏನು ಸಂಬಂಧ? ಇವೆರಡೂ ಸೇರಿ

* 'ಅರ್ಜುನ ಅಥವಾ ಮದ್ದಿ ವೃಕ್ಷಗಳ ಹೂವುಗಳ ಬಣ್ಣದಂತಿರುವ ಮಲ್ಲಿಗೆಯ ಹೂವುಗಳಿಂದ ಶಿವನನ್ನು ಪೂಜಿಸಿದಳು' ಎಂದು ('ಶಿವಾನುಭವ,' ಸಂಪುಟ ೨, ಪುಟ ೧೭೦) ಹೇಳುವುದು ಇನ್ನೂ ಕ್ಲಿಷ್ಟವಾದ ಕಲ್ಪನೆ.

ದೇವರ ಹೆಸರು ಹೇಗಾಯಿತು? ಹೀಗೆ, ಸಂಸ್ಕೃತದ ವ್ಯುತ್ಪತ್ತಿ ಸಮಂಜಸ ವಾಗಿ ಕಾಣುವುದಿಲ್ಲ.

ಹಾಗಾದರೆ ಇವಕ್ಕೆ ದ್ರಾವಿಡ ಮೂಲಗಳಿರಬಹುದೇ? ಈ ಊಹೆಗೆ ಸ್ಥಳೀಯ ವಿದ್ಯಮಾನಗಳಿಂದ ಆಧಾರವೇನು ದೊರೆಯುತ್ತದೆ ನೋಡೋಣ :—

ಶ್ರೀಶೈಲವು ಇರುವುದು ಕರ್ನೂಲ್ ಡಿಸ್ಟ್ರಿಕ್ಟಿನಲ್ಲಿ; ಈ ಡಿಸ್ಟ್ರಿಕ್ಟಿನ ಮಧ್ಯದಲ್ಲಿ ದಕ್ಷಿಣೋತ್ತರವಾಗಿ ನಲ್ಲಮಲ, ಎಜ್ರ*ಮಲ ಎಂಬ ಎರಡು ಪರ್ವತ ಶ್ರೇಣಿಗಳು ಹಬ್ಬಿವೆ. ಇವುಗಳಲ್ಲಿ ಶ್ರೀಶೈಲವು ನಲ್ಲಮಲ ಶ್ರೇಣಿಯ ಒಂದು ಭಾಗ. ಸ್ಲೇಟು ಕಲ್ಲಿನಿಂದ ಕೂಡಿ ಕಪ್ಪಗಿರುವುದ ರಿಂದ ನಲ್ಲಮಲ (ಕರಿಯ ಬೆಟ್ಟ) ವೆಂದೂ ಕೆಂಗಲ್ಲಿನಿಂದ ಕೂಡಿ ಕೆಂಪ ಗಿರುವುದರಿಂದ ಎಜ್ರಮಲ (ಕೆಂಪು ಬೆಟ್ಟ) ವೆಂದೂ ಹೆಸರು ಬಂದಿದೆ ಎಂದು ಹೇಳುತ್ತಾರೆ. ಕರ್ನೂಲು ತೆಲುಗು ದೇಶ. ಅಲ್ಲಿ ಈಗ ತೆಲುಗು ಜನರೇ ಹೆಚ್ಚು.† ತೆಲುಗಿನಲ್ಲಿ 'ಬೆಟ್ಟ' ಕ್ಕೆ ಇರುವ ಶಬ್ದ 'ಕೊಂಡ.' ಮಲೈ ಎಂಬುದು ಮೂಲ ದ್ರಾವಿಡ ಶಬ್ದವಾದರೂ ತೆಲುಗಿನಲ್ಲಿ ಬಹಳ ಹಿಂದೆಯೇ ನಿಂತು ಹೋಗಿ ಕೆಲವು ಸಮಾಸ ಪದಗಳಲ್ಲಿ ಮಾತ್ರ ಅಪೂರ್ವವಾಗಿ ಪ್ರಯೋಗದಲ್ಲಿರುವಂತಿದೆ. ಕೊಂಡ ಎಂಬುದು ಸಾಮಾನ್ಯ ವಾಗಿ ರೂಢಿಯಲ್ಲಿರುವ ಶಬ್ದ. ಆದ್ದರಿಂದ ಈ ಜಿಲ್ಲೆಯಲ್ಲಿರುವ ಬೆಟ್ಟ ಗಳೂ ಬೆಟ್ಟಗಳಿರುವ ಅನೇಕ ಊರುಗಳೂ 'ಕೊಂಡ'ದಿಂದ ಮುಗಿಯು ತ್ತವೆ :—ಆನುಮಕೊಂಡ, ಕೋಟಕೊಂಡ, ದುರ್ಗಪುಕೊಂಡ, ಪತ್ತಿ ಕೊಂಡ, ಪುಲಿಕೊಂಡ, ಬೈರಸಿಕೊಂಡ, ಮಂಟಿಕೊಂಡ, ಮುರವಕೊಂಡ,

---

* ಇಲ್ಲಿ ನ್ಯಾಯವಾಗಿ ಜ಼ ಒತ್ತು ಇರಬೇಕು. ಆ ಮೊಳೆ ಇಲ್ಲದ್ದರಿಂದ ಹೀಗೆ ಅಚ್ಚುಮಾಡಿದೆ.

| | |
|---|---|
| † ತೆಲುಗರು | ೬,೭೩,೫೪೭ |
| ಕನ್ನಡಿಗರು | ೩,೦೨,೫೪ |
| ತಮಿಳರು | ೧,೧೬,೫೩ |
| ಮಲಯಾಳರು | ೧೨ |

—ಕರ್ನೂಲ್ ಡಿಸ್ಟ್ರಿಕ್ಟಿನ ಕೈಪಿಡಿ, ಪುಟ ೬.

ಇತ್ಯಾದಿ. 'ಮಲ' ಶಬ್ದ ಅರ್ಥವಾಗದೆ, ಮೇಲೆ ಹೇಳಿದ ಬೆಟ್ಟದ ಸಾಲುಗಳನ್ನು ಆ ಪ್ರಾಂತದಲ್ಲಿ ನಲ್ಲಮಲ ಕೊಂಡ, ಎಱ್ರಮಲ ಕೊಂಡ ಎಂದು ಕರೆಯುತ್ತಾರೆ. ಇದು ಬೆಟ್ಟದ ಮೇಲೆ ಬೆಟ್ಟವನ್ನು ಇಡುವ ಕೆಲಸ. ಆದ್ದರಿಂದ ನಲ್ಲಮಲ, ಎಱ್ರಮಲ ಎಂಬ ಹೆಸರುಗಳು ಬಹಳ ಪ್ರಾಚೀನವಾಗಿ ಕಾಣುತ್ತವೆ. ಇವಕ್ಕೆ ಪೂರ್ವ ರೂಪಗಳು ನಲ್ಲಮಲ್ಯೈ ಎಱ್ರಮಲ್ಯೈ. ಎಱ್ರ * ಎಂದರೆ ಕೆಂಪು ಎಂದೇನೋ ಅರ್ಥ ಸರಿ. ಆದರೆ ನಲ್ಲ ಎಂದರೆ ತೆಲುಗಿನಲ್ಲಿ ಈಗ ಇರುವಂತೆ ಕಪ್ಪು ಎಂದೇ ಅರ್ಥವೇ? 'ನಲ್' ಎಂಬ ದ್ರಾವಿಡ ಧಾತುವಿಗೆ ಒಳ್ಳೆಯದು ಎಂದು ಅರ್ಥ. ಈ ಅರ್ಥ ತಮಿೞಿನಲ್ಲಿಯೂ ಕನ್ನಡದಲ್ಲಿಯೂ ನಲ್ಲ, ನಲಿ, ನಲವು ಮುಂತಾದ ಪದಗಳಲ್ಲಿ ಕಂಡುಬರುತ್ತದೆ. ತೆಲುಗಿನಲ್ಲಿಯೂ ಹಿಂದೆ ಈ 'ನಲ್' ಧಾತುವಿದ್ದು ಅವಕ್ಕೆ ಶುಭ, ಶ್ರೇಷ್ಠ, ಸಂತೋಷಕರ ಎಂದು ಅರ್ಥವಾಗಿ ಅದು 'ನಲುಗು' ಮುಂತಾದ ಪದಗಳಲ್ಲಿ ಕಂಡುಬರುತ್ತದೆ. ಆ ಅರ್ಥ ನಲ್ಲಮಲದಲ್ಲಿಯೂ ಇದ್ದಿರಬಹುದೇ? ಅಥವಾ ಅದರ ಪ್ರಾಚೀನ ರೂಪವು ನಲ್ಲಮಲ್ಯೈ, ನಲ್ಮಲ್ಯೈ ಎಂದಿದ್ದು 'ಶ್ರೀಶೈಲ' ಎಂಬುದು ಅದರ ಸಂಸ್ಕೃತ ಭಾಷಾಂತರವಾಗಿರಬಹುದೇ? ಅಥವಾ ನಲ್ಲಮಲ ಪ್ರಾಂತದಲ್ಲಿ ಅದನ್ನು (ಶೃಂಗೇರಿಯಲ್ಲಿರುವಂತೆ) ಸುಮ್ಮನೆ ಬೆಟ್ಟ ಎಂದು ವ್ಯವಹರಿಸುತ್ತಿದ್ದು, 'ಮಲ್ಯೈ' ಎಂಬುದಷ್ಟನ್ನು 'ಶೈಲ' ಎಂದು ಭಾಷಾಂತರಿಸಿ ಹಿಂದೆ ಶ್ರೀಕಾರ ಸೇರಿಸಿದ್ದಿರಬಹುದೋ?

ಇದು ಅಸಂಭವವಲ್ಲ. ಈ ವಿಧವಾದ ಪ್ರವೃತ್ತಿಯು ನಮ್ಮಲ್ಲಿಯೂ ಹೊರಗಿನವರಲ್ಲಿಯೂ, ಹಿಂದೂ ಇಂದೂ, ಕಂಡುಬರುತ್ತಿರುವುದೇ –ಹೀಗೆ ಹುಲ್ಲಹಳ್ಳಿ ತೃಣಪುರಿಯಾಗಿದೆ. (ಇಂಥ ಭಾಷಾಂತರವು ಸರಿಯಾಗಿರಬೇಕು, ಸಮಂಜಸವಾಗಿ ಅರ್ಥವಾಗಬೇಕು ಎಂಬುದೇನೂ ಇಲ್ಲ!) ಇಲ್ಲಿ ಹುಲ್ಲ (ಳ್ಳ) ಎಂಬುದು ಒಬ್ಬನ ಹೆಸರು; ಅದಕ್ಕೆ ಹುಲ್ಲಿನ ಎಂದು ಅರ್ಥ ಮಾಡಿ 'ತೃಣ'ವೆಂದು ಸಂಸ್ಕೃತ ಭಾಷಾಂತರ ಮಾಡಿದ್ದಾರೆ. ಹೇಮಲತ (ಹ್ಯಾಂಲೆಟ್), ಗೋತೀರ್ಥ (ಆಕ್ಸ್‌ಫರ್ಡ್), ಸರಲಾಕ್ಷ ಹುಲಿಮೀಸೆ

* = (ಕನ್ನಡ) ಎಡ್ಡ = ಸುಂದರ?

(ಪರ್ಲಾಕ್ ಹೋವರ್ಸ್), ಅಲ್ಲಾಳನಾಥ (ಅರುಳಾಳಪೆರುಮಾಳ್) ಇವು ಇತರ ಉದಾಹರಣೆಗಳು. ಆದ್ದರಿಂದ ಸಂಸ್ಕೃತ ಪುರಾಣಗಳ ಕಾಲ ದಲ್ಲಿ ಪುರಾಣಕಾರರು ನಲ್ಮಲೈ ಎಂಬುದನ್ನು ಶ್ರೀಶೈಲ ಎಂದು ಸಂಸ್ಕೃತ ಮಾಡಿರಬಹುದು; ಆಮೇಲೆ ಶಿಲಾದ ಋಷಿಯ ಕಥೆ ಹುಟ್ಟಿರ ಬಹುದು.—ಕಾವೇರಿಯಿಂದ ಕವೇರನ ಕಥೆ ಹುಟ್ಟಿ ಹರಿದಹಾಗೆ. ಹಳೆಯ ದ್ರಾವಿಡ ಹೆಸರಿಗೆ ಬದಲಾಗಿ ಈಚೆಗೆ ಸಂಸ್ಕೃತ ಹೆಸರು ಬಂದಿ ರುವುದಕ್ಕೆ ಉದಾಹರಣೆಯಾಗಿ 'ಚಿದಂಬರ' ವನ್ನು ಹೇಳಬಹುದು. ಇದಕ್ಕೆ ಹಿಂದಿನ ಹೆಸರು 'ತಿಲ್ಲೈ'. ಕೃಷ್ಣಾ ಕುಮುದ್ವತೀ ಎಂಬುವೂ ಹೀಗೆಯೇ. ಇವಕ್ಕೆ ಪೆರ್ದೊಱೆ, ಕುಂದೇರ್ ಎಂದು ಹೆಸರು. ಅನೇಕ ಆಳ್ವಾರುಗಳ ಮತ್ತು ನಾಯನಾರರ ಹೆಸರುಗಳೂ ಹೀಗೇ ಸಂಸ್ಕೃತ ವಾಗಿವೆ.

'ಕರ್ನೂಲ್' ಎಂಬುದು 'ಕಂದೆನ ವೋಲು' ಎಂಬ ತೆಲುಗು ಶಬ್ದದಿಂದ ಉತ್ಪನ್ನವಾಗಿದೆಯೆಂದೂ, ಈ ಹೆಸರು ಹಳೆಯ ಗ್ರಂಥ ಗಳಲ್ಲಿಯೂ, ಶಾಸನಗಳಲ್ಲಿಯೂ ಕಂಡುಬರುವುದೆಂದೂ, ವಡ್ಡರು ಇಲ್ಲಿ ತಮ್ಮ ಗಾಡಿಗಳನ್ನು ಬಿಟ್ಟುಕೊಂಡು ಗಾಲಿಗಳಿಗೆ ಎರೆಯನ್ನು (ಕಂದೆನ) ಹಾಕುತ್ತಿದ್ದುದ್ದರಿಂದ ಈ ಊರಿಗೆ ಈ ಹೆಸರು ಬಂತೆಂದೂ ಕರ್ನೂಲ್ ಡಿಸ್ಟ್ರಿಕ್ಟ್ ಕೈಪಿಡಿಯ ಲೇಖಕರಾದ ಗೋಪಾಲಕೃಷ್ಣಯ್ಯ ಶೆಟ್ಟಿ ಅವರು ಹೇಳುತ್ತಾರೆ. ಈ ನಿರುಕ್ತಿ ನಿಜವಾಗಿರಲಿ ಇಲ್ಲದಿರಲಿ ಈ ಶಬ್ದದ ಮೊದಲ ಭಾಗವಂತೂ ಕನ್.—(ಕರ್ನೂಲ್‌ನಲ್ಲಿ ಇರುವ ರೇಫ ಈಚಿನದು.) ಇದರ ಅರ್ಥ ಕಪ್ಪು ಎಂದು ಕಾಣುತ್ತದೆ.* ಕಿಟ್ಟೆಲ್ ಅವರು ತಮ್ಮ ನಿಘಂಟುವಿನಲ್ಲಿ ಕನ್, ಕದ್, ಕಬ್, ಕಮ್, ಕರ್ ಎಲ್ಲಾ ಒಂದೇ ಎಂದೂ ಅವುಗಳಿಗೆ ಕಪ್ಪು ಎಂದೇ ಅರ್ಥವೆಂದೂ ಹೇಳುತ್ತಾರೆ. ಇವುಗಳೆಲ್ಲಾ ಕರ್ ಎಂಬುದರ ರೂಪಾಂತರಗಳೆನ್ನಬಹುದು. ಆದರೆ, ಕನುಗು (ಎಣ್ಣೆಯಲ್ಲಿ ಅಥವಾ ತುಪ್ಪದಲ್ಲಿ 'ಕರಿ' ಯುವುದು), ಕನರು,

---

* ಎಣ್ಣೆಯನ್ನಾಗಲಿ ಎಣ್ಣೆಯ ಗಸಿಯನ್ನಾಗಲಿ ತೆಗೆದುಕೊಂಡು ಅದಕ್ಕೆ ಹುಲ್ಲನ್ನು ಸುಟ್ಟು ಕರಿಕುಮಾಡಿಹಾಕಿ ಕಲಸುತ್ತಾರೆ. ಇದೇ 'ಕಂದೆನ,' 'ಕಂದಸಿ' ಅಥವಾ 'ಎರೆ'. ಇದರ ಬಣ್ಣ ಕಪ್ಪು.

ಕಂದು (ಕಪ್ಪಾಗು)—ಇವುಗಳಲ್ಲೆಲ್ಲಾ ಕನ್ ಎಂಬ ರೂಪವೇ ಕಾಣುತ್ತದೆ. ಹಾಗಾದರೆ 'ಕನ್ನಾಡು' ಎಂದರೆ ಕಪ್ಪು ನಾಡೇ?

ಕರ್ನೂಲ್ ಪ್ರಾಂತಕ್ಕೆ 'ಕನ್ನಾಡು' ಎಂದು ಹೆಸರಿತ್ತೆಂದೂ ಇದರ ಪಕ್ಕದ ಕುಂದೇರ್ ಪ್ರಾಂತಕ್ಕೆ ರೇನಾಡು (=ಎರೆನಾಡು?) ಎಂದು ಹೆಸರೆಂಮೂ ಮೇಲಣ ಲೇಖಕರು ಹೇಳುತ್ತಾರೆ. ಕಲ್‌ನಾಡು, ಕರುನಾಡು (?) ಎಂಬುದು ಇವರ ಅರ್ಥವಿರಬಹುದು; ಆದರೆ ಮೇಲೆ ಹೇಳಿದಂತೆ ಕಪ್ಪುನಾಡು ಎಂಮೂ ಅರ್ಥವಾಗಬಹುದು. ಹಾಗಾದರೆ ಹಿಂದೆ ಇದು ಕನ್ನಡ ನಾಡಾಗಿತ್ತೋ? ಏಕಾಗಿರಬಾರದು? ಮಲೈ ಶಬ್ದವನ್ನೂ ಕರ್ನೂಲಿಗೆ ಸುಮಾರು ಐವತ್ತು ಮೈಲಿ ದೂರದಲ್ಲಿರುವ 'ಕೋಇಲ್ ಕುಂಟ್ಲ' ಎಂಬ ಊರಿನ ಹೆಸರನ್ನೂ ನೋಡಿದರೆ ಕನ್ನಡ-ತಮಿಳು ಅಥವಾ 'ಕಂದಮಿಳು'* ನಾಡಾಗಿದ್ದಂತೆ ಕಾಣುತ್ತದೆ. ಕನ್ನಡ ನಾಡೆಲ್ಲ ಕಪ್ಪಾಗಿಲ್ಲ ಎಂದು ಹೇಳುವುದು ದೊಡ್ಡ ಆಕ್ಷೇಪಣೆಯಲ್ಲ.

ಶ್ರೀಶೈಲವು ಭಾಷಾಂತರೀಕರಣವಾದರೆ 'ಮಲ್ಲಿಕಾರ್ಜುನ'ವು ಭಾಷಾಂತರಾನುಕರಣವಾಗಿ ಕಾಣುತ್ತದೆ.—ಎಂದರೆ, ಮಲೈ ಅಯ್ಯನ್ ಎಂಬುದು ಅದರ ಮೂಲವಾಗಿ ಕಾಣುತ್ತದೆ. ಮಲೈ ಅಯ್ಯನ್ ಎಂದರೆ ಬೆಟ್ಟದ (ಮೇಲಿರುವ) ಸ್ವಾಮಿ ಅಥವಾ ದೇವರು. ಮಲ್ಲಯ್ಯ ಎಂಬುದೂ ಇದೇ ಶಬ್ದದ ಬೇರೊಂದು ರೂಪ.† —ಕನ್ನಡದಲ್ಲಿ ಮಲ್ಲಿಕಾರ್ಜುನಕ್ಕಿಂತ ಮಲ್ಲಯ್ಯ ಎಂಬ ಹೆಸರೇ ಹೆಚ್ಚು ಬಳಕೆ. ಈ ಶಬ್ದದ ಅವಯವಾರ್ಥ ಮರೆತು ಹೋದ ಮೇಲೆ ಬೆಟ್ಟದ ಸಂಬಂಧವನ್ನು ತೋರಿಸಲು ಅನೇಕ ಕಡೆ ಅದನ್ನು ಮಲೆಯ ಮಲ್ಲೇಶ್ವರ ಎಂದು ಕರೆಯುತ್ತಿರಬೇಕು. ಗಿರಿ ಮಲ್ಲಿಕಾರ್ಜುನ ಎಂಬುದು ಇದೇ ವಿಧವಾದ ಸಂಸ್ಕೃತ ಪ್ರಯತ್ನ. 'ಮಲೆ' ಪದವು (ಬೆಟ್ಟ ಎಂಬ ಅರ್ಥದಲ್ಲಿ) ಬಳಕೆಯಾಗದೆ ನಿಂತು

* 'ಮಹಾರಾಷ್ಟ್ರದ ಮೂಲ' ಪುಟ ೧೯.

† ಶ್ರೀಮಾನ್ ಶಂ. ಬಾ. ಜೋಶಿಯವರು ಇದನ್ನು ಆಗಲೇ ಸೂಚಿಸಿದ್ದಾರೆ ಮಲ್ಲಿಕಾರ್ಜುನ ಎಂಬುದಕ್ಕೆ ಮಲ್ಲಕಾರ್ಜುನ ಎಂಬುದು ಪೂರ್ವರೂಪವಾಗಿರಬೇಕೆಂಬುದು ಅವರ ಅಭಿಪ್ರಾಯವಾಗಿ ಕಾಣುತ್ತದೆ. ('ಕರ್ಣಾಟಕದ ವೀರಕ್ಷತ್ರಿಯರು,' ಪುಟ ೧೦೪.)

ಹೋದ ಮೇಲೆ, ಅದು ಅರ್ಥವಾಗದೆ, ಇದು ' ಮಳೆಯ ' ಮಲ್ಲಯ್ಯ ಅಥವಾ ಮಳೆಯ ಮಲ್ಲೇಶ್ವರ ಆಗಿರಬೇಕು (ಉದಾಹರಣೆ—ಅರಸಿಕೆರೆ, ಕಿಗ್ಗ, ಈ ಊರುಗಳಲ್ಲಿ); ಇದಕ್ಕೆ ಪೂಜೆ ನಡಸಿದರೆ ಮಳೆ ಬರುತ್ತ ದೆಂಬ ಕಥೆ ಹುಟ್ಟಿಕೊಂಡಿರಬೇಕು. ಆದ್ದರಿಂದಲೇ * ' ಬೈಲು ' ಮಲ್ಲಿಕಾರ್ಜುನನಿಗೂ ' ಮಳೆಯ ' ಮಲ್ಲಿಕಾರ್ಜುನನಿಗೂ ವ್ಯತ್ಯಾಸ. ' ಬೈಲು ' ಅಲ್ಲದ್ದು ' ಮಳೆ ' ಯಲ್ಲ—' ಮಲೆ ' : ಬೈಲುಸೀಮೆ, ಮಲೆ ನಾಡು ಎಂಬಂತೆ.

ಮಲ್ಲ, ಮಲ್ಲಪ್ಪ, ಮಲ್ಲಮ್ಮ, ಮಲ್ಲೇಶ, ಮಲ್ಲೇಶ್ವರ, ಮಲ್ಲಾರಿ (?) ಇವು ಇದೇ ಹೆಸರಿನಿಂದ ಬಂದವುಗಳು. † ಕನ್ನಡಿಗರಲ್ಲಿ ಇಂದಿಗೂ ರೂಢವಾಗಿರುವ ಬೆಟ್ಟಯ್ಯ, ಗಿರಿಯಪ್ಪ ಮುಂತಾದ ಹೆಸರುಗಳೂ ಮಲ್ಲಯ್ಯ ಎಂಬ ಅರ್ಥವನ್ನು ಕೊಡತಕ್ಕವುಗಳೇ. ಹಿಂದೆ ಶಿವನನ್ನು ಎಲ್ಲಾ ಕಡೆಯಲ್ಲಿಯೂ (ಬೆಟ್ಟದ ಮೇಲೆ) ಬೆಟ್ಟದ ದೇವರೆಂದು ಪೂಜಿ

* ' ಶಿವಾನುಭವ,' ಸಂಪುಟ ೧೩, ಪುಟ ೩೬.

† ಇವೆಲ್ಲಕ್ಕೂ ಮಲ್( =ಗಟ್ಟಿಯಾಗಿರು) ಎಂಬ ದ್ರಾವಿಡ ಧಾತುವೇ ಮೂಲವಾಗಿರುವಂತೆ ತೋರುತ್ತದೆ. ಸಂಸ್ಕೃತದಲ್ಲಿ " ಮಲ ಮಲ್ಲ ಧಾರಣೇ " ಎಂಬ ಧಾತುವಿದೆ. ಈ ಧಾತುವಿನಿಂದ ಮಲ್ಲ ಶಬ್ದವನ್ನು ನಿರ್ವಚಿಸುವುದಕ್ಕಿಂತಲೂ ದ್ರಾವಿಡಧಾತುವಿನಿಂದ ನಿರ್ವಚಿಸುವುದೇ ಸರಿಯಾಗಿ ಕಾಣುತ್ತದೆ. ಸಂಸ್ಕೃತದ ಮಲ್ಲ ( =ಕ್ಷತ್ರಿಯೋತ್ಪನ್ನವಾದ ಒಂದು ಜಾತಿ ; ಜಟ್ಟಿ) ಶಬ್ದವೂ ಈ ದ್ರಾವಿಡ ಧಾತುವಿನಿಂದ ಜನ್ಯವಾದದ್ದೆಂದು ಹೇಳಿದರೇ ಅರ್ಥ ಸ್ವರಸವಾಗುತ್ತದೆ. ಮಲ್ಲಾರಿ ಎಂದರೆ ಶಿವನೆಂದೂ ಅರ್ಥವಾಗುತ್ತದೆ. ಇಲ್ಲಿ—ಅರಿ ಎಂದರೆ ಶತ್ರು ಎಂದೇ ಅರ್ಥವಾಗಬೇಕಾಗಿಲ್ಲ (' ಕರ್ಣಾಟಕದ ವೀರಕ್ಷತ್ರಿಯರು.' ಪುಟ ೧೦೪). ' ಗುಜ್ಜಾರಿ ' ಯಲ್ಲಿ ಈ ಅರ್ಥವಿಲ್ಲ. ವಿಷ್ಣು ಅಥವಾ ಕೃಷ್ಣ ಎಂದು ಅರ್ಥವಾದಾಗ, ಮಲ್ಲರ (ಜಟ್ಟಿಗಳ) + ಅರಿ = ಕೃಷ್ಣ ಎಂದು ಅರ್ಥವಿರಬಹುದು. ಈ ದೇವತೆಯ ಪೂಜೆ ಎಂದಿನಿಂದ ಬಂತು, ಅದರ ಮೂಲರೂಪ ಯಾವುದು ಎಂಬುದನ್ನು ಮೊದಲು ನಿರ್ಧರಿಸಿಕೊಳ್ಳದೆ ಅದರ ವ್ಯುತ್ಪತ್ತಿಯನ್ನು ನಿಶ್ಚಯಿಸುವುದು ತಪ್ಪಾದೀತು.

ಸುತ್ತಿದ್ದಿರಬಹುದೇ? ಆಗ ಅವನು ಎಲ್ಲ ಕಡೆಗೂ ಬೆಟ್ಟದ ದೇವರಾಗುತ್ತಾನೆ—ಗಿರೀಶ ಎಂಬಂತೆ. ದ್ರಾವಿಡದಲ್ಲಿ ' ಮಲೈ ಅಯ್ಯನ್ ' ಎಂಬ ಪದದ ಜೊತೆಗೆ ' ಮಲೈಯನ್ ' ಎಂಬ ಹ್ರಸ್ವರೂಪವೂ ಆಗಬಹುದು. ಸಂಸ್ಕೃತದಲ್ಲಿಯೂ ಇವರಂತೆ ' ಗಿರೀಶ ' ದ ಜೊತೆಗೆ ' ಗಿರಿಶ ' ವೂ ಇದೆ. ಇದು ಕುತೂಹಲಜನಕವಲ್ಲವೇ?

ಜೈನ ತೀರ್ಥಂಕರರಲ್ಲೊಬ್ಬರ ಹೆಸರು ಮಲ್ಲಿ (ನಾಥ).* ಈ ಪದವೂ, ' ಮಲ್ಲ ' ದ ಬೇರೊಂದು ರೂಪವಾಗಿರಬೇಕು.—ಸೋಮ, ಸೋಮಿ; ನಾಗ, ನಾಕಿಗ, ನಾಕಿ ಎಂಬಂತೆ. ಮಲ್ಲಯ್ಯ ಎಂಬುದರ ಹ್ರಸ್ವರೂಪವಿದ್ದರೂ ಇರಬಹುದು: ಮಡಂದಯ್, ಮಡದಿ; ತಂಗಯ್, ತಂಗೆ, ತಂಗಿ ಎಂಬಂತೆ. ಇದನ್ನು ಒಪ್ಪಿಕೊಂಡರೆ ಕಲ್ಲಯ್ಯ, ಕಲ್ಲ, ಕಲ್ಲಿ (ನಾಥ) ಎಂಬುದಕ್ಕೂ ಉಪಪತ್ತಿ ದೊರೆಯುತ್ತದೆ. ಕಲ್ ಎಂಬ ದ್ರಾವಿಡ ಮೂಲ ಧಾತುವಿಗೂ ಮಲ್ ಎಂಬುದರಂತೆಯೇ ಗಟ್ಟಿ ಎಂಬ ಅರ್ಥವಿದ್ದು ಅದರಿಂದ ' ಕಲ್ಲು ' ಆಗಿರಬೇಕು. ಕಲ್ಲು (ಲ್) ಶಬ್ದಕ್ಕೆ ತಮಿಳಿನಲ್ಲಿ (ಮಲೈ ಶಬ್ದದಂತೆ) ಬೆಟ್ಟ ಎಂಬ ಅರ್ಥವೂ ಇದೆ. ನಿಜಗಲ್ಲು, ಜಾವಗಲ್ಲು ಮುಂತಾದ ಊರುಗಳ ಹೆಸರುಗಳಲ್ಲಿ ಕಲ್ಲು ಎಂದರೆ ಬೆಟ್ಟವೆಂದೇ ಅರ್ಥ. ಆದ್ದರಿಂದ ಶ್ರೀಮಾನ್ ಶಂ. ಬಾ. ಜೋಶಿಯವರು ಊಹಿಸುವಂತೆ† ಕಲ್ಲೇಶ್ವರನು ಕಳ್ಳೇಶ್ವರನೇನು ಆಗಬೇಕಾಗಿಲ್ಲ.§

* ವೀರಶೈವ ಗ್ರಂಥಗಳಲ್ಲಿ ' ಮಲ್ಲಿಕಾರ್ಜುನ ' ನನ್ನೇ ' ಮಲ್ಲಿನಾಥ ' ಎಂದೂ ಕರೆಯುವುದುಂಟು.

† ' ಕನ್ನಡದ ನೆಲೆ '—ಕರ್ಣ, ಕರಣ, ಕಣ್ಣು, ಕಣ್ಣ, ಕನ್ನ, ಕನ್ನು, ಕಳವ, ಕಳ್ಳ, ಕಳ್ಳು, ಕನ್, ಕಂ, ಇವೆಲ್ಲಾ ಒಂದೇ ಶಬ್ದದ ಹಲವು ರೂಪಗಳೆಂದು ಅವರು ಅಭಿಪ್ರಾಯಪಡುತ್ತಾರೆ.

§ ಸಂಭಾವನೆ—೧೯೪೧

# ತತ್ವಶಾಸ್ತ್ರ ಮತ್ತು ಅದರ ಸಮಸ್ಯೆಗಳು

ತತ್ವಶಾಸ್ತ್ರ ಪ್ರಾಯಶಃ ಎಲ್ಲಾ ಶಾಸ್ತ್ರಗಳಿಗಿಂತಲೂ ಪ್ರಾಚೀನ; ಮನುಷ್ಯನಿಗೆ ಯೋಚಿಸುವ ಶಕ್ತಿ ವಿಕಾಸವಾದಂದೇ ಇದು ಹುಟ್ಟಿ ತೆಂದು ಹೇಳಬಹುದು. ಈಗ ದೊರೆತಿರುವ ಇದರ ಚರಿತ್ರೆಯ ಪೂರ್ವ ಭಾಗವನ್ನು ಗ್ರೀಕರ ಮತ್ತು ಭಾರತೀಯರ ತತ್ವ ಗ್ರಂಥಗಳಲ್ಲಿ ನೋಡ ಬಹುದು. . . . . .

ತತ್ತ್ವ (ತತ್ + ತ್ವ) ಎಂದರೆ, 'ಅದರ ತನ,' ವಾಸ್ತವಸ್ಥಿತಿ, ಸತ್ಯ, ನಮಗೆ ಕಾಣುವ ಈ ಜಗತ್ತಿನ ಸರಿಯಾದ ಸ್ವರೂಪ. ಇದನ್ನು ತಿಳಿಯುವುದು ಸುಲಭವಲ್ಲ, ಏಕೆಂದರೆ ನಮ್ಮ ತಿಳಿವಿಗೆ ಸಾಧನಗಳಾದ ಇಂದ್ರಿಯಗಳ ಶಕ್ತಿ ಬಹು ಮಿತವಾದದ್ದು, ಸ್ಥೂಲವಾದದ್ದು; ಜಗತ್ತು ಅಮಿತವಾದದ್ದು, ಅಗಾಧವಾದದ್ದು, ಅತಿ ಸೂಕ್ಷ್ಮವಾದದ್ದು. ಈ ಇಂದ್ರಿಯಗಳ ಅನುಭವವು ಮುಂದೆ ಹೋಗಬೇಕಾದರೆ ಬುದ್ಧಿಯ ಸಹಾಯ ಬೇಕು; ಪ್ರತ್ಯಕ್ಷದ ಜೊತೆಗೆ ತರ್ಕಾನುಮಾನವೂ ಬೇಕು; ಕೆಲವುವೇಳೆ ನಮಗಿಂತ ತಿಳಿದ ಸಮರ್ಥರ ಅನುಭವವನ್ನೂ, ಅವರ ಮಾತಿನ ಆಧಾರದ ಮೇಲೆ, ಕೂಡಿಸಿಕೊಳ್ಳಬೇಕು; ಮತ್ತೊಂದು ಕಡೆ ಬಾಹ್ಯವಾದ ಯಂತ್ರೋಪಕರಣಗಳೂ ಇಂದ್ರಿಯಗಳ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ಸಾಧಕವಾಗುತ್ತವೆ. ಇವುಗಳ ಶಕ್ತಿಯೂ ಪರಿಮಿತ ವಾದದ್ದೇ; ಆದರೆ ಇವು ಸೂಕ್ಷ್ಮವಾದಷ್ಟೂ, ಬುದ್ಧಿ ತೀಕ್ಷ್ಣವಾದಷ್ಟೂ, ಜಗತ್ತಿನ ಸ್ವರೂಪದ ಜ್ಞಾನ ಬೆಳೆಯುತ್ತ ಹೋಗುತ್ತದೆ. ಹೀಗೆ ಬೆಳೆ ಯುತ್ತ ಇದು ಎಂದಾದರೂ ಪರ್ಯಾಪ್ತಿಯನ್ನು ಪಡೆಯುತ್ತದೆಯೋ ಇಲ್ಲವೋ ಹೇಳುವುದಕ್ಕಾಗುವುದಿಲ್ಲ; ಇಂದಿನ ನಿಲವಿನಲ್ಲಿ, ಇದು ಅಸಾ ಧ್ಯವೆಂದೇ ತೋರುತ್ತದೆ; ಏನೇ ಆಗಲಿ, ಈಗಂತೂ ತತ್ತ್ವಶಾಸ್ತ್ರ ಒಂದು ಸಮಸ್ಯೆಗಳ ಬೀಡಾಗಿಯೇ ಉಳಿದಿದೆ.

ಮನುಷ್ಯನ ಅರಿವು ಬೆಳೆಯುತ್ತ ಬಂದು ಮೊದಲು ಎರಡು ಭಾಗ ವಾಯಿತೆಂದು ಹೇಳಬಹುದು; ೧. ಪ್ರತ್ಯಕ್ಷ, ತರ್ಕಾನುಮಾನ, ಆಪ್ತ

ವಾಕ್ಯ ಇವುಗಳಿಂದ ಬಂದದ್ದು—ಇದೇ "ಜ್ಞಾನ." ೨. ಯಂತ್ರೋಪ ಕರಣಾದಿ ಬಾಹ್ಯಸಾಧನಗಳಿಂದ ಪರೀಕ್ಷಾ ಪ್ರಯೋಗಗಳನ್ನು ನಡಸಿ ಪಡೆದದ್ದು—ಇದು "ವಿಜ್ಞಾನ." ನಮ್ಮವರು ಮೊದಲನೆಯ ಜ್ಞಾನವೇ ಜ್ಞಾನವೆಂದೂ, ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಸಾಧಕವೆಂದೂ, ಎರಡನೆಯದು ವಿಜ್ಞಾನ ಅಥವಾ ವಿಶೇಷ ರೀತಿಯ ಜ್ಞಾನವೆಂದೂ ಲೌಕಿಕೋಪಯೋಗಿ ಎಂದೂ ತೀರ್ಮಾನಿಸಿದರು;"ಮೋಕ್ಷೇ ಧೀರ್ಜ್ಞಾನ ಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ". ಆದ್ದರಿಂದಲೇ ಅವರಲ್ಲಿ ಕ್ರಮವಾಗಿ ಅಂತರ್ಮುಖತೆಗೂ ಆತ್ಮಾನುಸಂಧಾನಕ್ಕೂ ಆತ್ಮಸಾಕ್ಷಾತ್ಕಾರಕ್ಕೂ ಪ್ರಾಶಸ್ತ್ಯ ಬಂತು. ಖಗೋಳಶಾಸ್ತ್ರ, ರಸತಂತ್ರ ಮುಂತಾದ 'ವಿಜ್ಞಾನ' ಶಾಸ್ತ್ರಗಳು ಕೆಲವು ಕಾಲ ಬೆಳೆದು ಬಂದರೂ, ಇವು ಮಿಕ್ಕೆಲ್ಲ ಭಾರತೀಯ ಶಾಸ್ತ್ರಗಳಂತೆಯೇ ಕಾಲಕ್ರಮದಲ್ಲಿ ಬೆಳವಣಿಗೆ ನಿಂತು, ಕ್ಷೀಣಿಸಿ ಹೋದುವು. 'ಜ್ಞಾನ' ಅಥವಾ 'ಆಧ್ಯಾತ್ಮಿಕ ಶಾಸ್ತ್ರ' ವೂ ನೂರಾರು ವರ್ಷಗಳ ಹಿಂದೆಯೇ ಬೆಳೆಯುವುದು ನಿಂತು ಹೋಯಿತೆಂದು ಹೇಳಬಹುದು. ಇಂದಿಗೂ ದ್ವೈತಾದ್ವೈತ ವಿಶಿಷ್ಟಾದ್ವೈತ ಮುಂತಾದ ಸಂಪ್ರದಾಯಗಳ ಅನುಯಾಯಿಗಳಲ್ಲಿ ವಾದ ವಿವಾದಗಳು ನಡೆಯುತ್ತಿರುವುದು ಕಂಡುಬರುತ್ತಿದ್ದರೂ, ಅವರು ಬಹು ಮಟ್ಟಿಗೆ ಹಿಂದಿನ ಭಾಷ್ಯಗಳು, ಅವುಗಳ ವ್ಯಾಖ್ಯಾನಗಳಲ್ಲಿ ಕಂಡು ಬರುವ ಪರಿಷ್ಕಾರಗಳು ಇವುಗಳ ಎಲ್ಲೆಯನ್ನು ಬಿಟ್ಟು ಹೊರಗೆ ಬರುತ್ತಿಲ್ಲ. ಪ್ರತಿಯೊಂದು ಸಂಪ್ರದಾಯದವರೂ ತಮ್ಮ ತಮ್ಮ ಮತ ತಮ್ಮ ತಮ್ಮ ಆಚಾರ್ಯರುಗಳಿಂದ ಕೊನೆಯದಾಗಿ ಸಿದ್ಧಾಂತ ಮಾಡಲ್ಪಟ್ಟಿದೆ ಎಂದು ದೃಢವಾಗಿ ನಂಬಿಬಿಟ್ಟಿರುತ್ತಾರೆ.

ಪಾಶ್ಚಾತ್ಯರಲ್ಲಿಯೂ ಮೊದಲು 'ತತ್ತ್ವಜ್ಞಾನ' ಒಂದೇ ಆಗಿತ್ತು. ನಮ್ಮಲ್ಲಿ ನ್ಯಾಯ ಮುಂತಾದ ದರ್ಶನಗಳ ಕರ್ತರು ಜಗತ್ತಿನಲ್ಲಿರುವ ಪದಾರ್ಥಗಳು ಇವು, ದ್ರವ್ಯಗಳು ಇಷ್ಟೇಯೆ, ಗುಣಗಳು ಇಂಥವೇಯೆ, ಅವುಗಳ ಸ್ವರೂಪ ಹೀಗೇಯೆ ಎಂದು ಆರಂಭಮಾಡಿಕೊಂಡು, ಹೇಗೆ ಕಲ್ಲು, ಮಣ್ಣು, ಬೆಳಕು, ಬಂಗಾರ, ಕಾಲ, ಆಕಾಶ, ಮನಸ್ಸು, ಆತ್ಮ, ಎಲ್ಲವನ್ನೂ ವಿಚಾರಮಾಡಿದರೋ ಹಾಗೆಯೇ ಅರಿಸ್ಟಾಟಲ್, ಸಾಕ್ರ

ಟೀಸ್ ಮುಂತಾದ ಪ್ರಾಚೀನ ಪಾಶ್ಚಾತ್ಯ ತತ್ವಜ್ಞರೂ, ಖಗೋಳ ಭೂಗೋಳ, ಜೀವ, ಮನುಷ್ಯ, ಇಹ, ಪರ ಇವುಗಳಿಗೆ ಸಂಬಂಧಪಟ್ಟ ಅಂಶಗಳನ್ನೆಲ್ಲಾ ವಿಚಾರಮಾಡುತ್ತಿದ್ದರು. ಇವು ವೃದ್ಧಿಹೊಂದಿ ಕಾಲ ಕ್ರಮದಲ್ಲಿ ಜ್ಞಾನ ವಿಜ್ಞಾನಗಳಾಗಿ ವಿಭಕ್ತವಾದುವು, ಬೆಳೆದುವು, ಇಂದಿಗೂ ಶಾಖೋಪಶಾಖೆಗಳಾಗಿ ಬೆಳೆಯುತ್ತಿವೆ. ಇವು ಎಷ್ಟು ಮಟ್ಟಿಗೆ ಬೆಳೆಯುತ್ತಿವೆ ಎಂದರೆ, ಲೌಕಿಕ ವಿಜ್ಞಾನಕ್ಕೆ ಸಂಬಂಧಪಟ್ಟ ಯಾವ ಒಂದು ಉಪಶಾಖೆಯನ್ನೇ ಆದರೂ ಈಗ ಕರತಲಾಮಲಕ ವಾಗಿ ಮಾಡಿಕೊಂಡು ಅದರಲ್ಲಿ ಸಮಗ್ರವಾಗಿ ಜ್ಞಾನವನ್ನು ಪಡೆದು ಬಿಟ್ಟಿದ್ದೇನೆಂದು ಯಾರೂ ಧೈರ್ಯವಾಗಿ ಹೇಳುವಂತಿಲ್ಲ. ಪ್ರಪಂಚದ ದೊಡ್ಡ ದೊಡ್ಡ ವಿದ್ಯಾಸ್ಥಾನಗಳಲ್ಲೆಲ್ಲಾ ವಿದ್ವಾಂಸರು ಪ್ರಯೋಗ ಗಳನ್ನು ನಡಸಿ, ತರ್ಕಿಸಿ, ಫಲಿತಾಂಶವನ್ನು ಲೇಖನಗಳಾಗಿ ಗ್ರಂಥ ಗಳಾಗಿ ಹಲವು ಭಾಷೆಗಳಲ್ಲಿ ಪ್ರಕಟಿಸುತ್ತಿದ್ದಾರೆ. ಯಾರೊಬ್ಬರಾದರೂ ಇವುಗಳನ್ನೆಲ್ಲಾ ಓದಿ ತಿಳಿದು ಬುದ್ಧಿಗತವಾಗಿ ಮಾಡಿಕೊಳ್ಳುವುದೇ ದುಸ್ತರವಾಗುತ್ತ ಬರುತ್ತಿದೆ.

ತತ್ವ ಶಾಸ್ತ್ರದ ಸಮಸ್ಯೆಗಳನ್ನು ಮುಖ್ಯವಾಗಿ ಮೂರು ಗುಂಪು ಮಾಡಬಹುದು : ೧. **ಇರವು** :—ಈ ಪ್ರಪಂಚ ಎಂದಿನಿಂದ ಇದೆ? ಎಲ್ಲಿಂದ ಎಲ್ಲಿಯವರೆಗೆ ಇದೆ? ಇದು ಹುಟ್ಟುವುದಕ್ಕಿಂತ ಮುಂಚೆ ಇಲ್ಲಿ ಏನು ಇತ್ತು? ಇದು ಯಾವಾಗಲೂ ಹೀಗೆಯೇ ಇರುತ್ತದೆಯೆ? ಇಲ್ಲ ದಿದ್ದರೆ ಏನಾಗುತ್ತದೆ? ಅದನ್ನು ಯಾರು ಏನುಮಾಡುತ್ತಾರೆ? ದಿನ ದಿನಕ್ಕೂ ಬದಲಾಯಿಸುತ್ತಿರುವ 'ಜಗತ್ತು' ಹೀಗೆಯೇ ಬದಲಾಯಿಸು ತ್ತಲೇ ಇರುತ್ತದೆಯೇ? ಇದರ ಹಿಂದೆ ಸ್ಥಿರವಾಗಿ, ಬದಲಾಗದೆಯೇ ಇರುವುದು ಏನಾದರೂ ಇದೆಯೆ? ಹಾಗಿದ್ದರೆ ಅದರ ಸ್ವರೂಪವೇನು? ಅದು ಏಕೆ ವ್ಯತ್ಯಾಸವಾಗುವುದಿಲ್ಲ? ಹುಟ್ಟು ಸಾವುಗಳೆಂದರೇನು? ಮನುಷ್ಯ ಹುಟ್ಟುವುದಕ್ಕಿಂತ ಮುಂಚೆ ಎಲ್ಲಿದ್ದ? ಸತ್ತಮೇಲೆ ಎಲ್ಲಿಗೆ ಹೋಗುತ್ತಾನೆ? ಏನಾಗುತ್ತಾನೆ? ಈ ಪ್ರಪಂಚದಲ್ಲಿರುವ ವಸ್ತುಗಳಿಗೆ ಪರಸ್ಪರ ಸಂಬಂಧವೇನು? ಇವು ಹಲವೋ, ಕೆಲವೋ, ಕೊನೆಗೆ ಒಂದೇಯೋ? ಇತ್ಯಾದಿ. ೨. **ಅರಿವು** :—ಈ ಅರಿವು ಎಂದರೇನು?

ಇದು ನಮಗೆ ಆಗುವುದು ಹೇಗೆ? ಭ್ರಮೆಯಾವುದು, ಪ್ರಮೆ ಯಾವುದು? ಏಕೆ? ಪ್ರಪಂಚದಲ್ಲಿ ಜಡ ಚೇತನ ಎರಡೂ ಕಾಣುತ್ತವೆ ಯಲ್ಲ, ಇವುಗಳಿಗೆ ಏನು ಸಂಬಂಧ? ಜಡದಿಂದ ಚೇತನ ಬಂತೇ? ಜಡ ನಿಜವಾಗಿಯೂ ಜಡವೇ? ಅಥವಾ ಚೇತನ ಅದರಲ್ಲಿ ಅವ್ಯಕ್ತ ವಾಗಿಯೇ? ಜಗತ್ತೆಲ್ಲಾ ಯಾವುದಾದರೂ ಒಂದು ಮಹಾಚೇತನ ದಿಂದ ನಡೆಯುತ್ತಿದೆಯೇ? ಹಾಗಾದರೆ ಮನುಷ್ಯನಿಗೂ ಅದಕ್ಕೂ ಏನು ಸಂಬಂಧ? ಅದರ ಶಕ್ತಿಗೆ ಎಲ್ಲೆ ಇದೆಯೇ? ಇಲ್ಲದಿದ್ದರೆ ಏಕೆ ಇಲ್ಲ? ಮನುಷ್ಯನಿಗೆ ಸ್ವಾತಂತ್ರ್ಯವುಂಟೆ? ಎಷ್ಟರಮಟ್ಟಿಗೆ? ಇತ್ಯಾದಿ.

೩. **ನಲಿವು**:—ಮನುಷ್ಯನಿಗೆ ಸುಖ ದುಃಖಗಳ ಅನುಭವ ಹೇಗಾಗು ತ್ತದೆ? ಇವುಗಳ ನಿಜವಾದ ಸ್ವರೂಪವೇನು? ಸುಖ ದುಃಖಗಳಿಗೆ ಏನು ಪರಸ್ಪರ ಸಂಬಂಧ? ಇವು ಹೇಗೆ ಬಂದುವು? ಇವಕ್ಕೆ ಕಾರಣರು ಯಾರು? ನಾವೇ, ನಮಗೆ ಮೀರಿದ ಮತ್ತೊಂದು ಶಕ್ತಿಯೇ? ಈ ಶಕ್ತಿಗೆ ಏನಾದರೂ ಉದ್ದೇಶವಿದೆಯೇ? ನಾವು ಅದನ್ನು ಒಲಿಸಿಕೊಳ್ಳ ಬಹುದೇ? ಹೇಗೆ? ಅದಕ್ಕೆ ಬೇಕಾದವರಿಗೆ ಕಷ್ಟವನ್ನೂ ಬೇಕಾದ ವರಿಗೆ ಸುಖವನ್ನೂ ಕೊಡುವ ಸಾಮರ್ಥ್ಯ ಸ್ವಾತಂತ್ರ್ಯಗಳಿವೆಯೇ? ಇಲ್ಲ, ಅದೂ ಅಸಹಾಯವೋ? ಪಾಪ ಪುಣ್ಯಗಳುಂಟೇ? ಇವುಗಳಿಗೆ ದುಷ್ಫಲ ಸತ್ಫಲಗಳು, ಎಂದರೆ ಕಷ್ಟ ಸುಖಗಳು, ಉಂಟೇ? ಎಂದರೆ "ಕರ್ಮ"ದ ಸ್ವರೂಪವೇನು? ಇದು ನಮ್ಮ ಕೈಯಲ್ಲಿದೆಯೇ? ಇತ್ಯಾದಿ.

ಇಂಥ ಪ್ರಶ್ನೆಗಳು ಪ್ರತಿಯೊಬ್ಬ ಮನುಷ್ಯನನ್ನೂ ಬಾಧಿಸುತ್ತವೆ. ಅವನವನ ವಯಸ್ಸು ವಿದ್ಯೆ ಬುದ್ಧಿ ಅನುಭವ ಸಂಸ್ಕಾರಗಳಿಗೆ ಅನು ಗುಣವಾಗಿ ಪ್ರತಿಯೊಬ್ಬನೂ, ಪ್ರತಿಯೊಂದು ಕಾಲದಲ್ಲಿಯೂ, ಇದಕ್ಕೆ ಉತ್ತರ ಕೊಡಲು ಅಥವಾ ಕೊಟ್ಟುಕೊಳ್ಳಲು ಪ್ರಯತ್ನಪಟ್ಟಿದ್ದಾನೆ. ಕೆಲವರಿಗೆ ಅದರಿಂದ ಅಥವಾ ಇತರರು ಹೇಳುವ ಉತ್ತರಗಳಿಂದ ಸಮಾಧಾನವಾಗಬಹುದು, ತೃಪ್ತಿಯಾಗಬಹುದು, ಸಂತೋಷವಾಗ ಬಹುದು, ಶಾಂತಿದೊರೆಯಬಹುದು. ಆದರೆ ಇತರರಿಗೆ ಇವು ಕೊನೆಯ ವರೆಗೂ ಸಮಸ್ಯೆಗಳಾಗಿಯೇ ಉಳಿದು, ಚರ್ಚಿಸಿದಷ್ಟೂ ಗಹನವಾಗಿ

ಸಂದೇಹದಲ್ಲಿಯೇ ಜನ್ಮವನ್ನು ಮುಗಿಸುವಂತಾಗಬಹುದು. ಈ ವಿಚಾರದಲ್ಲಿ, "ತಿಳಿದಷ್ಟು ತಿಳಿಯಿತು, ತಿಳಿವು ಅನಂತ; ಸಮಾಧಾನ ತೃಪ್ತಿ ಶಾಂತಿ ಸಂತೋಷಗಳು ದೊರೆತದ್ದೆಲ್ಲಾ ಒಂದು" ಎಂಬುದು ಒಂದು ಮತ. "ಅಸಂತೋಷವೇ ಶ್ರೇಯಸ್ಸಿಗೆ ಮೂಲ; ಏನು ಸಿಕ್ಕಿದರೆ ಅದಕ್ಕೆ ಸಂತೋಷಪಟ್ಟುಕೊಂಡು ಸುಮ್ಮನಿರುವುದು ಹಂದಿಯ ಜೀವನ; ವಿಚಾರಮಾಡುತ್ತ ಹೋದರೆ ಭ್ರಾಂತಿಗೆ ಒಳಗಾಗಬಹುದು; ತಪ್ಪು ಮಾಡಬಹುದು; ಆದರೆ ಮುಂದೆ ತಿದ್ದಿಕೊಳ್ಳುವ ಸಂಭವವಿದೆ; ಇದುವರೆಗೆ ಶಾಸ್ತ್ರಗಳು ಬೆಳೆದಿರುವುದೆಲ್ಲಾ ಹೀಗೆಯೇ; ವಿಜ್ಞಾನ ಶಾಸ್ತ್ರಗಳೂ ಕೂಡ ತಾವು ಇಂದು ಪ್ರತಿಪಾದಿಸುತ್ತಿರುವುದು ಸಾರ್ವಕಾಲಿಕವಾದ ಅಬಾಧಿತವಾದ ಸಿದ್ಧಾಂತವೇನಲ್ಲ; ಇಂದಿನ ತಿಳಿವಳಿಕೆಯಲ್ಲಿ ಅದು ಸರಿ. ಮುಂದೆ ಇದು ವ್ಯತ್ಯಾಸವಾಗಬಹುದು. ಈ ಮಾತನ್ನು ದೊಡ್ಡ ದೊಡ್ಡ ವೈಜ್ಞಾನಿಕರೇ ಹೇಳುತ್ತಿದ್ದಾರೆ. ಆದ್ದರಿಂದ ವಿಚಾರಮಾಡಬೇಕು, ಮಾಡುತ್ತಿರಬೇಕು." ಎಂಬುದು ಇನ್ನೊಂದು ಮತ.

ಈ ಎರಡನೆಯ ಮತವನ್ನು ಅನುಸರಿಸಿ ಪಾಶ್ಚಾತ್ಯ ತತ್ವ ಶಾಸ್ತ್ರ ವಿಜ್ಞಾನ ಶಾಸ್ತ್ರಗಳು ಬೆಳೆಯುತ್ತಿವೆ. ಪ್ರಾಚೀನತೆಯೇ ನಿರ್ದುಷ್ಟವಾದ ಪರಮ ಪ್ರಮಾಣವೆಂದು ಅವರು ಕೈಕಟ್ಟಿಕೊಂಡು ಶರಣು ಹೇಳಿ ಕುಳಿತುಕೊಳ್ಳುವುದಿಲ್ಲ. ನಮ್ಮಲ್ಲಿಯೂ "ಮಾಮೇಕಂ ಶರಣಂ ವ್ರಜ" ಎಂದು ಹೇಳಿರುವವರೇ "ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು" ಎಂದು ಹೇಳಿದ್ದಾರೆ. ಇಂದಿನ ಪಾಶ್ಚಾತ್ಯರಲ್ಲಿ ಇನ್ನೊಂದು ಅತಿಶಯವೇನೆಂದರೆ 'ಜ್ಞಾನ' ಪ್ರತಿಪಾದಕರಾದ ತಾತ್ವಿಕರೂ 'ವಿಜ್ಞಾನ' ಪ್ರತಿಪಾದಕರ ನೆರವನ್ನು ತೆಗೆದುಕೊಳ್ಳುತ್ತಿದ್ದಾರೆ. ವಿಜ್ಞಾನ ಪ್ರತ್ಯಕ್ಷ ಶಾಸ್ತ್ರ, ಪ್ರಾಯೋಗಿಕ ಶಾಸ್ತ್ರ. ಅದಕ್ಕೆ ಒರೆಹಚ್ಚಿ, ಪರೀಕ್ಷೆಯಲ್ಲಿ ಗೆದ್ದರೆ ತತ್ವವು ದ್ವಿಗುಣವಾಗಿ ಸಾಧಿತವಾದಂತಾಗುತ್ತದೆ, ದೃಢಪಟ್ಟಂತಾಗುತ್ತದೆ. ಆದ್ದರಿಂದ ಒಂದಾನೊಂದು ಕಾಲದಲ್ಲಿ ಜ್ಞಾನ ವಿಜ್ಞಾನಗಳೆಂದು ಬೇರೆಯಾದ ತತ್ವ ಮತ್ತೆ ಒಂದುಗೂಡುತ್ತಿದೆ; ಲೌಕಿಕ ವಿಜ್ಞಾನವು ಅತೀಂದ್ರಿಯವಾದ ವಸ್ತುಗಳನ್ನು ಕುರಿತು ವಿಚಾರ ಮಾಡು

ವಸ್ತು ಸೂಕ್ಷ್ಮವಾಗಿ ಬಿಟ್ಟಿದೆ. ಜೀವಶಾಸ್ತ್ರದ 'ಜೀನ್' ಗಳೂ ಭೌತ ಶಾಸ್ತ್ರದ 'ಎಲೆಕ್ಟ್ರಾನ್' ಗಳೂ ಇಂಥವು. ಭೌತಶಾಸ್ತ್ರವು ಇಂದು ವಸ್ತು ಶಕ್ತಿ ಇವು ಬೇರೆ ಬೇರೆಯೇ ಒಂದೇ ಎಂದು ವಿಚಾರ ಮಾಡುತ್ತಿದೆ; ಜಗತ್ತಿನಲ್ಲಿರುವ ವಸ್ತುವೆಲ್ಲಾ ಮೂಲತಃ ಧನ ವಿದ್ಯುತ್ತು ಋಣ ವಿದ್ಯುತ್ತು ಎಂದು ಹೇಳಬಹುದು; ಅವೂ ಒಂದೇ ಎಂದು ಹೇಳಿದರೂ ಹೇಳಬಹುದು—ಎಂಬ ಸಿದ್ಧಾಂತಕ್ಕೆ ಬರುತ್ತಿದೆ.

ಈಗಿನ ಕಾಲವನ್ನು ವಿಜ್ಞಾನದ ಯುಗವೆಂದು ಕರೆಯುವುದು ರೂಢಿ. ಪ್ರಕೃತಿ ವಿಜ್ಞಾನ, ಭೌತವಿಜ್ಞಾನ, ಸಮಾಜ ವಿಜ್ಞಾನ ಮುಂತಾದವು ಬೆಳೆದು ಶಾಸ್ತ್ರೀಯವಾಗಿ ಪ್ರಯೋಗಗಳನ್ನು ನಡಸಿ, ಬಾಹ್ಯಪ್ರಪಂಚವನ್ನು ಪರಿಶೋಧಿಸಿ, ಮಾನವ ಜೀವನದಲ್ಲಿ ರೋಗ ರುಜಿನಾದಿಗಳನ್ನು ನಿವಾರಣೆ ಮಾಡುವುದರಿಂದಲೂ ನಾನಾ ಭೋಗ ಸಾಧನಗಳನ್ನು ಒದಗಿಸುವುದರಿಂದಲೂ ಪ್ರಾಶಸ್ತ್ಯವನ್ನು ಪಡೆದಿರುವುದ ರಿಂದ ಹೀಗೆ ಹೇಳುತ್ತಾರೆ. ಆದರೆ ಈ ಶಾಸ್ತ್ರಗಳು ಬೆಳೆದಿರುವುದು ಮುಖ್ಯವಾಗಿ ಆಯಾ ಶಾಸ್ತ್ರಜ್ಞರಿಗೆ ಇರುವ ಜ್ಞಾನಪಿಪಾಸೆಯಿಂದ, ಸ್ವಾಭಾವಿಕ ಪ್ರವೃತ್ತಿಯಿಂದ, ಸಂಸ್ಕಾರ ವಿಶೇಷಗಳಿಂದ. ಆಧ್ಯಾತ್ಮಿಕ ಶಾಸ್ತ್ರಗಳು ಜನಜೀವನದಲ್ಲಿ ಈ ಲೌಕಿಕ ವಿಜ್ಞಾನಗಳಷ್ಟು ಸಾರ್ವತ್ರಿಕ ವಾಗಿ ಪ್ರಭಾವಕಾರಿಗಳಲ್ಲವಾದ್ದರಿಂದ ಇಂದು ತಮ್ಮ ಪ್ರಾಶಸ್ತ್ಯವನ್ನು ಕಳೆದುಕೊಂಡಿವೆ, ಹಿಂದಕ್ಕೆ ಬಿದ್ದಿವೆ; ಆದರೂ ಜೀವನದ ಗಹನ ಸಮಸ್ಯೆಗಳಲ್ಲಿ ಪ್ರಬಲವಾದ ಆಸಕ್ತಿಯುಳ್ಳ ಕೆಲವು ಚಿಂತಾಶೀಲರಿಂದ ಮುಂದುವರಿಯುತ್ತಿವೆ. ಪ್ರಪಂಚದ ಯಾವ ಪ್ರಯೋಗ ಶಾಲೆಯಲ್ಲಿ ಪರೀಕ್ಷೆ ನಡೆದು ಒಂದು ಹೊಸ ಸಂಗತಿ ತಿಳಿದುಬಂದರೂ, ಹೇಗೆ ಮಿಕ್ಕ ಕಡೆಯ ವೈಜ್ಞಾನಿಕರು ಅದನ್ನು ಪರಿಶೀಲಿಸಿ, ಸಮರ್ಥಿಸಿ ಅಥವಾ ತಿದ್ದಿ, ತಿಳಿವನ್ನು ರಾಶಿಹಾಕುತ್ತಿದ್ದಾರೆಯೋ ಹಾಗೆಯೇ ತತ್ತ್ವ ಶಾಸ್ತ್ರಜ್ಞರಲ್ಲಿಯೂ, ಯಾವ ದೇಶದ ಯಾವ ಜನಾಂಗದವರು ಯೋಚಿಸಿ ಒಂದು ತತ್ತ್ವವನ್ನು ಸೂತ್ರಿಸಿದರೂ ಅದನ್ನು ಮಿಕ್ಕವರು ಪರಿಶೀಲಿಸಿ ಅದರ ಖಂಡನ ಮಂಡನಗಳಲ್ಲಿ ತೊಡಗುತ್ತಾರೆ. ಸತ್ಯ ತತ್ತ್ವಗಳು ಸೂರ್ಯ ಚಂದ್ರರಂತೆ ಪ್ರಪಂಚಕ್ಕೆಲ್ಲಾ ಒಂದೇ ಹೊರತು ಬೇರೆ ಅಲ್ಲ.

ಮತ್ತು ಈಗ ಯಾವ ತತ್ವವನ್ನು ಹೇಗೆ ಹೇಳುವುದಕ್ಕೂ ಯಾರೂ ಹೆದರಿ ಹಿಂತೆಗೆಯಬೇಕಾಗಿಲ್ಲ; ಈಗ, ಸೂರ್ಯ ತಿರುಗುವುದಿಲ್ಲ, ಭೂಮಿ ತಿರುಗುತ್ತದೆ ಎಂದರೆ ಯಾರಿಗೂ ಶಿಕ್ಷೆಯಾಗುವುದಿಲ್ಲ; ಈಗ, ಯಾವುದೋ ಒಂದು ರಾಜಕೀಯ ಉದ್ದೇಶ ಸ್ವಾರ್ಥಸಾಧನೆಗಳನ್ನು ಬಿಟ್ಟು ಯಾವುದೂ 'ಗುಹ್ಯಾತ್ ಗುಹ್ಯತರ' ವಾಗಿರಬೇಕಾದದ್ದಿಲ್ಲ. ಜ್ಞಾನಕ್ಕೆ ಪೂರ್ವವೇನು ಪಶ್ಚಿಮವೇನು? ಸೂರ್ಯನು ಪೂರ್ವದಲ್ಲಿ ಹುಟ್ಟಿ ಪಶ್ಚಿಮದಲ್ಲಿ ಮುಳುಗುವಂತೆ ಕಂಡರೂ, ವಸ್ತುತಃ ಪೂರ್ವವೇ ಪಶ್ಚಿಮ, ಪಶ್ಚಿಮವೇ ಪೂರ್ವ; ಹುಟ್ಟುವುದೇ ಮುಳುಗುವುದು, ಮುಳುಗುವುದೇ ಹುಟ್ಟುವುದು. ಇನ್ನೊಂದು ವಿಧದಲ್ಲಿ ನೋಡಿದರೆ, ಪೂರ್ವವೂ ಇಲ್ಲ ಪಶ್ಚಿಮವೂ ಇಲ್ಲ, ಹುಟ್ಟುವುದೂ ಇಲ್ಲ ಮುಳುಗುವುದೂ ಇಲ್ಲ; ಇವೆಲ್ಲಾ 'ಉಪಾಧಿ' ಯ ನಿಮಿತ್ತದಿಂದ, ಕೇವಲ ವ್ಯಾವಹಾರಿಕ ಎನ್ನಬೇಕಾಗುತ್ತದೆ. ಹೀಗೆ ನಮಗೆ ದೊರೆತಿರುವ ಮತ್ತು ದೊರೆಯುತ್ತಿರುವ ಜ್ಞಾನವನ್ನು, ನಾನಾ ದಿಕ್ಕಿನಿಂದ ಶೇಖರಿಸಿ ಹೋಲಿಸಿ ಹೊಂದಿಸಿ ತಿದ್ದಿ ಸರಿಪಡಿಸಿ ರಚಿಸಿಕೊಂಡರೆ ತತ್ವವು ಪ್ರಸನ್ನವಾಗಿ ತನ್ನ ಕಲ್ಯಾಣತಮವಾದ ರೂಪವನ್ನು ತೋರಿಸೀತು. ಭಕ್ತಿಯಿಂದ ಉಪಾಸನೆ ಮಾಡದಿದ್ದರೆ ಜ್ಞಾನ ಒಲಿಯುವುದಿಲ್ಲ. ನಾವು ತತ್ವವನ್ನು ನೋಡಿಬಿಟ್ಟಿದ್ದೇವೆ, ನಾವು ತಿಳಿದಿರುವುದೇ ಸರಿ, ಎಂಬ ಅಹಂಭಾವ ಧೋರಣೆಗಳನ್ನು ಇಟ್ಟುಕೊಂಡು ಹೊರಟರೆ, ತತ್ವವು ಅಗಾಧವಾಗಿ ಬ್ರಹ್ಮ ವಿಷ್ಣುಗಳಿಗೂ ಅದರ ತುದಿ ಮೊದಲು ಸಿಕ್ಕದಂತಾದೀತು. ದೇವರು ಒಂದು ಸಕ್ಕರೆಯ ಪರ್ವತದ ಹಾಗೆ; ಮನುಷ್ಯನು ಒಂದು ಇರುವೆಯ ಹಾಗೆ. ಎಷ್ಟು ವರ್ಷ, ಎಷ್ಟು ಇರುವೆಗಳು ಕಚ್ಚಿ ಎಳೆದುಕೊಂಡು ಹೋಗಿ ಆ ಪರ್ವತವನ್ನು ತಿಂದು ಮುಗಿಸಿಯಾವು? —ಎಂದು ರಾಮಕೃಷ್ಣ ಪರಮಹಂಸರು ಕೇಳಿದರಂತೆ! ಜಗತ್ತು—ಕೇವಲ ಭೌತಿಕವಾದ ಬಾಹ್ಯಜಗತ್ತೇ—ಈಗ ನಮಗೆ ತಿಳಿದಿರುವಂತೆ ಅಗಾಧವಾದದ್ದು. "ಎಲ್ಲೋ ಕೆಲವು ನಕ್ಷತ್ರಗಳು ನಮ್ಮ ಭೂಮಿಗಿಂತ ಚಿಕ್ಕವಿರಬಹುದು; ಆದರೆ ಮಿಕ್ಕವೆಲ್ಲಾ ನಮ್ಮ ಭೂಮಿಯಂಥ ಲಕ್ಷಾಂತರ ಭೂಮಿಗಳನ್ನು ತಮ್ಮಲ್ಲಿ ಅನಾಯಾಸವಾಗಿ ಒಳಕೊಳ್ಳ

ಬಹುದಾದಂಥವು. ಇಂಥ ನಕ್ಷತ್ರಗಳಲ್ಲಿ ಒಂದೊಂದು ಎಷ್ಟೆಷ್ಟು ದೂರ ಇದೆ ಎಂದರೆ ಅದರಿಂದ ಮೊದಲು ಹೊರಟ ಬೆಳಕೇ ಇನ್ನೂ ನಮ್ಮ ಭೂಮಿಯನ್ನು ಸೇರಿಲ್ಲ. ಇಂಥವು ಪ್ರಪಂಚದ ಎಲ್ಲಾ ಸಮುದ್ರಗಳ ತೀರಗಳಲ್ಲಿಯೂ ಎಷ್ಟು ಮರಳುಕಾಳುಗಳಿವೆಯೋ ಅಷ್ಟು ಅಸಂಖ್ಯಾತ ವಾಗಿ ಇವೆ. ಇವೊಂದೊಂದೂ ಆಕಾಶದಲ್ಲಿ ಒಂಟೊಂಟಿಯಾಗಿ ಓಡಾಡಿ ಕೊಂಡಿವೆ; ಅವಕ್ಕೆ ಪರಸ್ಪರ ಎಷ್ಟು ದೂರವಿದೆಯೆಂದರೆ ಅವು ಪ್ರಾಯಶಃ ಲಕ್ಷಾಂತರ ವರ್ಷಗಳಿಗೊಂದು ಸಾರಿಯೂ ಒಂದಕ್ಕೊಂದು ಡಿಕ್ಕಿ ಹೊಡೆಯುವಂತಿಲ್ಲ."—ಎಂದು ಒಬ್ಬ ದೊಡ್ಡ ಆಧುನಿಕ ವೈಜ್ಞಾನಿಕರು ಜಗತ್ತಿನ ಘನತೆ ವೈಶಾಲ್ಯಗಳನ್ನು ಸೂಚಿಸಿದ್ದಾರೆ.* ಇಂಥ ಜಗತ್ತಿನ ತತ್ವವನ್ನು ತನ್ನ ಒಂದು ಸಣ್ಣ ತೆಂಗಿನಕಾಯಿ ಗಾತ್ರದ ತಲೆಯಲ್ಲಿ ಅಡಗಿಸಿಕೊಳ್ಳಬೇಕೆನ್ನುವ ಮನುಷ್ಯನೇ ಒಂದು ಅದ್ಭುತ ಸೃಷ್ಟಿ. ಭೋಗ್ಯವಸ್ತುಗಳಿರಲಿ, ಅನ್ನ ನೀರನ್ನೂ ಬಿಟ್ಟು ಈ ತತ್ವದ ಪರಿಶೀಲನೆ ಯಲ್ಲಿ ಮಗ್ನರಾಗುವ ತಾತ್ವಿಕರೂ ಉಂಟು. "ಈ ಭೂಮಿಯ ಆಚೆ ಏನಿದೆ? ಅದರ ಆಚೆ ಏನಿದೆ? ಇನ್ನೂ ಆಚೆಗೆ? ಇನ್ನೂ, ಇನ್ನೂ ಆಚೆಗೆ? . . ." ಎಂದು ಪರಮ ಕುತೂಹಲದಿಂದ ಕೆಲವು ವೇಳೆ ಚಿಕ್ಕ ಚಿಕ್ಕ ಹುಡುಗರೂ ಕೇಳುತ್ತಾರೆ. ಈ ಕುತೂಹಲವನ್ನು ಅಡಗಿಸು ವುದು ಹೇಗೆ?

ಇಂದಿನ ವ್ಯಾಸಂಗ ಕ್ರಮದಲ್ಲಿಯೂ, ಪ್ರಪಂಚದ ಎಲ್ಲಾ ವಿಶ್ವ ವಿದ್ಯಾನಿಲಯಗಳಲ್ಲಿಯೂ, ತತ್ವ ಜ್ಞಾನಕ್ಕೆ ಪ್ರಾಶಸ್ತ್ಯ ಕಡಮೆ ಯಾಗಿದೆ. ಆದರೂ, ಸಾಧಾರಣವಾಗಿ ಪ್ರತಿಯೊಬ್ಬನ ಜೀವನದ ಲ್ಲಿಯೂ ಒಂದಲ್ಲ ಒಂದು ಸಾರಿ ತತ್ವಚಿಂತನೆಯ ಕಡೆಗೆ ಮನಸ್ಸು ತಿರುಗುತ್ತದೆ. ಆಗ ಮಿಕ್ಕದ್ದೆಲ್ಲವೂ ಪೊಳ್ಳಾಗಿ ಕಾಣುತ್ತದೆ. ಮನುಷ್ಯನು ಸತ್ತ ಮೇಲೆ ಏನಾದರೇನು? ಇದ್ದರೇನು, ಇಲ್ಲದಿದ್ದರೇನು? ಆದರೂ ಹುಡುಗನಾದ ನಚಿಕೇತನಿಗೆ ಅದೇ ದೊಡ್ಡದಾಯಿತು. ಈ ಸಂದರ್ಭ ದಲ್ಲಿ 'ಚತುರ್ವಿಧಾ ಭಜಂತೇ ಮಾಂ ಜನಾಸ್ಸುಕೃತಿನೋಽರ್ಜುನ ।

---

* ಜೀನ್ಸ್ ಅವರ "ದಿ ಮಿಸ್ಟೀರಿಯಸ್ ಯೂನಿವರ್ಸ್."

ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ||' ಎಂಬ ಗೀತಾವಾಕ್ಯವು ಜ್ಞಾಪಕಕ್ಕೆ ಬರುತ್ತದೆ; ಕೇವಲ ಕುತೂಹಲ ಸಂತೃಪ್ತಿಯೇ ಅಲ್ಲ, ಅನಿಷ್ಟ ನಿವಾರಣೆ ಇಷ್ಟಪ್ರಾಪ್ತಿಗಳೇ ಅಲ್ಲ, ಇವುಗಳಿಗಿಂತ ಇನ್ನೂ ಘನವಾದ, ಪ್ರಬಲವಾದ, ಇನ್ನೇನೋ ಒಂದು ಶಕ್ತಿ ತತ್ತ್ವಾನುಸಂಧಾನದಲ್ಲಿ ಪ್ರವೃತ್ತಿಯುಂಟುಮಾಡುವುದೆನ್ನಿಸುತ್ತದೆ. ಆದ್ದರಿಂದ ತತ್ವಶಾಸ್ತ್ರವು ನಿಷ್ಪ್ರಯೋಜನವಾದದ್ದು, ಬರಿಯ ಕಂಠಶೋಷಣೆ, ನಮ್ಮ ಜೀವನಕ್ಕೆ ಸಂಬಂಧವೇ ಇಲ್ಲದ್ದು ಎಂಬುದನ್ನು ಒಪ್ಪುವುದಕ್ಕಾಗುವುದಿಲ್ಲ. ಬಾಹ್ಯವಾದ ಸುಖಜೀವನಕ್ಕೆ ವಿಜ್ಞಾನವೆಷ್ಟು ಆವಶ್ಯಕವೋ ಆಂತರವಾದ ಶಾಂತಜೀವನಕ್ಕೆ ತತ್ವಜ್ಞಾನವೂ ಅಷ್ಟು ಆವಶ್ಯಕ.* . . .

* ಶ್ರೀಮಾನ್ ಜಿ. ಹನುಮಂತರಾವ್, ಎಂ. ಎ., ಅವರ "ಆಧುನಿಕ ತತ್ವಶಾಸ್ತ್ರ ಸಮಸ್ಯೆಗಳು" ಎಂಬ ಗ್ರಂಥಕ್ಕೆ ಬರೆದಿರುವ ಮುನ್ನುಡಿಯಿಂದ ತೆಗೆದುಕೊಂಡದ್ದು.—೧೯೪೫.

# ದೇವೀಭಾಗವತ

## ೧

"ದೇವೀಭಾಗವತ" * ವೆಂದರೆ ದೇವಿಯ ಅಥವಾ ದೇವೀಭಗವತಿಯ ಮಹಿಮೆಯನ್ನು ತಿಳಿಸುವ ಗ್ರಂಥ. ಈ ದೇವಿ ಯಾರೆಂಬುದನ್ನು ಮೊಟ್ಟಮೊದಲೇ ಮಂಗಳಶ್ಲೋಕದಲ್ಲಿ ಸೂಚಿಸಿದೆ :—

ಸರ್ವ ಚೈತನ್ಯ ರೂಪಾಂ ತಾಂ ।
ಆದ್ಯಾಂ ವಿದ್ಯಾಂ ಚ ಧೀಮಹಿ ।
ಬುದ್ಧಿಂ ಯಾ ನಃ ಪ್ರಚೋದಯಾತ್ ॥ †

ಆದಿಶಕ್ತಿಯೇ ಆ ದೇವಿ. ಅವಳಿಗೆ ಮೂಲಾವಿದ್ಯಾ, ಮಹಾಮಾಯಾ, ಪರಾಪ್ರಕೃತಿ, ಭುವನೇಶ್ವರೀ ಮುಂತಾದ ಹೆಸರುಗಳೂ ಉಂಟು. ಪರಬ್ರಹ್ಮದ ಶಕ್ತಿಯೇ ಆ ದೇವಿ ಎಂದು ಹೇಳಿದರೂ ಹೇಳಬಹುದು.

"ಪುರಾಣ" ವೆಂದರೆ ಹಿಂದಿನದು, ಹಳೆಯದು, ಪುರಾತನವಾದದ್ದು. ಪುರಾಣವಲ್ಲಿ ಹೇಳಿರುವ ವಿಷಯ ಬಹು ಹಿಂದಿನಿಂದ ತಿಳಿದು ಬಂದಿರುವ ಸಂಗತಿಯಾದ್ದರಿಂದ ಅದಕ್ಕೆ ಈ ಹೆಸರು ಸಲ್ಲುತ್ತದೆ.

ರಾಮಾಯಣ ಭಾರತ ಭಾಗವತಗಳನ್ನು ಓದಿ ಅರ್ಥವಿವರಿಸುತ್ತಿದ್ದರೆ "ಪುರಾಣ ಹೇಳುತ್ತಾರೆ" ಎನ್ನುವುದು ರೂಢಿ. ಇವುಗಳಲ್ಲಿ ನಿಜ

---

*ಶ್ರೀ ದೇವೀಭಾಗವತ ಮಹಾಪುರಾಣಂ (ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ ವಿವರಣೆಗಳೊಡನೆ) ಅನುವಾದಕರು : ಆಸ್ಥಾನ ಮಹಾವಿದ್ವಾನ್ ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ., ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ, ಪುಷ್ಪರತ್ನ ಸಂಖ್ಯಾ ೫. ಸಂಪುಟಗಳು ೧–೧೧. ಡೆಮ್ಮಿ ಅಷ್ಟಪತ್ರ ಪುಟಗಳು ೪,೫೮೮. ಪ್ರಥಮ ಮುದ್ರಣ, ೧೯೪೩–೧೯೪೫. ಬೆಲೆ, ಹನ್ನೊಂದು ಸಂಪುಟಗಳಿಗೂ ಒಟ್ಟು ೩೫ ರೂಪಾಯಿ. ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್, ಮೈಸೂರು ಮತ್ತು ಅಕ್ಷರ ಕೃಪಾ ಬುಕ್ ಡಿಪೋ, ಬೆಂಗಳೂರು ಸಿಟಿ, ಇವರಲ್ಲಿ ದೊರೆಯುತ್ತದೆ.

† ಇದು ಗಾಯತ್ರೀ ಛಂದಸ್ಸಿನಲ್ಲಿದೆ ; ಮತ್ತು ಅರ್ಥದಲ್ಲಿ ಪ್ರಸಿದ್ಧವಾದ ಗಾಯತ್ರೀ ಮಂತ್ರವನ್ನು ಹೋಲುತ್ತದೆ.

ವಾಗಿ ಪುರಾಣವೆಂಬ ಹೆಸರಿಗೆ ತಕ್ಕದ್ದು ಭಾಗವತ ಒಂದೇ. ರಾಮಾಯಣ ಭಾರತಗಳೆರಡನ್ನೂ ಬೇರೆ ಒಂದು ಗುಂಪುಮಾಡಿ ಅವುಗಳನ್ನು "ಇತಿಹಾಸ" ಗಳೆಂದು ಕರೆಯುತ್ತಾರೆ. ಇತಿಹಾಸವೆಂದರೆ 'ಹೀಗೆ ಇತ್ತಂತೆ' ಎಂದು ಹೇಳುವ ಕಥೆ. ಶ್ರೀಮದ್ರಾಮಾಯಣವು ಇಂಥ ಹಿಂದಿನ ಕಥೆಯನ್ನು ಒಳಕೊಂಡದ್ದಾದರೂ, 'ಆದಿಕಾವ್ಯ' ವೆಂದು ಪ್ರಸಿದ್ಧವಾಗಿದೆ. ಮಹಾಭಾರತದಲ್ಲಿ ಪುರಾಣದಂಥ ಭಾಗಗಳು ಅನೇಕವಿದ್ದರೂ ಒಟ್ಟಿನ ಮೇಲೆ ಅದು 'ಇತಿಹಾಸ' ವೆಂದೇ ಪರಿಗಣಿತವಾಗಿದೆ. ಇತಿಹಾಸದಲ್ಲಿರುವುದು ಮುಖ್ಯವಾಗಿ ಮಹಾ ಪುರುಷರ ಕಥೆ; ಪುರಾಣಗಳಲ್ಲಿ ಹೇಳಿರುವುದು ದೇವದೇವತೆಯರ ಮಾಹಾತ್ಮ್ಯ.

ಪುರಾಣವು ಮೊದಲು ಒಂದೇ ಒಂದು ಇತ್ತೆಂದೂ ಅದರ ಆಧಾರದ ಮೇಲೆ ಹಲವು ಪುರಾಣಗಳು ಮತ್ತು ಉಪಪುರಾಣಗಳು ಆಮೇಲೆ ಹುಟ್ಟಿಕೊಂಡವೆಂದೂ ಹೇಳಲು ಆಧಾರವಿದೆ. ಇವುಗಳಲ್ಲಿ ಕೆಲವಾದರೂ ೧,೫೦೦ ವರ್ಷಗಳಿಗಿಂತ ಹಿಂದಿನವು. ಅವುಗಳಲ್ಲಿ ಬರುವ ಮೂಲ ಕಥೆಗಳು ಅದಕ್ಕೂ ಹಿಂದಿನವು.

ಈ ಪುರಾಣಗಳೆಲ್ಲವನ್ನೂ ವ್ಯಾಸರು ಬರೆದರೆಂದು ಹೇಳುವುದು ಸಂಪ್ರದಾಯ. ಆದರೆ ಇವಿಷ್ಟನ್ನೆಲ್ಲಾ ಒಬ್ಬರೇ ಬರೆಯುವುದು ಸಾಧ್ಯವೇ? * ಈ ಪ್ರಶ್ನೆಯನ್ನು ಪುರಾಣವೇ ಎತ್ತಿ, ವ್ಯಾಸರು ಒಬ್ಬರಲ್ಲ; ಈಗಾಗಲೇ ೨೭ ಜನ ವ್ಯಾಸರು ಕಳೆದು ಹೋಗಿದ್ದಾರೆ; ಅವರೆಲ್ಲರೂ ಪುರಾಣ ಬರೆದಿದ್ದಾರೆ.—ಎಂದು ಸಮಾಧಾನ ಹೇಳಿದೆ.

ಪುರಾಣವು, ಮಹಾಪುರಾಣ ಉಪಪುರಾಣ ಎಂದು ಎರಡು ವಿಧ. ಮಹಾ ಪುರಾಣಗಳು ಹದಿನೆಂಟು, ಉಪಪುರಾಣಗಳು ಹದಿನೆಂಟು ಎಂದು ಪ್ರಸಿದ್ಧಿ ಇದೆ. ಆದರೆ ಈ ಹದಿನೆಂಟರಲ್ಲಿ ಯಾವ ಯಾವುವು ಸೇರುತ್ತವೆ ಎಂಬ ವಿಚಾರದಲ್ಲಿ ಮತಭೇದವುಂಟು. ಮತ್ಸ್ಯ ಪುರಾಣದಲ್ಲಿ ಹೇಳಿರುವಂತೆ, ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗ

* ದೇವೀಭಾಗವತ ಒಂದರಲ್ಲಿಯೇ ೧೨ ಸ್ಕಂಧ (ಎಂದರೆ ಕಾಂಡ, ಪರ್ವ ಅಥವಾ ವಿಭಾಗ)ಗಳೂ ೩೧೮ ಅಧ್ಯಾಯಗಳೂ, ೧೮,೦೦೦ ಶ್ಲೋಕಗಳೂ ಇವೆ.

ವತ, ನಾರದೀಯ, ಮಾರ್ಕಂಡೇಯ, ಅಗ್ನೇಯ, ಭವಿಷ್ಯ, ಬ್ರಹ್ಮ ವೈವರ್ತ, ಲಿಂಗ, ವರಾಹ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ—ಇವು ಹದಿನೆಂಟೂ ಮಹಾಪುರಾಣಗಳು. ಸನತ್ಕು ಮಾರ, ನರಸಿಂಹ, ನಾರದೀಯ, ಶಿವ, ದೂರ್ವಾಸ, ಕಪಿಲ, ಮಾನವ, ಔಶನಸ, ವರುಣ, ಕಾಳಿಕಾ, ಸಾಂಬ, ನಂದಿ, ಸೌರ, ಪರಾಶರ, ಆದಿತ್ಯ, ಮಹೇಶ್ವರ, ಭಾಗವತ, ವಾಸಿಷ್ಠ—ಇವು ಹದಿನೆಂಟೂ ಉಪಪುರಾಣ ಗಳು.*

ಇವುಗಳಲ್ಲಿ 'ಭಾಗವತ' ವೆಂದರೆ ಶ್ರೀಮದ್ ಭಾಗವತವೇ, ದೇವೀಭಾಗವತವೇ, ಯಾವುದು ಮಹಾಪುರಾಣ, ಯಾವುದು ಉಪ ಪುರಾಣ ಎಂಬುದು ಸ್ಪಷ್ಟವಾಗಿಲ್ಲ. ದೇವೀಭಕ್ತರು ದೇವೀಭಾಗವತವೇ ಮಹಾಪುರಾಣವೆಂದೂ ವಿಷ್ಣುಭಕ್ತರು ಶ್ರೀಮದ್ ಭಾಗವತವೇ ಮಹಾ ಪುರಾಣವೆಂದೂ ಹೇಳುವುದು ಸಹಜ.

ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ—ಈ ಐದೂ ಪುರಾಣದ ಲಕ್ಷಣ. (ಮಹಾಪುರಾಣಕ್ಕೆ ಹತ್ತು ಲಕ್ಷಣಗಳೆಂದು ಹೇಳುವುದೂ ಉಂಟು.) ಎಂದರೆ, ಪುರಾಣದಲ್ಲಿ ಹೇಳುವುದು, ಮುಖ್ಯ ವಾಗಿ, ಈ ಪ್ರಪಂಚ ಹುಟ್ಟಿದ್ದು ಬೆಳೆದದ್ದು, ಇಲ್ಲಿ ಆಳಿದ ರಾಜರು, ಅವರ ವಂಶದ ಚರಿತ್ರೆ, ಇವುಗಳ ವಿವರ. ಹೀಗೆಂದ ಕೂಡಲೆ, ಅದರಲ್ಲಿ ವಿಜ್ಞಾನ, ಚರಿತ್ರೆ, ಭೂಗೋಳ ಇವೆಯೆಂದು ತಿಳಿಯಬಾರದು. ಇಂಥ ಈಗಿನ ಗ್ರಂಥಗಳ ದೃಷ್ಟಿಯಿಂದ ಪುರಾಣವನ್ನು ತೂಗಿ ಖಂಡನೆ ಮಾಡಲೂ ಬಾರದು. ಅದು ನ್ಯಾಯುವಲ್ಲ. ಈಗ್ಗೆ ಸುಮಾರು ೧,೫೦೦ ಅಥವಾ ೨,೦೦೦ ವರ್ಷಗಳ ಕೆಳಗೆ ಈ ಪುರಾಣಕರ್ತರು ತಮಗೆ ಏನು ತಿಳಿದಿತ್ತೋ, ತಾವು ಯಾವುದು ನಿಜವೆಂದು ನಂಬಿಕೊಂಡಿದ್ದರೋ ಅವು ಗಳನ್ನು ಬರೆದಿಟ್ಟಿದ್ದಾರೆ. ಸುಳ್ಳು ಹೇಳಿ ಯಾರನ್ನೂ ಮೋಸಗೊಳಿಸು ವುದು ಅವರ ಉದ್ದೇಶವಾಗಿರಲಿಲ್ಲ.

* ದೇವೀಭಾಗವತ ಸ್ಕಂಧ ೧, ಅಧ್ಯಾಯ ೩ ನ್ನು ನೋಡಿ. ಇಲ್ಲಿಯೂ ಇದೇ ಪಟ್ಟಿಗಳು ಇವೆ.

ಕೆಲವು ಪುರಾಣಗಳಲ್ಲಿ ಈ ಐದು ಅಂಶಗಳು ಹೆಚ್ಚು ಕಡಮೆಯಾಗಿರುತ್ತವೆ. ಮತ್ತೆ ಕೆಲವು ಪುರಾಣಗಳಲ್ಲಿ ಇವುಗಳ ಜೊತೆಗೆ ಹಲವು ಶಾಸ್ತ್ರವಿಚಾರಗಳು ಸೇರಿರುವುದೂ ಉಂಟು. ಯಾವುದು ಸೇರಲಿ ಬಿಡಲಿ, ಪುರಾಣದ ದೃಷ್ಟಿ ಧಾರ್ಮಿಕ, ಲೌಕಿಕವಲ್ಲ; ಉದ್ದೇಶ, ದೇವತಾ ಮಹಿಮೆಯ ಬೋಧನೆ. ಒಟ್ಟಿನ ಮೇಲೆ 'ಪುರಾಣ'ವು ಧರ್ಮ, ದೈವಭಕ್ತಿ, ಸದಾಚಾರ, ನೀತಿ ಇವುಗಳನ್ನು ವಿವರಿಸುವ ಗ್ರಂಥ. ಆದರೆ ಇವೆಲ್ಲವೂ ಕಥೆ ಉಪಕಥೆ ಒಳಕಥೆಗಳ ಮಧ್ಯೆಯೋ ಅವುಗಳ ಮೂಲಕವೋ ಬರುತ್ತವೆ.

೨

ಇತಿಹಾಸ ಪುರಾಣಗಳನ್ನು ಸಂಸ್ಕೃತ ಮೂಲದಿಂದ ಕನ್ನಡಿಸಿ ಗದ್ಯ ರೂಪದಲ್ಲಿ ಪ್ರಕಟಿಸುವ ಕೆಲಸವು ಆರನೆಯ ಚಾಮರಾಜ ಒಡೆಯರವರ (೧೬೧೭-೧೬೩೭) ಕಾಲದಲ್ಲಿಯೇ ಆರಂಭವಾಯಿತು; ಚಿಕ್ಕದೇವರಾಜ ಒಡೆಯರವರು, ಮುಮ್ಮಡಿ ಕೃಷ್ಣರಾಜ ಒಡೆಯರವರು, ಚಾಮರಾಜ ಒಡೆಯರವರು ಇವರ ಕಾಲದಲ್ಲಿ ಮುಂದುವರೆಯಿತು. ಆದರೆ ರಾಮಾಯಣ ಭಾರತ ಭಾಗವತಗಳು ಸಮಗ್ರವಾಗಿ ಭಾಷಾಂತರವಾದರೂ, ಪುರಾಣಗಳೂ ಉಪಪುರಾಣಗಳೂ ಇನ್ನೂ ಪೂರ್ತಿಯಾಗಿ ಕನ್ನಡಕ್ಕೆ ಬಂದಿರಲಿಲ್ಲ. ಇವುಗಳನ್ನು ಸಂಸ್ಕೃತ ಮೂಲದೊಡನೆ ಆದಷ್ಟು ಸಮಗ್ರವಾಗಿಯೂ ಒಂದು ವ್ಯವಸ್ಥಿತವಾದ ರೀತಿಯಲ್ಲಿಯೂ ಕನ್ನಡಿಸಿ ಪ್ರಕಟಿಸುವ ಘನಕಾರ್ಯವು ಶ್ರೀ ಜಯಚಾಮರಾಜೇಂದ್ರ ಒಡೆಯರವರ ಅಪ್ಪಣೆಯ ಮೇರೆಗೆ ನಡೆಯುತ್ತಿದೆ. ಇದನ್ನು ಉಭಯ ಭಾಷಾಪಂಡಿತರಾದ ಆಸ್ಥಾನ ವಿದ್ವಾಂಸರು ಮಾಡುತ್ತಿದ್ದಾರೆ. ಈಗಾಗಲೇ ಹಲವು ಪುರಾಣಗಳೂ ಉಪಪುರಾಣಗಳೂ ಅಚ್ಚಾಗಿ ಬಂದಿವೆ. ಇನ್ನು ಕೆಲವು ಅಚ್ಚಾಗುತ್ತಿವೆ. ಶ್ರೀಮನ್ಮಹಾರಾಜರವರೇ ತಮ್ಮ ಚಿತ್ತಕ್ಕೆ ತೆಗೆದುಕೊಂಡು, ಶ್ರದ್ಧೆವಹಿಸಿ, ಔದಾರ್ಯ ತೋರಿಸಿ ಮುಂದೆ ಬರದೆ ಇದ್ದಿದ್ದರೆ ಇಷ್ಟು ದೊಡ್ಡ ಕೆಲಸವು, ಇಷ್ಟು ಚೆನ್ನಾಗಿಯೂ ಚುರುಕಾಗಿಯೂ ನಡೆಯುತ್ತಿರಲಿಲ್ಲ. ಇವುಗಳಿಂದ ತಮ್ಮ ಭಾಷಾಸಾಹಿತ್ಯ ಸಂಸ್ಕೃತಿಗಳಿಗೆ ಆಗಿರುವ ಮಹೋಪಕಾರಕ್ಕಾಗಿ ಕನ್ನಡಿಗರು ಶ್ರೀಮನ್ಮಹಾರಾಜರವರಿಗೆ ಎಷ್ಟು ಕೃತಜ್ಞರಾಗಿದ್ದರೂ ಸಾಲದು.

೩

ಪ್ರಕೃತಗ್ರಂಥವನ್ನು ಶೋಧಿಸಿ ಅನುವಾದಿಸಿರುವವರು ಸಂಸ್ಕೃತ ಕನ್ನಡ ಇಂಗ್ಲಿಷ್ ಭಾಷೆಗಳಲ್ಲಿಯೂ ಪ್ರಾಚ್ಯ ಮತ್ತು ಪಾಶ್ಚಾತ್ಯ ದರ್ಶನಗಳಲ್ಲಿಯೂ ಪ್ರಶಸ್ತಿ ಪಡೆದ ವಿದ್ವಾಂಸರು. ಅವರ ಅನುವಾದವು ಪದಕ್ಕೆ ಪದವಿಟ್ಟು ಮಾಡಿದ ಭಾಷಾಂತರವಲ್ಲ. ಮೂಲದ ಅರ್ಥವು ಸ್ಪಷ್ಟವಾಗಬೇಕೆಂಬ ಉದ್ದೇಶದಿಂದ, ಅದನ್ನು ಹಿಗ್ಗಿಸಿ ವಿವರಿಸಿರುವುದೇ ಹೆಚ್ಚು. ಅಧ್ಯಾಯಗಳ ಮೊದಲಲ್ಲಿ ಕೊನೆಯಲ್ಲಿ, ಉಪಾಖ್ಯಾನದ ಕೊನೆಗೆ, ವಿಮರ್ಶೆಗಳಿರುತ್ತವೆ. ಇವು ವ್ಯಾಖ್ಯಾನ, ಇತರ ಪುರಾಣ, ದರ್ಶನಗಳು, ಧಾರ್ಮಿಕ ಗ್ರಂಥಗಳು ಇವುಗಳಿಂದ ತೆಗೆದುಕೊಂಡ ವಿಷಯಗಳನ್ನು ಒಳಕೊಂಡಿರುತ್ತವೆ. ಇದಲ್ಲದೆ, ಪ್ರತಿ ಸಂಪುಟದ ಮೊದಲಿನಲ್ಲಿಯೂ ಬರೆದಿರುವ ಮುನ್ನುಡಿಯೊಳಗೆ ಶ್ರೀಮರ್ಾ ಶಾಸ್ತ್ರಿಗಳು ವೇದ ಶಾಸ್ತ್ರ ಪುರಾಣ ಸಾಹಿತ್ಯ ಇವುಗಳ ಸ್ವರೂಪ, ಸಂಬಂಧ, ಸ್ಥಾನ, ದೇವೀತತ್ತ್ವ ದೇವರು ಕರ್ಮ ಮುಂತಾದ ವಿಚಾರಗಳನ್ನು ಚರ್ಚಿಸಿದ್ದಾರೆ. ಒಂದು ಮಾತಿನಲ್ಲಿ ಹೇಳುವುದಾದರೆ, ಶ್ರೀಮರ್ಾ ಶಾಸ್ತ್ರಿಗಳು ಮಾಡಿರುವ ಕೆಲಸವು ತುಂಬ ತೃಪ್ತಿಕರವಾಗಿಯೂ ಶ್ಲಾಘ್ಯವಾಗಿಯೂ ಇದೆ. ಮುದ್ರಣ ಚೆನ್ನಾಗಿದೆ. ಅಚ್ಚಿನ ತಪ್ಪುಗಳಿಲ್ಲ.

೪

ಮುಂದೆ, ಈ ಪುರಾಣದ ಹನ್ನೆರಡು ಸ್ಕಂಧಗಳಲ್ಲಿ ಅಡಗಿರುವ ವಿಷಯವನ್ನು ಸಂಗ್ರಹಿಸಿ ಕೊಟ್ಟಿದೆ :—

೧ ನೆಯ ಸ್ಕಂಧ—ಪೀಠಿಕೆ—ಶುಕನ ವೃತ್ತಾಂತ– ಹಯಗ್ರೀವಾವತಾರ—ಮಧುಕೈಟಭಸಂಹಾರ– ಬುಧನ ಉತ್ಪತ್ತಿ—ಊರ್ವಶೀ ಪುರೂರವರ ಕಥೆ.

೨ ನೆಯ ಸ್ಕಂಧ :—ವ್ಯಾಸರ ತಾಯಿತಂದೆಗಳಿಂದ ಹಿಡಿದು ಜನಮೇಜಯರಾಯನ ಸರ್ಪಯಾಗದವರೆಗೆ ಭಾರತ ಕಥೆಯ ಸಂಗ್ರಹ —ರುರುಪ್ರಮದ್ವರ, ಗರುಡನು ಅಮೃತವನ್ನು ತಂದದ್ದು ಮುಂತಾದ ಉಪಕಥೆಗಳು.

**೩ ನೆಯ ಸ್ಕಂಧ**: ಸುದರ್ಶನನ ಮತ್ತು ಶ್ರೀರಾಮನ ಕಥೆಗಳು.

**೪ ನೆಯ ಸ್ಕಂಧ**: ನರನಾರಾಯಣರ ವೃತ್ತಾಂತ—ಅವರಿಗೂ ಪ್ರಹ್ಲಾದನಿಗೂ ಯುದ್ಧ—ಭಾಗವತ ಕಥೆ.

**೫ ನೆಯ ಸ್ಕಂಧ**:— ಮಹಿಷ, ಚಂಡ, ಮುಂಡ, ಶುಂಭ, ನಿಶುಂಭ, ರಕ್ತಬೀಜ ಮುಂತಾದ ರಾಕ್ಷಸರ ಸಂಹಾರ—ಸುರಥರಾಜನು ತನ್ನ ರಾಜ್ಯವನ್ನೂ ಸಮಾಧಿಯೆಂಬ ವೈಶ್ಯನು ಜೀವನ್ಮುಕ್ತಿಯನ್ನೂ ಪಡೆದ ವೃತ್ತಾಂತ.

**೬ ನೆಯ ಸ್ಕಂಧ**:—ವೃತ್ರಾಸುರನ ಕಥೆ-ನಹುಷನ ವೃತ್ತಾಂತ-ಕರ್ಮಗತಿ—ಯುಗಧರ್ಮ—ತೀರ್ಥಕ್ಷೇತ್ರಗಳು—ವಸಿಷ್ಠ ವಿಶ್ವಾಮಿತ್ರರ ಹೋರಾಟ-ಹರಿಶ್ಚಂದ್ರ ಶುನಶ್ಶೇಫರ ವೃತ್ತಾಂತ—ಹೈಹಯನ ವೃತ್ತಾಂತ—ನಾರದಪರ್ವತರ ಮತ್ತು ನಾರದ ಕಾಲಧ್ವಜರ ಕಥೆಗಳು.

**೭ ನೆಯ ಸ್ಕಂಧ**:—ಸೂರ್ಯ ಚಂದ್ರ ವಂಶಗಳ ರಾಜರ ಚರಿತ್ರೆ—ಸುಕನ್ಯಾ ಚವನ ದೇವೇಂದ್ರರ ಕಥೆ—ಸತ್ಯವ್ರತ ತ್ರಿಶಂಕುವಿನ ಕಥೆ—ಶುನಶ್ಶೇಫ ಹರಿಶ್ಚಂದ್ರರ ಕಥೆ—ದುರ್ಗಾ ಅಥವಾ ಶತಾಕ್ಷಿಯಿಂದ ದುರ್ಗಮ ರಾಕ್ಷಸನ ಸಂಹಾರ—ದೇವೀಗೀತಾ.

**೮ ನೆಯ ಸ್ಕಂಧ**:—ವರಾಹಾವತಾರ—ಸ್ವಾಯಂಭುವ ಮನುವಿನ ವಂಶದ ವರ್ಣನೆ—ಭೂಮಂಡಲದ ಸ್ವರೂಪ—ಗ್ರಹ ನಕ್ಷತ್ರಗಳು—ಅಧೋಲೋಕಗಳು—ನರಕಗಳು.

**೯ ನೆಯ ಸ್ಕಂಧ**:—ಮೂಲಪ್ರಕೃತಿಯ ದುರ್ಗಾ ಮುಂತಾದ ಐದು ದೇವೀರೂಪಗಳು—ಗಂಗಾ ತುಲಸೀ ಸಾವಿತ್ರೀ ಲಕ್ಷ್ಮೀ ಸ್ವಾಹಾಸ್ವಧಾ ದಕ್ಷಿಣಾ ಷಷ್ಠೀ ಮಂಗಲಚಂಡೀ ಮನಸಾ ಸುರಭೀ ಮುಂತಾದ ದೇವಿಯರ ಉಪಾಖ್ಯಾನಗಳು.

**೧೦ ನೆಯ ಸ್ಕಂಧ**:—ಮನುಗಳು—ವಿಂಧ್ಯ ಮತ್ತು ಅಗಸ್ತ್ಯರ ಉಪಾಖ್ಯಾನ—ಮಹಾಕಾಳೀ ಮಹಾಲಕ್ಷ್ಮೀ ಮಹಾಸರಸ್ವತೀ ಮುಂತಾದವರ ಅವತಾರಗಳು.

೧೧ ನೆಯ ಸ್ಕಂಧ : -ಆಚಾರವಿಧಿ—ಶ್ರುತಿಸ್ಮೃತಿ ಪುರಾಣಗಳ ಪ್ರಾಮಾಣ್ಯ- ಶೌಚ—ಸ್ನಾನ—ರುದ್ರಾಕ್ಷಿ— ವಿಭೂತಿ—ಪುಂಡ್ರ ಧಾರಣೆ— ಸಂಧ್ಯಾವಂದನೆ- ಬ್ರಹ್ಮಯಜ್ಞ—ಗಾಯತ್ರೀಪುರಶ್ಚ ರಣ ಶಾಂತಿಗಳು—ವೈಶ್ವದೇವ—ಕೃಛ್ರ ಚಾಂದ್ರಾಯಣ ಮುಂತಾದ ವ್ರತಗಳು.

೧೨ ನೆಯ ಸ್ಕಂಧ :—ಗಾಯತ್ರೀ ಕವಚ, ಹೃದಯ, ಸ್ತೋತ್ರ, ಸಹಸ್ರನಾಮ, ದೀಕ್ಷೆಗಳು—ದೇವಿಯ ಆವಾಸವಾದ ಮಣಿ ದ್ವೀಪದ ವರ್ಣನೆ—ಫಲಶ್ರುತಿ.

೫

ಇವುಗಳನ್ನು ಪರಿಶೀಲಿಸಿದರೆ, ಈ ಪುರಾಣದಲ್ಲಿ ಉರ್ವಶೀ ಪುರೂ ರವರ ಪ್ರಣಯ ಕಥೆ, ವೃತ್ರಾಸುರನ ಸಂಹಾರ, ಶುನಶ್ಶೇಪನ ಬಿಡುಗಡೆ ಮುಂತಾದ ತುಂಬ ಹಳೆಯ ವೈದಿಕ ಕಥೆಗಳೂ, ವಸಿಷ್ಠ ವಿಶ್ವಾಮಿತ್ರ ತ್ರಿಶಂಕು ಮುಂತಾದವರ ಪುರಾಣ ಕಥೆಗಳೂ, ರಾಮಾಯಣ ಭಾರತ ಭಾಗವತ ಕಥೆಗಳೂ, ಸ್ನಾನ ಆಹ್ನಿಕ ಮುಂತಾದ ಸದಾಚಾರಕ್ಕೆ ಸಂಬಂಧಪಟ್ಟ ಧರ್ಮಶಾಸ್ತ್ರ ವಿಚಾರಗಳೂ ಇರುವುದು ಕಂಡುಬರುತ್ತದೆ. (ಶ್ರೀಮದ್ಭಾಗವತದ ಕೃಷ್ಣಕಥೆಯು ಆದ್ಯಂತವಾಗಿ ಈ ಪುರಾಣಕ್ಕೆ ಪರಿಚಿತವಾಗಿರುವುದು ಗಮನಿಸತಕ್ಕ ಅಂಶವಾಗಿದೆ.) ಇವೆಲ್ಲಕ್ಕೂ ಹಾಸುಹೊಕ್ಕಾಗಿ ನೆಯ್ದುಕೊಂಡಿರುವುದು ದೇವಿಯ ಮಹಿಮೆ : ಅವಳು ತನ್ನ ನಾನಾ ರೂಪಗಳಲ್ಲಿ, ಅವತಾರಗಳಲ್ಲಿ, ಮಾಡಿರುವ ದುಷ್ಟನಿಗ್ರಹ ಶಿಷ್ಟಪರಿಪಾಲನೆ. ಈ ಪುರಾಣದಲ್ಲಿ ಉಕ್ತರಾದ ಸೂರ್ಯ ಚಂದ್ರ ವಂಶಗಳ ರಾಜಾಧಿರಾಜರೆಲ್ಲಾ ದೇವಿಯ ಭಕ್ತರು. ಅವರಿಗೆ ಇಷ್ಟ ಪ್ರಾಪ್ತಿ ಅನಿಷ್ಟನಿವೃತ್ತಿ ಆದದ್ದು ಅವಳಿಂದ. ಇಂದ್ರ ಚಂದ್ರಾದಿ ದೇವತೆ ಗಳೂ ಬ್ರಹ್ಮ ವಿಷ್ಣು ಮಹೇಶ್ವರರೂ ಶಕ್ತಿವಂತರಾಗಿರುವುದು ದೇವಿ ಯಿಂದಲೇ ; ಸರಸ್ವತೀ ಲಕ್ಷ್ಮೀ ಪಾರ್ವತಿಯರು ದೇವಿಯ ಅಂಶಾವ ತಾರ ಮೂರ್ತಿಗಳು. ಅವಳ ಭಕ್ತರು ಆರ್ತರಾಗಿ ಮಾಡಿರುವ ಸ್ತೋತ್ರ ಗಳು ಪುರಾಣದ ಉದ್ದಕ್ಕೂ ಅಲ್ಲಲ್ಲೇ ಬರುತ್ತವೆ. ದೇವಿಯ ಪೂಜಾ ವಿಧಿ ಉಪಾಸನಾ ಕ್ರಮಗಳೂ ಹಾಗೆಯೇ ಹಲವು ಕಡೆ ಕೊಡಲ್ಪಟ್ಟವೆ.

೬

ಆಧುನಿಕ ಕಾಲದಲ್ಲಿ ಕನ್ನಡ ಸಾಹಿತ್ಯವು ಬಹುಮುಖವಾಗಿ ಬೆಳೆದಿದೆ. ಅಲ್ಲದೆ, ನಾವು ಇಂದು ನಾನಾ ದೇಶಗಳ ಸಾಹಿತ್ಯಗಳನ್ನು ಮೂಲದಲ್ಲಿಯೋ ಭಾಷಾಂತರದಲ್ಲಿಯೋ ಓದಿದ್ದೇವೆ. ಆದ್ದರಿಂದ ನಮಗೆ ಪುರಾಣದ ಎಲ್ಲಾ ಉಪಾಖ್ಯಾನಗಳೂ ರುಚಿಸದಿರಬಹುದು. ಆದರೆ ಅವುಗಳನ್ನು ಸಣ್ಣಕಥೆಗಳಾಗಿ, ಕಾದಂಬರಿಗಳಾಗಿ, ಕಂಡು ಖಂಡಿಸಬಾರದು. ಹಳೆಯ ಮರವನ್ನು ಹೊಸ ಪಯಿರಿಗೆ ಹೋಲಿಸಬಹುದೇ? ಅವುಗಳಲ್ಲಿ ಬರುವ ಕಥೆ ಧರ್ಮವನ್ನು ಬೋಧಿಸುವುದಕ್ಕೆ ಹಿನ್ನೆಲೆ ಮಾತ್ರ. ಧರ್ಮವೂ ಇಂದು ಮಡಿಯಾಗಿ ಮುದುರಿಕೊಂಡು ಕುಳಿತಿಲ್ಲ. ನಾವು ನಮ್ಮ ನಮ್ಮ ಪಂಗಡಕ್ಕೆ ಬಂದ ಮತಗ್ರಂಥಗಳನ್ನೇ ಅಲ್ಲದೆ, ಇತರ ಆಸ್ತಿಕ ನಾಸ್ತಿಕ ಭಾರತೀಯ ವಿದೇಶೀಯ ಮತಗ್ರಂಥಗಳನ್ನೆಲ್ಲಾ ಓದುತ್ತೇವೆ. ಆದ್ದರಿಂದ ಸರ್ವಮಾನವ ಸಾಧಾರಣವಾದ ಒಂದು ವಿಶ್ವಧರ್ಮದ ಕಡೆಗೆ ನಮ್ಮ ದೃಷ್ಟಿ ಹೋಗುವುದು ಸಹಜ. ಈ ದೃಷ್ಟಿಯಿಂದ ಪುರಾಣಗಳನ್ನು ಓದಿ ಅಸಾರವಾದ ಸಿಪ್ಪೆಯನ್ನು ಬಿಟ್ಟು ಸಾರವಾದ ತಿರುಳನ್ನು ಸಂಗ್ರಹಿಸುವುದು ವಿವೇಕ.

ಪುರಾಣಗಳಲ್ಲಿ ಸಾರವಾದ ಭಾಗದ ಜೊತೆಗೆ ಅಸಾರವಾದ ಭಾಗವೂ ಬೇಕಾದಷ್ಟಿದೆ; ಅಶ್ಲೀಲವೆಂದು ಹೇಳಬಹುದಾದ ಭಾಗಗಳಿವೆ; ದೇವಾಧಿದೇವತೆಗಳ ನಡತೆಯನ್ನು ಲಘುವಾಗಿ, ಆಕ್ಷೇಪಕರವಾಗಿ, ಮಾಡುವಂಥ ಉಪಾಖ್ಯಾನಗಳಿವೆ. ಇಂಥ ಆಕ್ಷೇಪಗಳನ್ನು ಎತ್ತಿ ಸಮಾಧಾನ ಹೇಳಿರುವುದು ದೇವೀಭಾಗವತದ ಒಂದು ವಿಶೇಷ ಲಕ್ಷಣ. ತನ್ನ ನಾಲ್ಕನೆಯ ಸ್ಕಂಧದಲ್ಲಿ ಅದು ಎತ್ತಿರುವ ಸಂದೇಹಗಳನ್ನು ಈ ಕೆಳಗೆ ಕೊಟ್ಟಿದೆ :—

“ಕರ್ಮ ತತ್ಪರನಾದ ವಸುದೇವನಿಗೆ ಕಾರಾಗೃಹಪ್ರಾಪ್ತಿ ಏಕಾಯಿತು? ಯಯಾತಿಕುಲದಲ್ಲಿ ಹುಟ್ಟಿದವನಾದರೂ ಕಂಸನು ಅಷ್ಟು ಕ್ರೂರಕೃತ್ಯವನ್ನೇಕೆ ಮಾಡಿದನು? ವಿಷ್ಣುವು ಸೆರೆಮನೆಯಲ್ಲಿ ಹೇಗೆ ಹುಟ್ಟಿದ? ಗೋಪಾಲ ಜೀವನವನ್ನು ಏಕೆ ಜೀವಿಸಿದ? ಮುದುಕರಾದ ತಾಯಿತಂದೆಗಳನ್ನು ಏಕೆ ಸೆರೆಯಿಂದ ಬಿಡಿಸಲಿಲ್ಲ? ದೇವರು ಹೊಟ್ಟೆ

ಯಲ್ಲಿದ್ದರೂ ಅವರು ಏಕೆ ಕಷ್ಟವನ್ನನುಭವಿಸಿದರು? ಅವರು ಮಾಡಿದ್ದ ಅಂಥ ಪ್ರಾಚೀನ ಕರ್ಮವೇನು? ಕೊಲ್ಲಲ್ಪಟ್ಟ ಆ ಮಕ್ಕಳು ಯಾರು? ದುರ್ಗಿ ಯಾರು? ಕೃಷ್ಣನು ಅಷ್ಟೊಂದು ಹೆಂಡಿರೊಡನೆ ಹೇಗೆ ಸಂಸಾರ ನಡಸಿದನು? ನರನಾರಾಯಣರು ತಮ್ಮ ದೇಹವಿದ್ದೂ ಕೃಷ್ಣಾರ್ಜುನ ರಾದದ್ದು ಹೇಗೆ? ಮತ್ತು ಏಕೆ? ಕೋಟೆಯ ಮಧ್ಯೆ ಇದ್ದ ಅರಮನೆ ಯಿಂದ ಪ್ರದ್ಯುಮ್ನನು ಅಪಹೃತನಾದದ್ದು ಹೇಗೆ? ದಿವ್ಯಚಕ್ಷುಸ್ಸುಳ್ಳ ವಾಸುದೇವನಿಗೆ ಇದು ಮೊದಲೇ ಏಕೆ ಗೊತ್ತಾಗಲಿಲ್ಲ? ಅವನ ಹೆಂಡತಿ ಯರೆಲ್ಲರನ್ನೂ ಹೇಗೆ ಕಳ್ಳರು ಹೊತ್ತುಕೊಂಡು ಹೋದರು? ಅವನು ರಾಕ್ಷಸರಿಗೆ ಹೆದರಿಕೊಂಡು ಮಥುರೆಯನ್ನು ಬಿಟ್ಟು ದ್ವಾರಕಿಗೆ ಏಕೆ ಬಂದ?

ಅಂಥ ಧರ್ಮಿಷ್ಠರೂ ವಿಷ್ಣುಭಕ್ತರೂ ಆದ ಪಾಂಡವರಿಗೆ ಏಕೆ ಕಷ್ಟಪ್ರಾಪ್ತಿಯಾಯಿತು? ಛಲದಿಂದಲೂ ಲೋಭದಿಂದಲೂ ಅವರು ಭೀಷ್ಮ ದ್ರೋಣಾದಿ ಹಿರಿಯರನ್ನು ಏಕೆ ಕೊಂದರು? ಇಂಥ ಪಾಪ ಕಾರ್ಯಕ್ಕೆ ಅವರನ್ನು ವಾಸುದೇವನು ಹೇಗೆ ಪ್ರೇರಿಸಿದನು?

ಇಂದ್ರನು ತಾಯಿಯ ಗರ್ಭವನ್ನು ಹೊಕ್ಕು ಅದನ್ನು ತುಂಡು ತುಂಡಾಗಿ ಕತ್ತರಿಸಿದನು. ವಿಷ್ಣುವು ವಾಮನನಾಗಿ ಬಲಿಯನ್ನು ಮೋಸಪಡಿಸಿದನು.— ಇವೆಲ್ಲಾ ಸರಿಯೇ?"

ಈ ಪ್ರಶ್ನೆಗಳಿಗೆ ಪುರಾಣವು ಕೊಟ್ಟಿರುವ ಉತ್ತರಗಳು ನಮಗೆ ಒಪ್ಪಿಗೆಯಾಗದಿರಬಹುದು. ಹೀಗೆಂದು ಈ ಕಥೆಗಳೆಲ್ಲಾ ಸುಳ್ಳು, ಇವುಗಳಿಂದೇನು, ಎನ್ನೋಣವೇ? ಸುಳ್ಳೆಂದು ಕೈಬಿಟ್ಟರೆ ಪುರಾಣಗಳೇ ಇರುವುದಿಲ್ಲ. ಪುರಾಣದ ಮಾತು ಹಾಗಿರಲಿ, ನಿಜವೆನ್ನಿಸಿಕೊಂಡ ಹಿಂದಿನ ಮತ್ತು ಇಂದಿನ ಚರಿತ್ರೆಯಲ್ಲಿ ನಮಗೆ ಪರಿಚಿತವಾದ ಅನೇಕ ಘಟನೆಗಳಿಗೆ, ದುರ್ಘಟನೆಗಳಿಗೆ, ನಾವು ಧಾರ್ಮಿಕವಾಗಿ, ಸಮಂಜಸ ವಾದ ಸಮಾಧಾನಗಳನ್ನು ಕೊಡಬಲ್ಲೆವೇ?

೭

ಈ ಉಪಾಖ್ಯಾನಗಳ ಸ್ವರೂಪ ಹೇಗಾದರೂ ಇರಲಿ, ಇವುಗಳ ಮೂಲಕ ಪುರಾಣವು ಎತ್ತಿ ಹಿಡಿದಿರುವುದು ಸತ್ಯ, ಧರ್ಮ, ನ್ಯಾಯ

ಇವುಗಳನ್ನು. ಪರಲೋಕವಿಲ್ಲವೆನ್ನುವವರೂ ಕೂಡ, ಇಹದಲ್ಲಿ ಸುಖ ಶಾಂತಿಗಳು ನೆಲಸಬೇಕಾದರೆ ಈ ಗುಣಗಳಿಂದಲೇ ಎಂದು ಒಪ್ಪುತ್ತಾರೆ. ಪುರಾಣಗಳು ಪ್ರತಿಪಾದಿಸುವ ಮತ್ತೊಂದು ಮೂಲಭೂತವಾದ ಸಂಗತಿ, —ಯಾರಿಗೂ ಎಂದಿಗೂ ಬಿಡಿಸಲಾಗದಿರುವ ಸಮಸ್ಯೆ—ವಿಧಿ ಪೌರುಷ ವಾದ. ಅದರ ವಿಚಾರವಾಗಿ ಇಲ್ಲಿ ಎರಡು ಮಾತು ಹೇಳಬಹುದು.

"ಮನುಷ್ಯನು ಸರ್ವಶಕ್ತ, ಅವನಿಗೆ ಮೀರಿದ್ದು ಯಾವುದೂ ಇಲ್ಲ; ಅವನಿಂದ ಯಾವುದಾದರೂ ಆಗದಿದ್ದರೆ ಅದಕ್ಕೆ ಪುರುಷಪ್ರಯತ್ನ ಸಾಲದು ಎಂದು ಅರ್ಥ; ದೈವವೆಂಬುದೇ ಇಲ್ಲ" ಎಂಬುದು ಒಂದು ಮತ. "ದೈವಕ್ಕೆ ಎದುರಿಲ್ಲ; ದೈವಸಂಕಲ್ಪವಿಲ್ಲದೇ ಒಂದೂ ನೆರವೇರು ವುದಿಲ್ಲ; ಮನುಷ್ಯನು ಅದಕ್ಕೆ ಅಧೀನ; ಚಾಲಕನ ಕೈಯ ಸಲಕರಣೆ" ಎಂಬುದು ಇನ್ನೊಂದು ಮತ. ಈ ಎರಡು ಮತಗಳನ್ನೂ ದೇವೀ ಭಾಗವತವು ಅಲ್ಲಲ್ಲಿ ಪ್ರಸ್ತಾಪಿಸಿರುತ್ತದೆ. ಉದಾಹರಣೆಗಾಗಿ,

ಚಕ್ರೀಸಮೀಪೇ ಸಂವಿಷ್ಟಾ ಸಂಸ್ಥಿತಾ ಪಿಷ್ಟಕಾರಿಣೀ ।
ಉದ್ಯಮೇನ ವಿನಾ ಪಿಷ್ಟಂ ನ ಭವತ್ಯೇವ ಸರ್ವಥಾ ॥
ಉದ್ಯಮೇ ಚ ಕೃತೇ ಕಾರ್ಯಂ ಸಿದ್ಧಿಂ ಯಾತ್ಯೇವ ಸರ್ವಥಾ ।
ಕದಾಚಿತ್ತಸ್ಯ ನ್ಯೂನತ್ವೇ ಕಾರ್ಯಂ ನೈವ ಭವೇದಪಿ ॥

(V-೨೭-೪೦, ೪೧).

ಅರ್ಥ :—ಹಿಟ್ಟುಬೀಸುವವಳು ಬೀಸುವ ಕಲ್ಲಿನ ಹತ್ತಿರ ಕುಳಿತುಕೊಂ ಡಿದ್ದ ಮಾತ್ರಕ್ಕೇ, ಪ್ರಯತ್ನವಿಲ್ಲದೇ, ಸ್ವಲ್ಪವೂ ಹಿಟ್ಟು ಆಗುವುದಿಲ್ಲ. ಪ್ರಯತ್ನಮಾಡಿದರೆ ಕಾರ್ಯಸಿದ್ಧಿಯಾಗಿಯೇ ಆಗುತ್ತದೆ. ಆ ಪ್ರಯತ್ನ ಕಡಮೆಯಾದರೆ, ಯಾವಾಗಲಾದರೂ, ಕಾರ್ಯ ಆಗದಿರುವುದೂ ಉಂಟು.

ಕಾಲೋ ನಿಮಿತ್ತಮಾತ್ರಂ ತು ದೈವಂ ಹಿ ಬಲವತ್ತರಂ ।
ದೈವೇನ ನಿರ್ಮಿತಂ ಸರ್ವಂ ನಾನ್ಯಥಾ ಭವತೀತ್ಯದಃ ॥
ದೈವಮೇವ ಪರಂ ಮನ್ಯೇ ಧಿಕ್ ಪೌರುಷಮನರ್ಥಕಂ ॥

(V-೩೧-೭, ೮).

ಅರ್ಥ :—ದೈವವೇ ಬಲವತ್ತರವಾದದ್ದು; ಎಲ್ಲವೂ ದೈವದಿಂದ ನಿರ್ಮಿತ

ವಾದದ್ದು, ಯಾವುದೂ ಅದಕ್ಕಿಂತ ಬೇರೆ ರೀತಿಯಾಗುವುದಿಲ್ಲ. ದೈವವೇ ಹೆಚ್ಚೆಂದು ನಾನು ತಿಳಿಯುತ್ತೇನೆ. ಪೌರುಷಕ್ಕೆ ಧಿಕ್ಕಾರವಿರಲಿ.

ಈ ಮತಗಳ ಸತ್ಯಾಸತ್ಯತೆಗಳನ್ನೂ ಇತಿಮಿತಿಗಳನ್ನೂ ಹೀಗೇ ಎಂದು ನಿರ್ಧರಿಸುವುದು ಅಸಾಧ್ಯ. ಗ್ರಂಥಪ್ರಮಾಣಗಳನ್ನು ಎರಡು ಕಡೆಗೂ ಕೊಡಬಹುದು; ಸೂತ್ರಗಳನ್ನೂ ಶ್ಲೋಕಗಳನ್ನೂ ಒಡ್ಡಿದ ಮಾತ್ರದಿಂದಲೇ ಸತ್ಯವನ್ನು ಸ್ಥಾಪಿಸಿದಂತಾಗುವುದಿಲ್ಲ. ಹೀಗಿರಲು, ಮಿಕ್ಕ ಹಲವೆಡೆಗಳಲ್ಲಿರುವಂತೆ ಇಲ್ಲಿಯೂ ಸತ್ಯವು ಈ ಎರಡು ಅತಿಗಳ ನಡುವೆ ಇದ್ದೀತೇ? ಹೀಗೆ, "ದೈವ ಪುರುಷಕಾರಗಳು ಗಾಡಿಯ ಎರಡು ಚಕ್ರಗಳಂತೆ; ಬಾಳಿನ ಗಾಡಿಯು ಹೋಗುವುದಕ್ಕೆ ಈ ಎರಡು ಚಕ್ರಗಳೂ ಚಲಿಸಬೇಕು; ಯಾವ ಒಂದು ಚಕ್ರವಿಲ್ಲದಿದ್ದರೂ ಗಾಡಿ ಬಿದ್ದುಹೋಗುವುದು" ಎಂದು ಹೇಳುವ ಮಧ್ಯಸ್ಥಿಕೆಯ ಒಂದು ಮತವೂ ಇದೆ. ಆದರೆ ಈ ಎರಡು ಚಕ್ರಗಳಿಗೆ ಇರುವ ಸಂಬಂಧವೆಂತ ಹುದು? ಬೈಸಿಕಲ್ ಗಾಡಿಯಲ್ಲಿ ಇರುವಂತೆ ಹಿಂದಿನ ಚಕ್ರ ತಿರುಗುವುದ ರಿಂದ ಮುಂದಿನದೂ ತಿರುಗುತ್ತದೆಯೇ? ಎಂದರೆ,

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥

(ಗೀತಾ, ೧೮-೬೧)

ಎಂಬುದು ನಿಜವೇ? ಇಲ್ಲ, 'ದೈವವೆಂಬುದು ಬೇರೆ ಇಲ್ಲ; ಪುರುಷ ಪ್ರಯತ್ನವೇ ದೈವಾಕಾರವನ್ನು ತಾಳುತ್ತದೆ; 'ಪೂರ್ವಜನ್ಮಕೃತಂ ಕರ್ಮ ತದ್ದೈವಮಿತಿ ಕಥ್ಯತೇ' ಎಂಬುದು ನಿಜವೇ? ಎಂಬ ಪ್ರಶ್ನೆ ಏಳು ತ್ತದೆ. ಇವುಗಳ ಜೊತೆಗೆ,

ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ ।
ವಿವಿಧಾಶ್ಚ ಪೃಥಕ್ ಚೇಷ್ಟಾ ದೈವಂ ಚೈವಾತ್ರ ಪಂಚಮಂ ॥

(ಗೀತಾ, ೧೮-೧೪)

ಎಂಬ, ದೈವವನ್ನು ಐದನೆಯ ಚಕ್ರವಾಗಿ ಮಾಡುವ, ಮತವೂ ಇದೆ. ಹೀಗಿರಲು, ಈ ಸಂದರ್ಭದಲ್ಲಿ—ಬ್ರಹ್ಮವಾಗಲಿ, ಭಗವತಿಯಾಗಲಿ— ಮನುಷ್ಯ ಶಕ್ತಿಗೆ ಮೀರಿದ ಮತ್ತೊಂದು ಶಕ್ತಿಯಿದೆ ಎಂದು ಒಪ್ಪಿ

ಕೊಂಡು ಕೆಲಸ ಮಾಡುವುದು ಸೂಕ್ತವಾಗಿ ಕಾಣುತ್ತದೆ* ಏಕೆಂದರೆ, ಪ್ರಪಂಚದಲ್ಲಿ ಮನುಷ್ಯನು ಹುಟ್ಟಿದ್ದು ಮೊನ್ನೆ ಮೊನ್ನೆ; ಎಂದರೆ ಜಗತ್ತು ಸೃಷ್ಟಿಯಾದ ಕೋಟ್ಯಂತರ ವರ್ಷಗಳ ಮೇಲೆ: ಅವನು ಹುಟ್ಟಿ ಇಷ್ಟು ಅಪರ ಬುದ್ಧಿವಂತನಾಗಿ 'ನಾನು ಸರ್ವಶಕ್ತ!' ಎಂದು ಕೊಚ್ಚಿಕೊಳ್ಳುವ ಹಾಗಾಗುವುದಕ್ಕಿಂತ ಮುಂಚೆ ಕೋಟ್ಯಂತರ ವರ್ಷಗಳಿಂದ ಪ್ರಪಂಚವು ತನಗೆ ಹೇಗೆ ಬೇಕೋ ಹಾಗೆ ಪರಿಣಾಮಗೊಂಡು ರೂಪುತಾಳುತ್ತಿತ್ತು. ನಿರ್ಜೀವವಾಗಿದ್ದ ಜಗತ್ತಿನಲ್ಲಿ ಜೀವ ಹುಟ್ಟಿ, ಅಣುಜೀವಿಗಳಿಂದ ಹಿಡಿದು ಪೆಡಂಭೂತಗಳವರೆಗೆ, ಅಜ್ಞಾನಿಂದ ವಿಜ್ಞಾನ ವರೆಗೆ, ನಾನಾ ವಿಧವಾದ ಅಚೇತನ ಅಲ್ಪಚೇತನ ಸುಚೇತನ ವಸ್ತುಗಳು ಹುಟ್ಟಿ ಬೆಳೆದು ನಾಶಹೊಂದಿ, ಸೃಷ್ಟಿವಿಕಾಸವು ಮುಂದುವರಿದು ಇಂದಿನ ರೂಪವನ್ನು ತಾಳಿತು. ಆವಾಗಲೆಲ್ಲಾ ಅನೇಕ ಕೋಟಿ ಬ್ರಹ್ಮಾಂಡಗಳ ಮೇಲೆ ದವಲತ್ತು ಮಾಡಲು ಈ ಚೋಟುದ್ದದ ಮನುಷ್ಯಪ್ರಾಣಿಯೇ ಇತ್ತೇ? ಅಂದಿನಿಂದ ಪರಮಾಧಿಕಾರ ನಡಸುತ್ತಿದ್ದ ಶಕ್ತಿಯು ಆ ಅಧಿಕಾರವನ್ನು ತನ್ನ ಮಗು ಸರ್ವ ಸಮರ್ಥನಾದನೆಂದು ಅವನಿಗೆ ಪೂರ್ತಿಯಾಗಿ ವಹಿಸಿಕೊಟ್ಟು ಕೈ ತೊಳೆದುಕೊಂಡು ಬಿಟ್ಟಿತೋ? ಹೀಗೆ ಹೇಳುವುದಕ್ಕೆ ಆಧಾರವೇನೂ ಇಲ್ಲ. ವಿಶ್ವದಲ್ಲಿ ಭೂಮಿ ಒಂದು ಕಣ; ಆ ಭೂಮಿಯಲ್ಲಿ ಮನುಷ್ಯನು ಒಂದು ಅಣು; ಇಂಥವನ ಅಧಿಕಾರ ಅಂಗೈ ಅಗಲದ ಭೂಮಿಯೊಂದರ ಮೇಲೆ; ಅದೂ ಸ್ವಲ್ಪ ಮಾತ್ರ. ಅವನೇನು "ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ"

* ಇದೇ ಅಭಿಪ್ರಾಯವೇ ಮುಂದಿನ ಶ್ಲೋಕದಲ್ಲಿ ಅಡಗಿರುವಂತಿದೆ: —

ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥

(ಗೀತಾ, ೧೮-೪೬).

ಅರ್ಥ—ಯಾರಿಂದ ಪ್ರಾಣಿಗಳಿಗೆ ಕಾರ್ಯದಲ್ಲಿ ಪ್ರವೃತ್ತಿಯುಂಟಾಗುತ್ತದೆಯೋ, ಯಾರಿಂದ ಈ (ಜಗತ್ತು) ಎಲ್ಲವೂ ವ್ಯಾಪ್ತವಾಗಿದೆಯೋ, ಅವನನ್ನು ತನ್ನ ಕರ್ಮದಿಂದ ಅರ್ಚಿಸಿ ಮಾನವನು ಸಿದ್ಧಿ ಹೊಂದುತ್ತಾನೆ.

ಅಲ್ಲ. ಆ ಅಗಾಧ ಕಾರ್ಯವನ್ನು ಇಂದಿಗೂ ಬೇರೊಂದು ಮಹಾಶಕ್ತಿ ನಡಸುತ್ತಿದೆ.

ಆ ಶಕ್ತಿ ಯಾವುದು? ಅದರ ಅರಿವು ಅನುಭವಗಳೇ ಜ್ಞಾನ ವಿಜ್ಞಾನಗಳ, ಮತ್ತು ಧರ್ಮದರ್ಶನಗಳ, ಅಂತಿಮಗುರಿಯಾಗಿ ಕಾಣುತ್ತದೆ.

೮

ಪುರಾಣಗಳ ಭಾಷೆ, ತಕ್ಕಮಟ್ಟಿಗೆ ಸರಳವಾಗಿಯೇ ಇರುತ್ತದೆ. ಆದರೂ, ಸಂಸ್ಕೃತವನ್ನು ತಿಳಿದ ಜನ ಸ್ವಲ್ಪವಾಗಿದ್ದು, ಆಸ್ತಿಕರೂ ಶ್ರದ್ಧಾಳುಗಳೂ ಆದ ಕನ್ನಡಿಗರು ಅರ್ಥವಿವರಣೆಗೆ ಅವರ ಸಹಾಯ ವನ್ನು ಕೋರಬೇಕಾಗಿತ್ತು. ಈಗ, ಯಾರ ಸಹಾಯವೂ ಬೇಕಿಲ್ಲದೆ, ಅವಕಾಶವಾದಾಗ ತಾವೇ ಓದಿಕೊಳ್ಳಲು ಸಾಧ್ಯವಾಗುವಂತೆ ಈ ಅನು ವಾದ ಭಾಷಾಂತರಗಳನ್ನು ಮಾಡಿಸಿ ಜೊತೆಗೆ ಮೂಲವನ್ನು ಕನ್ನಡ ಲಿಪಿಯಲ್ಲಿ ಅಚ್ಚುಹಾಕಿಸಿ ಕೊಟ್ಟಿರುವುದಕ್ಕಾಗಿ, ಕನ್ನಡಿಗರು ಶ್ರೀಮ ನ್ಮಹಾರಾಜರವರಿಗೆ ಅತ್ಯಂತ ಕೃತಜ್ಞರಾಗಿದ್ದಾರೆ. ಸಂಸ್ಕೃತದಲ್ಲಿ ಸಾರವಾದದ್ದೆಲ್ಲಾ ಹೀಗೆ ಕನ್ನಡದಲ್ಲಿ ಒದಗಿದರೆ ಸಂಸ್ಕೃತ ಬದು ಕುತ್ತದೆ, ಕನ್ನಡ ಬೆಳೆಯುತ್ತದೆ.*

* ಪುಸ್ತಕ ಪ್ರಪಂಚ—ನವೆಂಬರ್ ೧೯೪೬.

# ನಮ್ಮ ಪ್ರಕಟನೆಗಳು

೧. **ಚಂದ್ರಗುಪ್ತ ವಿಜಯ** (ಮೂರನೆಯ ಮುದ್ರಣ, ಲೇಖಕರು: **ಎಚ್.ಎಂ,** ಶಂಕರನಾರಾಯಣರಾವ್, ಎಂ. ಎ. **ಪುಟ** viii+೧೫೪ **ಬೆಲೆ** ೧-೮-೦

ನಂದರನ್ನು ಕೊಂದು ಚಂದ್ರಗುಪ್ತಮೌರ್ಯನನ್ನು ಪಾಟಲೀ ಪುರದ ಸಿಂಹಾಸನದ ಮೇಲೆ ಸ್ಥಿರವಾಗಿ ಕುಳ್ಳಿರಿಸಲು ಚಾಣಕ್ಯನೆಂಬ ಬ್ರಾಹ್ಮಣನು ಕೈಕೊಂಡ ರಾಜತಂತ್ರಗಳನ್ನು ವಿವರಿಸುವ ಈ ಐತಿಹಾಸಿಕ ಕಥೆ ಎರಡುಸಾವಿರ ವರುಷಗಳಿಗಿಂತಲೂ ಹಿಂದಿನದು. ಈ ಕಥೆಯನ್ನು ವಿಶಾಖದತ್ತನೆಂಬ ಕವಿ ಸಂಸ್ಕೃತಭಾಷೆಯಲ್ಲಿ ನಾಟಕರೂಪವಾಗಿ ಮನಸ್ಸನ್ನು ಸೆರೆಹಿಡಿಯುವಂತೆ ರಚಿಸಿದ್ದಾನೆ. ಈ ನಾಟಕವನ್ನು ಆಧಾರ ವಾಗಿಟ್ಟುಕೊಂಡು, ಈ ವಿಷಯಕ್ಕೆ ಸಂಬಂಧಿಸಿದ ನಾಲ್ಕಾರು ಗ್ರಂಥ ಗಳನ್ನು ಉಪಯೋಗಿಸಿಕೊಂಡು ಈ ಚಿಕ್ಕ ಪುಸ್ತಕವನ್ನು ಬರೆದಿದೆ.

ಈ ಗ್ರಂಥ No. L. Dis, A 5-813/47-48: 30-8-47ರ ರೆವಿನ್ಯೂ ಕಮಿಷನರ ಅಪ್ಪಣೆಯ ಮೇರೆಗೆ ಸಂಸ್ಥಾನದ ಎಲ್ಲ ಗ್ರಾಮ ಪಂಚಾಯಿತಿಗಳ ಪುಸ್ತಕಭಂಡಾರಗಳಿಗೂ ಮಂಜೂರಾಗಿದ.

T. B. C. 43/47-48-25 Nov 47 ಅಪ್ಪಣೆಯ ಮೇರೆ ಈ ಗ್ರಂಥ ಸಂಸ್ಥಾನದ ಹೈ, ಮಿಡಲ್, ಪ್ರೈಮರಿ, ನಾರ್ಮಲ್ ಸ್ಕೂಲು ಗಳ ಪುಸ್ತಕ ಭಂಡಾರಗಳಿಗೆ ಮಂಜೂರಾಗಿದೆ.

೨. **ಉದ್ಯೋಗಪರ್ವ ಸಂಗ್ರಹ** (ದ್ವಿತೀಯ ಮುದ್ರಣ) ಸಂಪಾದಕರು : ಎಚ್.ಎಂ. ಶಂಕರನಾರಾಯಣರಾವ್ ಎಂ. ಎ., ಟಿ. ಎಸ್. ಶಾಮರಾವ್, ಬಿ.ಎ. (ಆನರ್ಸ್) liv+೯೬. ಬೆಲೆ ೧-೪-೦
ಪ್ರಕಾಶಕರು : ಕಾವ್ಯಾಲಯ, ಮೈಸೂರು.

'ಕನ್ನಡ ಸಾಹಿತ್ಯಾಭಿಮಾನಿಗಳೆಲ್ಲ ಸಂಗ್ರಹಿಸಲೇ ಬೇಕಾದ ಸಂಗ್ರಹ ಇದು' —ವಾಹಿನಿ

೩. **ಬೇಬಿ ಮತ್ತು ಇತರ ಚಿತ್ರಗಳು**—ಲೇಖಕರು : ಎಸ್. ಸೂರಪ್ಪ. ಬೆಲೆ ೦-೧೨-೦.

೪. **ಆದಿಪರ್ವ ಸಂಗ್ರಹ**--ಸಂಪಾದಕರು: ಎಚ್.ಎಂ. ಶಂಕರ ನಾರಾಯಣರಾವ್ ಎಂ.ಎ., ಟಿ.ಎಸ್. ಶಾಮರಾವ್ ಬಿ.ಎ, (ಆನರ್ಸ್), ಡಿ. ವಿ. ಶೇಷಗಿರಿರಾವ್ ಬಿ.ಎ. xlviii+೧೪೪ ಬೆಲೆ ೧-೮-೦

'ಸಂಗ್ರಹಕಾರ್ಯ ತೃಪ್ತಿಕರವಾಗಿದೆ.' —ಪುಸ್ತಕಪ್ರಪಂಚ

No. L- Dis. A 5—813/47—48, 30—8—47 ರೆವಿನ್ಯೂ ಕಮಿಷನ್ನರ ಅಪ್ಪಣೆಯ ಮೇರೆಗೆ ಈ ಗ್ರಂಥ ಸಂಸ್ಥಾನದ ಎಲ್ಲ ಗ್ರಾಮ ಪಂಚಾಯಿತಿಗಳ ಪುಸ್ತಕಭಂಡಾರಗಳಿಗೂ ಮಂಜೂರಾಗಿದೆ.

T.B.C. 43 47-48-25 Nov 47 ಅಪ್ಪಣೆಯ ಮೇರೆಗೆ ಈ ಸಂಗ್ರಹ ಹೈ, ಮಿಡಲ್, ನಾರ್ಮಲ್ ಸ್ಕೂಲುಗಳ ಪುಸ್ತಕ ಭಂಡಾರಗಳಿಗೆ ಮಂಜೂರಾಗಿದೆ.

**೫. ಸುವರ್ಣ ಸಂಪುಟ**—(ಸಣ್ಣಕಥೆಗಳ ಸಂಗ್ರಹ) ಲೇಖಕರು : ಎಚ್. ದೇವೀರಪ್ಪ ಎಂ.ಎ. ಪ್ರಕಾಶಕರು : ಸಾಹಿತ್ಯ ಮಂದಿರ, ಮೈಸೂರು. ಬೆಲೆ ೧-೮-೦

**ಕಥಾವಲ್ಲರಿ**-ಲೇಖಕರು: ತ.ಸು. ಶಾಮರಾಯ ಬಿ.ಎ. (ಆನರ್ಸ್) ಪುಟಗಳು viii + ೧೪೪ ಬೆಲೆ ೧-೮-೦.

'ಈ ಪುಸ್ತಕದಲ್ಲಿರುವ ಕಥಾಸಂಗ್ರಹಗಳು ಉನ್ನತಮಟ್ಟದವುಗಳಾಗಿವೆ.' —ತಾಯಿನಾಡು

'ಶೈಲಿ ಸುಲಭವಾದ ಹೊಸ ಕನ್ನಡ. ನಿರೂಪಣೆ ಸರಸವಾಗಿದೆ. ವಿಷಯ ಮಹಾಕಾವ್ಯಗಳ ತಿರುಳಾಗಿದೆ. ಆದುದರಿಂದ ಗ್ರಂಥವು ಸ್ವಾಗತಾರ್ಹವಾಗಿದೆ' —ಶರಣಸಾಹಿತ್ಯ

**೭ ಹಳ್ಳಿಯ ಬದುಕು**-ಲೇಖಕರು: ಎಚ್. ದೇವೀರಪ್ಪ ಎಂ.ಎ. ಪುಟ ೧೩೪ ಬೆಲೆ ೧-೮-೦ ಮಾರಾಟಗಾರರು: ಎಚ್. ವೆಂಕಟರಾಮಯ್ಯ ಅಂಡ್ ಸನ್ಸ್, ವಿದ್ಯಾನಿಧಿ ಬುಕ್ ಡಿಪೋ, ಮೈಸೂರು.

**೮ ಸಭಾಪರ್ವ ಸಂಗ್ರಹ**—ಸಂಪಾದಕರು: ಎಚ್.ಎಂ. ಶಂಕರನಾರಾಯಣರಾವ್ ಎಂ.ಎ., ಟಿ.ಎಸ್. ಶಾಮರಾವ್ ಬಿ.ಎ. (ಆನರ್ಸ್) ಡಿ.ವಿ. ಶೇಷಗಿರಿರಾವ್ ಬಿ.ಎ. ಬೆಲೆ ೨ ೦-೦

**೯ ಲಕೀಲಕ್ಷ್ಮನ್** ನಾಟಕಕಾರರು: ಕ್ಷೀರಸಾಗರ ಬೆಲೆ೦-೧೦-೦

**೧೦ ಭಾರತದ ಜನಕಿ**—ಲೇಖಕರು: ಜಿ.ಎನ್. ಕೃಷ್ಣಮೂರ್ತಿ, ಎಂ.ಎ. ಬೆಲೆ ೦-೮-೦